ಅಂತರ ಭಾರತೀಯ ಪುಸ್ತಕಮಾಲೆ

# ಕಥಾ ಭಾರತೀ

# ತಮಿಳು ಕಥೆಗಳು

ಸಂಕಲನ:

ಮಿ. ಪಾ. ಸೋಮಸುಂದರಮ್

ಅನುವಾದ:

ಶೇಷನಾರಾಯಣ



ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ

ಮೊದಲ ಮುದ್ರಣ: 1971 (ಶಕ 1893)
ದ್ವಿತೀಯ ಮುದ್ರಣ: 1991 (ಶಕ 1912)

ರೂ. **17.00**

*Original Title in Tamil* : Tamil Sirukathaigal

*Compiled by* Mi. Pa. Somasundaram

*Kannada Translation* : TAMILU KATHEGALU

ನಿರ್ದೇಶಕರು, ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ,
ಎ-5, ಗ್ರೀನ್ ಪಾರ್ಕ್, ಹೊಸ ದೆಹಲಿ 110 016,
ಇವರಿಂದ ಪ್ರಕಟಿತ

# ಮುನ್ನುಡಿ

ಪ್ರಪಂಚದ ಎಲ್ಲ ಭಾಷೆಗಳಲ್ಲಿಯೂ ಸಣ್ಣ ಕಥೆ ತನ್ನದೇ ಸ್ಥಾನವನ್ನು ಪಡೆದು, ಜನರ ಮೆಚ್ಚುಗೆಗೆ ಪಾತ್ರವಾಗಿದೆ. ಇದಕ್ಕೆ ಕಾರಣ ಇಂದಿನ ಯುಗದ ಗದ್ಯಸಾಹಿತ್ಯದಲ್ಲಿ, ಸಣ್ಣ ಕಥೆ ಹೊಸ ಬಗೆಯ ಮೆರುಗನ್ನು ಪಡೆದು ಈ ಪ್ರಾಕಾರದಲ್ಲಿ ವೃದ್ಧಿಗೊಳ್ಳುತ್ತಿದೆ.

ಇತರ ಭಾರತೀಯ ಭಾಷೆಗಳಲ್ಲಿ ಇರುವಂತೆಯೆ, ತಮಿಳಿನಲ್ಲಿಯೂ ಸಣ್ಣ ಕಥೆ ವೇಗವಾದ ಬೆಳವಣಿಗೆಯಲ್ಲಿದೆ. ಇದಕ್ಕೆ ಮೊದಲು ಸಣ್ಣ ಕಥೆ ಎನ್ನುವ ಕಲೆ ತಮಿಳುನಾಡಿನಲ್ಲಿ ಎಷ್ಟೋ ಶತಮಾನಗಳಿಂದ ಬಾಯಿಂದ ಬಾಯಿಗೆ ಹೇಳುವ ರೀತಿಯಲ್ಲಿ ಇದ್ದಿತಾದರೂ, ಈಗಿನ ರೀತಿಯಲ್ಲಿ ವೈವಿಧ್ಯದಲ್ಲಿ ಪಾಶ್ಚಾತ್ಯ ಸಾಹಿತ್ಯ ಪ್ರಭಾವದಿಂದ ಅದು ಒಂದು ರೂಪವನ್ನು ಪಡೆದು ಹೊಸ ಹೊಸ ಕಲ್ಪನೆಗಳಿಂದ ಮಾಧುರ್ಯವನ್ನು ತುಂಬಿಕೊಂಡಿದೆ. ಹೊಸ ನಾದದ ಝೇಂಕಾರವಾಗಿದೆ.

ಸಮೀಪದಲ್ಲಿ ಒಂದು ಮುಖ್ಯವಾದ ಸಾಂಸ್ಕೃತಿಕ ಸಂಸ್ಥೆಯವರು ನಡೆಸಿದ ಸಮೀಕ್ಷೆಯಲ್ಲಿ, ತಮಿಳಿನಲ್ಲಿ ಪ್ರತಿ ವರ್ಷವೂ ಸಾವಿರಕ್ಕೆ ಮೀರಿದ ಸಣ್ಣ ಕಥೆಗಳು ಪ್ರಕಟವಾಗುತ್ತವೆ ಎಂದು ಲೆಕ್ಕಾಚಾರ ಹಾಕಿದ್ದಾರೆ. ಸಂಖ್ಯೆ ಜಾಸ್ತಿಯಾಯಿತು ಎಂದರೂ, ಈ ಸಹಸ್ರದಲ್ಲಿ ಎಷ್ಟು ಶಾಶ್ವತವಾಗಿ ನಿಲ್ಲುತ್ತವೆ ಎನ್ನುವುದು ಮುಖ್ಯ ಪ್ರಶ್ನೆ. ಆದರೂ ಹೀಗೆ ಪ್ರತಿ ವರ್ಷ ಹೊರಬರುತ್ತಿರುವ ಸಾವಿರಾರು ಸಣ್ಣ ಕಥೆಗಳಲ್ಲಿ, ಕಳೆದ ಮೂವತ್ತು-ನಾಲ್ವತ್ತು ವರ್ಷಗಳಿಂದ ಹೊರಬಂದಿರುವ ಈ ಸಾಹಿತ್ಯವಿಭಾಗದಲ್ಲಿ ಇಪ್ಪತ್ತು ಕಥೆಗಳನ್ನು ಆಯ್ದು ವೆಂದರೆ ಅದು ತೊಡಕಿನ ಪ್ರಶ್ನೆಯೇ ಸರಿ. ಎಷ್ಟೋ ಜನ ಒಳ್ಳೆಯ ಕಥೆಗಾರರೂ, ಒಳ್ಳೆಯ ಕಥೆಗಳೂ ಈ ಸಂಗ್ರಹದಲ್ಲಿ ಬಿಟ್ಟುಹೋಗುವುದು ಸಹಜವೇ. ಹೀಗೆ ಯಾವುದನ್ನು ಶೇಖರಿಸುವುದು ಯಾವುದನ್ನು ಬಿಡುವುದು ಎನ್ನುವುದು ನನಗೆ ಕಠಿಣವಾದ ಸಮಸ್ಯೆಯಾಗಿತ್ತು.

ಈ ಸಂಗ್ರಹದಲ್ಲಿನ ಇಪ್ಪತ್ತು ಕಥೆಗಳನ್ನು ಆರಿಸುವುದರಲ್ಲಿ ನನಗೆ ಈ ಶ್ರಮ ಏರ್ಪಟ್ಟಿತು. ಆದರೂ ನಾನು ಆಯ್ದವುಗಳಲ್ಲಿ ಕೆಲವನ್ನು ಸೇರಿಸಲು ಮತ್ತು ಕೈಬಿಡಲು ಶ್ರೀ ಕೆ. ಸ್ವಾಮಿನಾಥನ್ ಮತ್ತು ಡಾ॥ ಮು. ವರದರಾಜನಾರ್ ಸೂಚಿಸಿದ ಕೆಲವು ಸಲಹೆಗಳು ನನಗೆ ಪ್ರಯೋಜನಕ್ಕೆ ಬಂದಿತು. ಒಂದು ಮಾತು, ಈ ಇಪ್ಪತ್ತು ಕಥೆಗಳು ನಾವು ನೆನೆಸಿದ ಗಾತ್ರಕ್ಕೆ ಸರಿಹೋಗಲಿಲ್ಲ, ಎನ್ನುವುದು ಮಾತ್ರ ನಿಜ. ಎರಡನೆಯದು, ಈ ಸಂಗ್ರಹ ಹೊರಬರುವಾಗ ಈ ಕೊರತೆ ಪೂರ್ಣವಾಗುತ್ತದೆಂದೂ ಸಂಗ್ರಹದಲ್ಲಿನ ಕಥೆಗಳು ತೃಪ್ತಿತರುತ್ತವೆಂದೂ ನಾನು ಭಾವಿಸುತ್ತೇನೆ.

ನಾನು ಮೆಚ್ಚಿದ ಅನೇಕ ಕಥೆಗಳನ್ನು ಅವುಗಳ ಗಾತ್ರ, ಸಂಖ್ಯೆ—ಈ ದೃಷ್ಟಿಯಿಂದ ಕೈಬಿಡಬೇಕಾಗಿ ಬಂದರೂ, ಆರಿಸಿದ ಈ ಇಪ್ಪತ್ತು ಕಥೆಗಳು ತುಂಬಾ ಶ್ರೇಷ್ಠವಾದುವು

ಎನ್ನುವುದು ನನ್ನ ಎಣಿಕೆ. ಇಲ್ಲಿ ಮತ್ತೊಂದು ಅಂಶವನ್ನು ನಾವು ಮುಖ್ಯವಾಗಿ ಗಮನಿಸಬೇಕು. ಅದು, ನ್ಯಾಷನಲ್ ಬುಕ್ ಟ್ರಸ್ಟಿನ ಅಧ್ಯಕ್ಷರಾದ ಶ್ರೀ ಬಿ. ವಿ. ಕೇಸ್ಕರ್ ಅವರು, ಇಂಥ ಸಂಗ್ರಹದ ಆವಶ್ಯಕತೆಯನ್ನು ಸೂಚಿಸಿದಾಗ, ತಮ್ಮ ಮುಖ್ಯ ಉದ್ದೇಶವನ್ನು ಅವರು ನನಗೆ ವಿವರಿಸಿದ್ದರು. ಇಂಥ ಸಂಗ್ರಹ ಮತ್ತೊಂದು ಭಾಷೆಗೆ ಅನುವಾದ ಆಗು-ವಾಗ, ಅನುವಾದಕ್ಕೆ ಸರಳ ರೀತಿಯಲ್ಲಿ ಕಥೆಗಳು ಇರಬೇಕೆಂದು, ತಮಿಳುನಾಡಿನ ಆಚಾರ ವಿಚಾರಗಳನ್ನು ಪ್ರತಿಬಿಂಬಿಸಲು ಸಹಾಯಕವಾಗಿರಬೇಕೆಂದೂ ಅಧ್ಯಕ್ಷರು ಅಪೇಕ್ಷಿಸಿದ್ದರು. ಈ ಉದ್ದೇಶಕ್ಕೆ ಅನುಗುಣವಾಗಿ ನಾನು ಇಂಥ ಕಥೆಗಳನ್ನು ಆಯ್ದು ಈ ಸಂಗ್ರಹದಲ್ಲಿ ಸೇರಿಸಿದ್ದೇನೆ.

ಇಲ್ಲಿನ ಇಪ್ಪತ್ತು ಕಥೆಗಳ ಲೇಖಕರು ಯಾರು ಎಂದು ತಿಳಿದುಕೊಳ್ಳುವುದಕ್ಕಾಗಿ ಕಥೆಗಾರರ ಸೂಕ್ಷ್ಮ ಪರಿಚಯವನ್ನೂ ಕೊಡಲಾಗಿದೆ. ನಮ್ಮ ಕಥೆಗಾರರು ತಮ್ಮದೇ ಆದ ವಿಶಿಷ್ಟ ಶೈಲಿಯಲ್ಲಿ ಎಂಥ ಸೃಷ್ಟಿಗಳನ್ನು ಸೃಷ್ಟಿಸಿದ್ದಾರೆ ಎನ್ನುವುದನ್ನು ಈ ಸಂಗ್ರಹದಲ್ಲಿನ ಕಥೆಗಳಲ್ಲಿ ಕಾಣಬಹುದಾಗಿದೆ.

ತಮಿಳಿನಲ್ಲಿರುವ ಸಣ್ಣ ಕಥೆಗಳು ಯಾವ ರೀತಿಯಲ್ಲಿ ಶ್ರೇಷ್ಠತಮವಾಗಿವೆ ಎಂದು ಮತ್ತೊಂದು ಭಾಷೆಯವರು ಅರಿತು ಮೆಚ್ಚುಗೆ ಸೂಚಿಸಿದರೆ ಸಾಕು, ಅದೇ ಒಂದು ಭಾಗ್ಯವೆಂದು ನಾನು ಭಾವಿಸುತ್ತೇನೆ. ಆ ರೀತಿಯಲ್ಲಿ ಭಾರತದ ಐಕ್ಯತೆಗೆ ಇಂಥ ಬರವಣಿಗೆಯಿಂದಲೂ ಪ್ರಯೋಜನವಿದೆ ಎನ್ನುವುದು ನನ್ನ ಭಾವನೆ.

ನಮ್ಮ ಸೋದರ ಕಥೆಗಾರರ ಪರಿಚಯವನ್ನು ಇತರ ಭಾರತೀಯ ಭಾಷೆಗಳ ಲೇಖಕರು ಇಲ್ಲಿನ ಕಥೆಗಳ ಮೂಲಕ ಪರಿಚಯಮಾಡಿಕೊಳ್ಳಲು ನೆರವಾದ ನ್ಯಾಷನಲ್ ಬುಕ್ ಟ್ರಸ್ಟ್ ಸಂಸ್ಥೆಗೂ ಅದರ ಅಧ್ಯಕ್ಷರಾದ ಬಿ. ವಿ. ಕೇಸ್ಕರ್ ಅವರಿಗೂ ನಾನು ಆಭಾರಿಯಾಗಿದ್ದೇನೆ. ನನ್ನ ಕೆಲಸದಲ್ಲಿ ನೆರವಾದ ಲೇಖಕ ಮಿತ್ರರಿಗೂ ನಾನು ವಂದನೆಗಳನ್ನು ಸಲ್ಲಿಸುತ್ತೇನೆ.

ಮೀ. ಪ. ಸೋಮಸುಂದರಂ

# ವಿಷಯಸೂಚಿ

# ದೇವಾನ್ನೆ

ರಾಮನಾಥ ಅಯ್ಯರ್ ಮತ್ತು ಅವರ ಪತ್ನಿ ಸೀತಾಲಕ್ಷ್ಮಿ, ತಮ್ಮ ಕಾರಿನಲ್ಲಿ ಚೈನಾ ಬಜಾರಿಗೆ ಹೋಗಿದ್ದು, ಅಲ್ಲಿ ಕೆಲವು ಸಾಮಾನುಗಳನ್ನು ಕೊಂಡ ಬಳಿಕ, ಅಲ್ಲಿಯೆ ಇದ್ದ ಒಂದು ಫಲಾಹಾರ ಮಂದಿರದಲ್ಲಿ ಟಿಫನ್ ಮುಗಿಸಿ ಮತ್ತೆ ಕಾರನ್ನೇರಿದರು.

"ಸಮುದ್ರ ದಂಡೆಗೆ ಹೋಗೋಣವೆ?" ಎಂದು ಕೇಳಿದರು ಅಯ್ಯರ್.

"ಸಮುದ್ರ ದಂಡೆಗೊ? ಆಗಬಹುದು. ಜನಸಂದಣಿ ಇಲ್ಲದ ಜಾಗ ನೋಡಿ ಕಾರನ್ನು ನಿಲ್ಲಿಸಿ, ಗಿಜುಗಿಜು ಎನ್ನುವ ಪರಿಸರವನ್ನು ನೋಡಿದರೇ ನನಗೆ ಹಿಡಿಸುವುದಿಲ್ಲ. ಅದೋ ನೋಡಿ, ಆತ ಆಟದ ಬೊಂಬೆಗಳನ್ನು ಮಾರಾಟ ಮಾಡುತ್ತಿದ್ದಾನಲ್ಲ, ಅದರಲ್ಲಿ ಎರಡನ್ನು ತೆಗೆದುಕೊಳ್ಳಿ. ಹುಡುಗರಿಗೆ ಕೊಡೋಣ" ಎಂದಳು ಸೀತಾಲಕ್ಷ್ಮಿ.

ಆಕೆ ಈ ಮಾತುಗಳನ್ನು ಹೇಳಿ ಮುಗಿಸುವುದರೊಳಗೆ ಆ ಬೊಂಬೆ ವ್ಯಾಪಾರಿಯೆ ತನ್ನ ಕೈಗಾಡಿಯನ್ನು ತಳ್ಳಿಕೊಂಡು ಇವರ ಬಳಿ ಬಂದ. ಕಾರಿನಲ್ಲಿ ಕುಳಿತ ಹಾಗೆಯೆ ಆಟದ ಸಾಮಾನುಗಳನ್ನು ಬೆಲೆಮಾತಾಡಿ, ಚೌಕಾಶಿ ಮಾಡಿ ಕೊಂಡದ್ದಾಯಿತು. ಆಗ ಕಾರಿನ ಮತ್ತೊಂದು ಬದಿಯಲ್ಲಿ ಒಬ್ಬ ಭಿಕ್ಷುಕಿ ಮಗುವನ್ನು ಕಂಕುಳಲ್ಲಿ ಹಾಕಿಕೊಂಡು "ಅಮ್ಮಾ, ಧರ್ಮ ಮಾಡೀ ತಾಯಿ. ಮಗುವಿಗೆ ಏನಾದರೂ ದಾನ ಮಾಡೀ ತಂದೇ." ಎಂದು ಕೂಗಿಕೊಂಡರು.

ಆಗ "ಇದೆಲ್ಲ ಏನು ಜಪಾನ್ ಬೊಂಬೆಗಳೊ?" ಎಂದು ರಾಮನಾಥ ಅಯ್ಯರ್ ಆ ವ್ಯಾಪಾರಿಯನ್ನು ಕೇಳುತ್ತಿದ್ದರು.

"ಹೌದು ಸ್ವಾಮೀ, ನಮ್ಮ ಊರಿನಲ್ಲಿ ಇಂಥದ್ದನ್ನೂ ಮಾಡುತ್ತಾರೆಯೇ?" ಎಂದ ಆ ವ್ಯಾಪಾರಿ.

ಭಿಕ್ಷುಕಿ ಮತ್ತೆ ಕೂಗಿಕೊಂಡಳು:

"ವ್ಯಾಪಾರ ಮಾಡ್ತೋ ಇರೋವಾಗ ಮಧ್ಯೆ ಇದೇನು ಶನಿ? ಛೆ ಛೆ, ಈಗಂತೂ ಪಟ್ಟಣದಲ್ಲಿ ಈ ಭಿಕ್ಷುಕರ ಹಾವಳಿ ಬಹಳವಾಗಿ ಹೋಯ್ತು" ಎಂದು ಸಿಡುಕಿದಳು ಸೀತಾಲಕ್ಷ್ಮಿ.

"ಹಸಿವು ನೋಡಿ ತಾಯೀ. ಏನಾದರೂ ದಾನ ಮಾಡಿರಮ್ಮಾ. ನೀನು ಮಹಾ ರಾಣಿಯಾಗಿ ಇರ್ತೀಯಾ" ಎಂದಳು ಭಿಕ್ಷುಕಿ

"ನೀನು ಈ ಜಾಗ ಬಿಟ್ಟು ಹೋಗ್ತೀಯೋ ಅಥವಾ ಆ ಪೋಲೀಸಿನವನನ್ನು ಕೂಗಿ ಓಡಿಸಲೊ?" ಎಂದಳು ಸೀತಾಲಕ್ಷ್ಮಿ.

"ಹಾಲಿಲ್ಲದೆ ಈ ಕೂಸು ಒದ್ದಾಡ್ತಾ ಇದೆ ತಾಯೀ. ಒಂದಾಣೆ ಧರ್ಮ ಮಾಡೀ ಅಮ್ಮಾ. ಎಷ್ಟೋ ಖರ್ಚು ಮಾಡ್ತೀರಿ......"

ಬೆಲೆ ಮಾತಾಡಿ ಕಾರಿನೊಳಗೆ ಬೊಂಬೆಯ ಸಾಮಾನುಗಳನ್ನು ಹಾಕಿಕೊಂಡು "ನಡೆ, ಬೀಚಿಗೆ ಹೋಗೋಣ" ಎಂದರು ರಾಮನಾಥ ಅಯ್ಯರ್.

ಕಾರಿನ ಚಾಲಕ, ಭಿಕ್ಷುಕಿಯನ್ನು ಗದರಿಸುತ್ತ ಕಾರನ್ನು ಚಾಲನೆ ಮಾಡಿದ.

"ಅಮ್ಮಾ, ಅಮ್ಮಾ" ಎನ್ನುತ್ತ ಆ ಭಿಕ್ಷುಕಿ ಸ್ವಲ್ಪ ದೂರ ಆ ಕಾರಿನೊಂದಿಗೇ ಓಡಿ ಬಂದಳು.

"ಓಡಬೇಡ, ಕಾರಿನ ಚಕ್ರಕ್ಕೆ ಸಿಕ್ಕಿ ಸತ್ತುಹೋದಿಯ" ಎಂದರು ರಾಮನಾಥ ಅಯ್ಯರ್. ಈಗತಾನೆ ಅವರು ಆ ಭಿಕ್ಷುಕಿಯ ಮುಖವನ್ನು ಚೆನ್ನಾಗಿ ನೋಡಿದರು. ನೋಡಿದರೆ ಈಕೆಯನ್ನು ಅವರು ಎಲ್ಲಿಯೋ ನೋಡಿದ ನೆನಪು.

ಕಾರು ವೇಗವಾಗಿ ಚಲಿಸುತ್ತಿದ್ದಂತೇ "ಅಯ್ಯೋ ಪಾಪ, ಇನ್ನೂ ಸಣ್ಣ ಹುಡುಗಿ. ಮುಖ ನೋಡಿದರೆ ಎಲ್ಲೋ ನಮ್ಮ ಊರಿನವಳ ಹಾಗೆ ಕಾಣುತ್ತದೆ" ಎಂದರು ಅಯ್ಯರ್.

"ಯಾವ ಊರೋ ಏನು ಕತೆಯೊ? ಅವಳ ಯೋಚನೆ ನಮಗೇಕೆ? ಎಲ್ಲಿ, ಈ ಕಡೆ ಕೊಡಿ. ಆದೇನು ವಿಮಾನವೊ? ಕೀಲಿ ಕೊಟ್ಟು ಹಾರಿಸುವಂಥದೋ ಅಥವಾ ಬರೀ ಬೊಂಬೆಯೊ?" ಎನ್ನುತ್ತ ಸೀತಾಲಕ್ಷ್ಮಿ ಪ್ರತಿಯೊಂದು ಬೊಂಬೆಗಳನ್ನೂ ಪರೀಕ್ಷಿಸತೊಡಗಿದಳು.

ಸಮುದ್ರ ದಂಡೆಗೆ ತಲಪಿದ ಮೇಲೆ ಅವರು ಕಾರಿನಿಂದ ಇಳಿದು ಮಳಲಲ್ಲಿ ಉದ್ದಕ್ಕೂ ನಡೆದರು.

## 2

ಸೇಲಂನಲ್ಲಿ, ಪೊನ್ನಮ್ಮಪೇಟೆಯ ಪೆರಿಯಣ್ಣ ಮೊದಲಿಯಾರ್ ಬೀದಿಯಲ್ಲಿ, ಒಂದು ಬಡ ಕುಟುಂಬ, ನೇಯ್ಗೆಯವರದು. ಅದರ ಯಜಮಾನ ವೈಯಾಪುರಿಗೆ ವಯಸ್ಸು ಮೂವತ್ತು. ಅವನ ತಂಗಿ ದೇವಾನೈಗೆ ಇಪ್ಪತ್ತು.

ಅವಳಿಗೆ ಮದುವೆಯಾಗಿಲ್ಲ. ಇವರಿಗೆ ತಾಯಿಯೂ ಇದ್ದಾಳೆ, ಹೆಸರು ಪಳನಿಯಮ್ಮ. ತಮ್ಮ ಕುಲವೃತ್ತಿಯಿಂದ ಇವರು ಜೀವನ ನಡೆಸುತ್ತಿದ್ದಾರೆ. ವಾರಕ್ಕೆ ನಾಲ್ಕು ರೂಪಾಯಿಗಳನ್ನು ಸಂಪಾದಿಸುತ್ತಿದ್ದಾರೆ.

ಬರಬರುತ್ತಾ ನೆಯ್ಗೆಯ ವ್ಯಾಪಾರ ಹೀನ ಸ್ಥಿತಿಗೆ ಇಳಿಯಿತು. ನೂಲು ಸಿಕ್ಕದೆ, ಕೆಲಸವಿಲ್ಲದೆ, ಹಲವು ಮಗ್ಗಗಳು ಬಿಕೋ ಎಂದುವು. ವೈಯಾಪುರಿಗೂ ಅಷ್ಟೆ. ಈಗ ಕೆಲಸವಿಲ್ಲದ ಹಾಗಾಯಿತು.

ದೇವಾನೈ ಎರಡು ಬ್ರಾಹ್ಮಣರ ಮನೆಗಳಲ್ಲಿ ಕಸ ಮುಸುರೆ ಕೆಲಸಕ್ಕೆ ನಿಂತಳು.

ಅದರಲ್ಲಿ ಅವಳಿಗೆ ತಿಂಗಳಿಗೆ ಮೂರು ರೂಪಾಯಿ ಸಿಗುತ್ತಿತ್ತು. ಮತ್ತೊಂದು ಮನೆಯಲ್ಲಿ ಪಳನಿಯಮ್ಮ. ಅವಳಿಗೆ ಒಂದೇ ರೂಪಾಯಿ.

ವೈಯಾಪುರಿ ಕೈಮಗ್ಗದ ಮಾಲಿಕರುಗಳಲ್ಲಿ ಕೆಲಸಕ್ಕಾಗಿ ಅಲೆದ. ಎಲ್ಲೂ ಕೆಲಸ ಸಿಗದಿರಲು, ತಾಯಿಗೆ ಹೇಳಿ, ಬೆಂಗಳೂರಿಗೆ ಹೊರಟ. ಬೆಂಗಳೂರಿನಲ್ಲಿ ಯಾವುದಾದರೊಂದು ಕಾರ್ಖಾನೆಯಲ್ಲಾದರೂ ಕೆಲಸಕ್ಕೆ ಪ್ರಯತ್ನಿಸೋಣ ಎಂದು ಅವನ ಕೂಡ ಮತ್ತೆ ಕೆಲವರೂ ಸೇಲಂನಿಂದ ಹೊರಟರು.

ಸ್ವಲ್ಪ ದಿನಗಳು ಕಳೆದು ತನಗೆ ಗಿರಣಿಯಲ್ಲಿ ಒಂದು ಕೆಲಸ ಸಿಕ್ಕಿದೆ ಎಂದು ವೈಯಾಪುರಿ ಊರಿಗೆ ಕಾಗದ ಬರೆದ. ಅವನಿಗೆ ಓದು ಬರೆಹ ಗೊತ್ತಿದೆ. ಬಾಲ್ಯದಲ್ಲಿ ಅವನನ್ನು ತಂದೆ ಪೊನ್ನಮ್ಮಪೇಟೆಯ ಶಾಲೆಯಲ್ಲಿ ಸೇರಿಸಿದ್ದರು. ಆ ಕಾಲದಲ್ಲಿ ನೇಯ್ಗೆಯವರ ಪರಿಸ್ಥಿತಿ, ಜೀವನ, ಇಷ್ಟು ಕಷ್ಟವಾಗಿರಲಿಲ್ಲ.

"ಬಹಳ ಕಷ್ಟಪಟ್ಟು ಯಾರು ಯಾರಿಗೋ ಲಂಚ ತೆತ್ತು ಮಿಲ್ಲಿನಲ್ಲಿ ಕೆಲಸಕ್ಕೆ ಸೇರಿದ್ದೇನೆ, ದಿನಕ್ಕೆ ಎಂಟಾಣೆ ಕೂಲಿ. ತಿಂಗಳಿಗೆ ಇಪ್ಪತ್ತಾರು ದಿನಗಳ ಕೆಲಸ. ಆದುದರಿಂದ ಹದಿಮೂರು ರೂಪಾಯಿ ನನಗೆ ಸಿಗುತ್ತದೆ. ಈ ತಿಂಗಳ ಸಂಬಳ ನಾನು ಮಾಡಿರುವ ಸಾಲಗಳಿಗೆ ಖರ್ಚಾಗುತ್ತದೆ. ಮುಂದಿನ ತಿಂಗಳಿಂದ ನಿಮಗೆ ಎರಡು ರೂಪಾಯಿ ಕಳಿಸಲು ಸಾಧ್ಯವಾಗುತ್ತದೆ. ದೇವರು ಇದ್ದಾನೆ" ಎಂದು ವೈಯಾಪುರಿ ಬರೆದ ಕಾಗದವನ್ನು ನೆರೆಮನೆ ಮಾರಿಯಪ್ಪ ಮೊದಲಿಯಾರ್ ಮಗಳು ಓದಿದಾಗ ಮುದುಕಿಗೂ ದೇವಾನ್ನೈಗೂ ಉಂಟಾದ ಸಂತಸ ಅಷ್ಟಿಷ್ಟಲ್ಲ.

ಹತ್ತು ದಿನಗಳು ಕಳೆದು ಮತ್ತೊಂದು ಕಾಗದ ವೈಯಾಪುರಿಯಿಂದ:

"ತಾಯಿಗೆ ಸಾಷ್ಟಾಂಗ ನಮಸ್ಕಾರಗಳು.

ನಾನು ಇಲ್ಲಿ ಆರೋಗ್ಯವಾಗಿದ್ದೇನೆ. ನೀನೂ ದೇವಾನ್ನೈಯೂ ಆರೋಗ್ಯವೆಂದು ನಂಬಿರುತ್ತೇನೆ. ನನಗೆ ಈ ಮಿಲ್ಲಿನಲ್ಲಿ ಕೆಲಸಮಾಡುವುದಕ್ಕೇ ಇಷ್ಟವಿಲ್ಲ. ಮನೆಯಲ್ಲಿ ಮಗ್ಗದ ಮುಂದೆ ಕುಳಿತು ಕೆಲಸ ಮಾಡುತ್ತಿದ್ದುದನ್ನು ನೆನೆದುಕೊಂಡರೆ, ನನ್ನ ಕಣ್ಣಿನಲ್ಲಿ ನೀರು ಮಿಡಿಯುತ್ತದೆ. ನನಗೆ ಇಲ್ಲಿ ಹುಚ್ಚು ಹಿಡಿದ ಹಾಗೆಯೇ ಇದೆ. ಮನಸ್ಸು ಸರಿ ಇಲ್ಲ. ತುಂಬ ಬೇಜಾರು. ಊರನ್ನು ಬಿಟ್ಟು ಇಲ್ಲಿಗೆ ಏಕೆ ಬಂದೆನೋ ಎನ್ನಿಸುತ್ತಿದೆ. ಪಕ್ಕದ ಮನೆ ಹುಡುಗನಿಂದ ಕಾಗದ ಬರೆಸಿ. ಸೇಲಂ ಪೊನ್ನಮ್ಮಾಪೇಟೆ ವೈಯಾಪುರಿ, ಮಲ್ಲೇಶ್ವರಂ ಎಂದು ಕಾಗದ ಬರೆಯಿರಿ."

## 3

ದೇವಾನ್ನೈ ಕೆಲಸ ಮಾಡುತ್ತಿದ್ದ ಮನೆ ಒಬ್ಬ ನಿವೃತ್ತ ಅಧಿಕಾರಿಯದು. ಮನೆಯ ಗೃಹಿಣಿ ಒಳ್ಳೆಯವಳೇ. ಕೆಲಸ ಸಾಕಷ್ಟು ಮಾಡಿಸಿಕೊಂಡರೂ ಉಳಿದ ವಿಷಯಗಳಲ್ಲಿ

ಪ್ರೀತಿಯಿಂದಲೆ ನಡೆದುಕೊಳ್ಳುತ್ತಿದ್ದಳು. ದೇವಾನ್ನೆಗೆ ಉಡಲು ಹಳೆಯ ಸೀರೆಗಳು ಸಿಕ್ಕಿದುವು. ಅಡಿಗೆಯಲ್ಲಿ ಉಳಿದದ್ದು ಪಳಿದದ್ದು ಮನೆಗೂ ತೆಗೆದುಕೊಂಡು ಹೋಗುವ ಹಾಗಾಯಿತು.

ಹೀಗೆಯೇ ದಿನಗಳು ಕಳೆದುವು.

ದೈವ ಇದನ್ನು ನೋಡಿ ಸಹಿಸಲಿಲ್ಲ ಎಂದು ಕಾಣುತ್ತದೆ. ಆ ಮನೆಯಲ್ಲಿ ಒಬ್ಬ ಅಡಿಗೆಯವನು. ಅವನೇ ದೇವಾನ್ನೆಗೆ ಅನ್ನ, ಹುಳಿ ಇತ್ಯಾದಿಗಳನ್ನು ಹಾಕುವವನು. ದಿನಗಳು ಕಳೆದಂತೆ ಆತ ದೇವಾನ್ನೆಯೊಂದಿಗೆ ತಮಾಷೆಯಾಗಿ ಮಾತಾಡುತ್ತಿದ್ದ. ಒಂದು ದಿನ ಆತ ಅವಳಲ್ಲಿ ಅಕ್ರಮವಾಗಿ ನಡೆದುಕೊಂಡ.

ದೇವಾನ್ನೆಗೆ ಇದರಿಂದ ಅಸಾಧ್ಯ ನೋವಾಯಿತು. ಆದರೆ ಈ ವಿಷಯವನ್ನು ಯಾರೊಂದಿಗೆ ಹೇಳಲೂ ಸಂಕೋಚ. 'ಎಲ್ಲಿಯೂ ನಾನು ಹೀಗೆ ಮಾಡಿದೆ ಎಂತ ಹೇಳಬೇಡ. ತಿಂಗಳಿಗೆ ಎರಡು ರೂಪಾಯಿ ನಾನು ನಿನಗೆ ಕೊಡುತ್ತೇನೆ' ಎಂದು ಬೇರೆ ಆ ಜಾರ ಹೇಳಿದ್ದ.

ದುಃಖವನ್ನು ತಡೆಯಲಾರದೆ ದೇವಾನ್ನೆ ಮನೆಗೆ ಹೋಗಿ "ನಾನು ಆ ಬೇವಿನ ಮರದ ಮನೆಗೆ ಕೆಲಸಕ್ಕೆ ಹೋಗುವುದಿಲ್ಲ" ಎಂದಳು.

ಏನು ಯಾಕೆ ಎಂದು ತಾಯಿ ವಿಚಾರಿಸಲು, ನಡೆದದ್ದನ್ನು ದೇವಾನ್ನೆ ಹೇಳಲೇ ಬೇಕಾಯಿತು. ಮುದುಕಿ "ನಾನು ಅಮ್ಮನವರಿಗೆ ಹೇಳ್ತೀನಿ" ಎಂದು ಹೊರಟಳು.

"ಬೇಡಮ್ಮಾ, ನೀನು ಏನು ಹೇಳಿದರೂ ಮತ್ತೆ ಆ ಮನೆಗೆ ನಾನು ಕೆಲಸಕ್ಕೆ ಹೋಗುವುದಿಲ್ಲ" ಎಂದಳು ದೇವಾನ್ನೆ.

ಈಗ ಬೇರೆ ಮನೆಗಳಲ್ಲಿ ಶೋಧನೆ. ಪ್ರತಿಯೊಬ್ಬರ ಮನೆಯಲ್ಲಿಯೂ ಹಳಬರು ಇದ್ದೇ ಇದ್ದಾರೆ. ಹೀಗಾಗಿ ಎರಡು ತಿಂಗಳು ಕಳೆದ ಮೇಲೆ ಮತ್ತೊಂದು ಮನೆ ಇವಳಿಗೆ ಕೆಲಸಕ್ಕೆ ಸಿಕ್ಕಿತು.

ಆರು ತಿಂಗಳುಗಳು ಕಳೆದುವು.

ಬೆಂಗಳೂರಿನಲ್ಲಿ ವೈಯಾಪುರಿ ಕೆಲಸಮಾಡುತ್ತಿದ್ದ ಗಿರಣಿಯಲ್ಲಿ ಮುಷ್ಕರ ನಡೆಯಿತು. ಒಬ್ಬ ಮೇಸ್ತ್ರಿಗೆ ದೊರೆ ಹೊಡೆದನಂತೆ. ಜಗಳ ಹಾಗೆ ಹೀಗೆ ತಿರುಗಿ ಕೆಲವು ಕಾರ್ಮಿಕ ರನ್ನು ಕೆಲಸದಿಂದ ತೆಗೆದುಹಾಕಿದರು. ಕಾರ್ಮಿಕ ಸಂಘದ ಕರೆಯ ಮೇರೆಗೆ ಮುಷ್ಕರ ಪ್ರಾರಂಭವಾಯಿತು. ವೈಯಾಪುರಿಯೂ ಇದರಲ್ಲಿ ಭಾಗವಹಿಸಲೇಬೇಕಾಯಿತು.

ಒಂದು ತಿಂಗಳು ಮುಷ್ಕರ ನಡೆಯಿತು. ಕಾರ್ಮಿಕರು ಸಭೆಗಳನ್ನು ನಡೆಸುತ್ತಲೆ ಇದ್ದರು. ಪ್ರಾರಂಭದಲ್ಲಿ ತುಂಬು ಉತ್ಸಾಹದಿಂದಿದ್ದ ಅವರಿಗೆ, ಯಾವಾಗ ಕೈಯಲ್ಲಿ ಕಾಸಿಲ್ಲವಾಯಿತೋ ಆಗ ಅವರ ಉತ್ಸಾಹ ಕುಗ್ಗಿತು. ಈಗ ಸರಕಾರದ ಕೆಲವು ಅಧಿಕಾರಿ ಗಳು ಕೆಲವರು ಮಧ್ಯೆ ಪ್ರವೇಶಮಾಡಿದರು. ಒಂದು ಒಡಂಬಡಿಕೆ ಆಯಿತು. ಕಾರ್ಮಿಕರು

ಮತ್ತೆ ಕೆಲಸಕ್ಕೆ ಹಾಜರಾದರು. ಆದರೆ ಇಪ್ಪತ್ತೈದು ಜನರನ್ನು ಕೆಲಸದಿಂದ ತೆಗೆದು ಹಾಕಿರುವುದಾಗಿ ಆಡಳಿತ ವರ್ಗ ಘೋಷಿಸಿತ್ತು. ನೋಟೀಸು ಬೋರ್ಡಿನಲ್ಲಿ ಇವರುಗಳ ಹೆಸರೂ ಪ್ರಕಟವಾಯಿತು.

ವೈಯಾಪುರಿ ಇವರಲ್ಲಿ ಒಬ್ಬ.

"ನನಗೆ ಯಾವುದೂ ಗೊತ್ತಿಲ್ಲ" ಎಂದು ವೈಯಾಪುರಿ ಮೇಸ್ತ್ರಿಯಲ್ಲಿ ಗೋಳು ಗರೆದ.

"ದೊಡ್ಡ ದೊರಗಳ ಆಜ್ಞೆ. ಇದು ಆ ಚಾಂಡಾಳ ಟೈಂಕೀಪರ್ ರಂಗಸಾಮಿ ನಾಯಕ ಮಾಡಿದ ಕೆಲಸ. ನಿನ್ನ ಹೆಸರನ್ನೂ ದೊರೆಗಳಿಗೆ ಸೇರಿಸಿ ಕೊಟ್ಟುಬಿಟ್ಟಿದ್ದಾನೆ. ನಾನೇನು ಮಾಡಲೂ ಸಾಧ್ಯವಿಲ್ಲ" ಎಂದ ಮೇಸ್ತ್ರಿ.

ರಂಗಸಾಮಿ ನಾಯಕನ ಬಳಿ ವೈಯಾಪುರಿ ಹೋದ. "ನನಗೊಂದೂ ತಿಳಿಯದಪ್ಪ. ಈ ಕಿತಾಪತಿ ಕೆಲಸ ಸಂಬಳ ಬಟವಾಡೆ ಮಾಡುತ್ತಾನಲ್ಲ, ಆ ಅಯ್ಯರದು" ಎಂದ ಮೇಸ್ತ್ರಿ. ಯಾರ ಬಳಿ ಅಲೆದರೂ ಏನೂ ಪ್ರಯೋಜನವಿಲ್ಲದ ಹಾಗಾಯಿತು. "ನಿನಗೆ ಓದು ಬರೆಹ ಗೊತ್ತಿದೆ. ಎಲ್ಲರನ್ನೂ ಪ್ರಚೋದಿಸಿದವನು ನೀನೇ. ನಿನ್ನನ್ನು ಕೆಲಸಕ್ಕೆ ತೆಗೆದುಕೊಳ್ಳಲು ಸಾಧ್ಯವಿಲ್ಲ" ಎಂದು ಮೇನೇಜರ್ ಖಡಾಖಂಡಿತವಾಗಿ ಹೇಳಿಬಿಟ್ಟ.

ಹಲವು ದಿನಗಳು ಕೆಲಸಕ್ಕಾಗಿ ಅಲ್ಲಿ ಇಲ್ಲಿ ಅಲೆದು, ಕೈಯಲ್ಲಿದ್ದ ಅಲ್ಪ ಸ್ವಲ್ಪ ಸಂಚಯವೂ ಕರಗಲು, ವೈಯಾಪುರಿ ಬೆಂಗಳೂರನ್ನು ತೊರೆದು ಮದರಾಸಿಗೆ ಹೊರಟ. ಇವನಂತೆಯೆ ಇನ್ನೂ ಹಲವರು ಇವನ ಜತೆ ಸೇರಿದರು. ಎಂಟು ಹತ್ತು ದಿನಗಳು ಅಲೆದ ಮೇಲೆ ಮದರಾಸಿನಲ್ಲಿಯೂ ಒಂದು ಗಿರಣಿಯಲ್ಲಿ ಇವರಿಗೆ ಕೆಲಸ ಸಿಕ್ಕಿತು.

ಇಲ್ಲಿ ಕೆಲಸ ಸಿಗಬೇಕಾದರೆ ಗೇಟ್‌ಕೀಪರ್ ಅವರು ಇವರು ಕೆಲವು ಚಿಲ್ಲರೆ ಅಧಿಕಾರಿ ಗಳಿಗೆ ಲಂಚ ಕೊಡಲೇಬೇಕಾಗಿತ್ತು. ಇದಕ್ಕಾಗಿ ವೈಯಾಪುರಿ ತನ್ನ ಕಿವಿಗಳಲ್ಲಿದ್ದ ಚಿನ್ನದ ಮೋಟಿಯನ್ನು ಮಾರಿದ. ಕೆಲಸಕ್ಕೆ ಸೇರಿಕೊಂಡ.

ದಿನಗಳು ಕಳೆದಂತೆ ಮನಸ್ಸಿನ ವ್ಯಥೆಯಿಂದ ವೈಯಾಪುರಿ ಮದರಾಸಿನಲ್ಲಿ ಕುಡಿಯುಲು ಕಲಿತ. ಸೇಲಂನಲ್ಲಿ, ಬೇಗಳೂರಿನಲ್ಲಿ, ಈ ಕೆಟ್ಟ ಚಾಳಿಯ ಅಭ್ಯಾಸ ಅವನಿಗೆ ಇರಲಿಲ್ಲ.

ಯಾವಾಗ ಕುಡಿತ ಪ್ರಾರಂಭವಾಯಿತೋ ಆಗ ಅವನು ಜೂಜಿಗೂ ಇಳಿದ. ಈಗಿನ ಅವನ ಸ್ನೇಹಿತರೆಲ್ಲ ಇಂಥವರೇ. ಕುಡಿತ, ಜೂಜು, ತನ್ನ ಊಟದ ಖರ್ಚು, ಗುಡಿಸಲ ಬಾಡಿಗೆ—ಇವಕ್ಕೆ ಸಂಪಾದನೆ ಸಾಲದೆ ವೈಯಾಪುರಿ ಅಲ್ಲಿ ಇಲ್ಲಿ ಸಾಲಮಾಡತೊಡಗಿದ.

ಮೊದಲು ಏನೇನೋ ಸುಳ್ಳು ಸುಳ್ಳೇ ಆತ ಊರಿಗೆ ಕಾಗದ ಬರೆಯುತ್ತಿದ್ದ. ಬಳಿಕ ಒಂದು ದಿನ 'ದೇವಾನೈಯೂ ಇಲ್ಲಿಗೆ ಬಂದು ಮಿಲ್ಲಿನಲ್ಲಿ ಕೆಲಸಕ್ಕೆ ಸೇರಲಿ' ಎಂದು ಒರಟಾಗಿ ಕಾಗದ ಬರೆದ. ಆ ಕಾಗದವನ್ನು ನೋಡಿ ತಾಯಿ-ಮಗಳಿಗೆ ತುಂಬ ದುಃಖ ವುಂಟಾಯಿತು.

ಹೀಗೆಯೇ ದಿನಗಳು ಸಾಗಿದಂತೆ ಒಂದು ದಿನ ದೇವಾನೈ "ಏನಮ್ಮಾ, ನಾನೂ ಪಟ್ಟಣಕ್ಕೆ ಹೋಗಬಹುದಲ್ಲ. ವೈಯಾಪುರಿ, ನಾನು ಇಬ್ಬರೂ ಸೇರಿ ಸಂಪಾದನೆ ಮಾಡಿದರೆ ನಿನಗೂ ಅನುಕೂಲವಾಗುತ್ತದೆ. ಈಗಂತೂ ಕಾರ್ಖಾನೆಗಳಲ್ಲಿ ಹೆಂಗಸರು ತುಂಬ ಜನ ಇದ್ದಾರೆ" ಎಂದಳು.

ತಾಯಿ ಮೊದಲು ಇದಕ್ಕೆ ಅನುಮತಿ ಕೊಡಲಿಲ್ಲ. "ಹೀಗೆಲ್ಲಿ ಸಾಧ್ಯ? ನೀನು ಏನೂ ಅರಿಯದ ಹೆಣ್ಣು ಮಗಳು. ಒಬ್ಬಳೇ ಹೋಗುವುದು ಎಂದರೇನು? ಎಂದಳು.

ಆದರೆ ದೇವಾನೈ ಹಟಹಿಡಿಯಲು ಬಳಿಕ ಆ ಮುದುಕಿ ಈ ಏರ್ಪಾಟಿಗೆ ಒಪ್ಪಿಕೊಂಡಳು. ಪಕ್ಕದ ಮನೆ ಮಾರಪ್ಪನ ಬಳಿಯಲ್ಲಿ, ತನ್ನ ಕಿವಿಯ ಓಲೆಗಳನ್ನು ಗಿರವಿ ಇಟ್ಟು ಹನ್ನೆರಡು ರೂಪಾಯಿಗಳನ್ನು ಪಡೆದು, ದೇವಾನೈ ಮದರಾಸಿಗೆ ಹೊರಟಳು.

ಮದರಾಸಿನಲ್ಲಿ ವೈಯಾಪುರಿ ದೇವಾನೈಯನ್ನು ಒಂದು ಗಿರಣಿಯಲ್ಲಿ ಕೆಲಸಕ್ಕೆ ಸೇರಿಸಿದ. ಅವನು ಕೆಲಸ ಮಾಡುವ ಗಿರಣಿ ಬೇರೆ. ಇದು ಬೇರೆ. ಇಲ್ಲಿ ದೇವಾನೈ ಯಂತೆಯೆ ಕೆಲಸಮಾಡುತ್ತಿರುವ ಹೆಣ್ಣುಮಕ್ಕಳ ಸಂಖ್ಯೆ ನೂರೈವತ್ತಾದರೂ ಇರಬಹುದು. ಇವರುಗಳ ಮೇಲ್ವಿಚಾರಣೆಗೆ ಒಬ್ಬ ಮೇಸ್ತ್ರಿ.

ಆ ಮೇಸ್ತ್ರಿ ಕೆಲವು ಸಮಯಗಳಲ್ಲಿ ದೇವಾನೈಯ ಕೂಡ ಪ್ರಸನ್ನವಾಗಿ ಇರುತ್ತಿದ್ದ. ಆದರೆ ಮರುಕ್ಷಣದಲ್ಲಿಯೆ ಸಿಡಿಸಿಡಿ ಎನ್ನುತಿದ್ದ. ವಿನಾಕಾರಣ ರೇಗುತ್ತಿದ್ದ. ದೇವಾನೈ ಯನ್ನು ಒಬ್ಬಳನ್ನೆ ಸಂದಿಸಿದರೆ ಅವಳ ಕೂಡ ಹಾಸ್ಯವಾಗಿ ನಗುನಗುತ್ತ ಮಾತಾಡು ತ್ತಿದ್ದ.

"ಯಾಕೆ ಇವರು ಹೀಗೆ ಮಾಡುತ್ತಿದ್ದಾರೆ?" ಎಂದು ತನ್ನ ಸಹೋದ್ಯೋಗಿನಿ ಯೊಬ್ಬಳನ್ನು ಕೇಳಿದಳು ದೇವಾನೈ.

ಅವಳು ನಗುತ್ತ "ಹುಚ್ಚಿ, ನಿನಗೆ ಅಷ್ಟೂ ಗೊತ್ತಾಗೊಲ್ಲವೆ? ಪಾಪ, ನೀನು ಇಲ್ಲಿಗೆ ಹೊಸದಾಗಿ ಬಂದಿರುವವಳು. ಅವರಲ್ಲಿ ನೀನು ಸರಿಯಾಗಿ ನಡೆದುಕೊಳ್ಳದಿದ್ದರೆ ನಿನ್ನ ಕೂಲಿಯಲ್ಲಿ ಅರ್ಧ ಭಾಗವನ್ನು 'ಅಪರಾಧ' ಎಂದು ಹಿಡಿದುಬಿಡುತ್ತಾರೆ. ಅವರು ಪ್ರಸನ್ನವಾಗಿದ್ದರೆ ಏನು ಬೇಕಾದರೂ ನಡೆಯುತ್ತದೆ" ಎಂದಳು.

ಬಡವರ ಕಷ್ಟವನ್ನು ಹೇಳುವವರು ಯಾರು? ಕೇಳುವವರು ಯಾರು? ಬಡ ಹೆಂಗಸರು ಅಂಥ ಗಿರಣಿಗಳಲ್ಲಿ ಹೊಟ್ಟೆಯ ಪಾಡಿಗಾಗಿ ತಮ್ಮ ಸರ್ವಸ್ವವನ್ನೂ ತೆರ ಬೇಕಾಗಿತ್ತು.

ದೇವಾನೈ, ಕೆಲವು ದಿನಗಳು, ಎಲ್ಲವನ್ನೂ ಸಹಿಸಿಕೊಂಡು ಬಂದಳು. ಬಳಿಕ ಮನಸ್ಸನ್ನು ಸಡಿಲಬಿಟ್ಟಳು. ಆತ ಸರಸವಾಗಿ ನಡೆದುಕೊಂಡರೆ ತಾನೂ ಹಾಗೆಯೇ. ಬರಬರುತ್ತಾ ಇದರಲ್ಲಿ ಅವಳು ಸುಖವನ್ನೂ ಅನುಭವಿಸಿದಳು. ಅವಳ ದಿನಗೂಲಿಯೂ ಈಗ ಹೆಚ್ಚಿತು.

ಕೆಲವು ತಿಂಗಳು ಹೀಗೆಯೇ ಕಳೆಯಿತು. ದೇವಾನೈ ಶರೀರದಲ್ಲಿ ಈಗ ಬದಲಾವಣೆ ಉಂಟಾಯಿತು. ತಾನು ಈಗ ಗರ್ಭಿಣಿಯಾಗಿದ್ದೇನೆ ಎಂದು ಅವಳು ಅರಿತುಕೊಂಡಳು. 'ಯಾರಲ್ಲಿ ನನ್ನ ಈ ಕೆಟ್ಟ ಪರಿಸ್ಥಿತಿಯನ್ನು ತಿಳಿಸಲಿ?' ಎಂದು ಅವಳು ಬೆದರಿದ ಜಿಂಕೆಯಂತೆ ಕಂಗಾಲಾದಳು.

ಸೋದರ ವೈಯಾಪುರಿಗೆ ತಿಳಿಸಲೂ ಅವಳು ಹಿಂಜರಿದಳು. ಅವಳ ಕೂಡ ಕೆಲಸ ಮಾಡುತ್ತಿದ್ದವರು ಈ ಸಂಗತಿಯನ್ನು ತಿಳಿದು ನಗುನಗುತ್ತ ಹಾಸ್ಯಮಾಡಿದರು. ಊರಿಗೇ ಹಿಂದಿರುಗೋಣವೆ ಎಂದು ಸಹ ಆಕೆ ಯೋಚಿಸಿದಳು. ಊರಲ್ಲಿ ಈ ಸುದ್ದಿ ತಿಳಿದರೆ ಜಾತಿಯಿಂದ ತಮ್ಮನ್ನು ಬಿಡಬಹುದು ಎಂದು ಆಕೆ ಹೆದರಿದಳು. ತಾಯಿ ಇದನ್ನು ನೋಡಿ ಹೇಗೆ ಸಹಿಸುತ್ತಾಳೆ ಎಂದು ಊರಿಗೆ ಹೋಗುವ ಯೋಚನೆಯನ್ನು ಕೈಬಿಟ್ಟಳು.

ದೇವರು ಮಾಡಿದ ಹಾಗಾಗಲಿ ಎಂದು ಆಕೆ ಮೌನವಾಗಿ ಇದ್ದುಬಿಟ್ಟಳು.

ಆದರೆ ಹಾಗೆ ಇರಲು ಹೇಗೆ ಸಾಧ್ಯ? "ಅಯ್ಯೋ, ನಾನು ಈ ವಿಪತ್ತಿನಿಂದ ಹೇಗೆ ಪಾರಾಗಲಿ?" ಎಂದು ತನ್ನ ಮಿತ್ರೆಯೊಬ್ಬಳ ಕೂಡ ದೇವಾನೈ ಪ್ರಲಾಪಿಸಿದಳು.

"ಭಯಪಡಬೇಡ. ಇದೇನು ಎಲ್ಲರಿಗೂ ಆಗುವಂಥದೇ. ಇದಕ್ಕೆ ತಕ್ಕ ಔಷಧ ಇದೆ. ಅದರಲ್ಲಿ ಎಲ್ಲ ಸರಿಹೋಗುತ್ತದೆ" ಎಂದಳು ಆ ಮಿತ್ರೆ.

"ಹೌದು, ನಾನೂ ಕೇಳಿದ್ದೇನೆ. ಆದರೆ ಭಯವಾಗಿದೆ. ಪ್ರಾಣಕ್ಕೆ ಏನೂ ಅಪಾಯ ವಿಲ್ಲವೊ, ದೇವರೆ" ಎಂದಳು ದೇವಾನೈ ಅಳುತ್ತಳುತ್ತ.

ಎರಡು ರೂಪಾಯಿ ಕೊಟ್ಟರೆ ಸಾಕು. ಮುತ್ತುಸಾಮಿ ಆಚಾರಿ ಬೀದಿಯಲ್ಲಿ ಒಬ್ಬಳು ಇದ್ದಾಳೆ. ಅವಳು ಎಲ್ಲವನ್ನೂ ಸರಿಮಾಡಿಬಿಡುತ್ತಾಳೆ."

"ಈ ಸಂಗತಿ ಏನಾದರೂ ಹೊರಗೆ ತಿಳಿದು ಪೊಲೀಸಿನವರು ಹಿಡಿದರೆ!"

"ಹಾಗೆಲ್ಲ ಹೆದರಬೇಡಮ್ಮಾ. ಪೊಲೀಸಿನವರನ್ನೆಲ್ಲ ಅವಳು ಸರಿಮಾಡಿಕೊಂಡಿದ್ದಾಳೆ. ಹಣ ಒಂದು ಇದ್ದರೆ ಸಾಕು, ಏನಾದರೂ ಆಗಬಹುದಲ್ಲ. ನಿನಗೆ ಅಷ್ಟೂ ತಿಳಿಯದೆ?."

"ಎಂಥ ಕೆಲಸವಾಯಿತಮ್ಮ! ಈ ಹಾಳು ಊರಿಗೆ ನಾನು ಯಾಕೆ ಬಂದೆನೊ? ಸೇಲಂನಲ್ಲಿ ನಾನು ಹೊಟ್ಟೆಗಿಲ್ಲದೆ ಸತ್ತಿದ್ದರೇ ಚೆನ್ನಾಗಿತ್ತು."

ಮತ್ತೆ ಕೆಲವು ದಿನಗಳು ಕಳೆದ ಮೇಲೆ ಮತ್ತೊಬ್ಬಳು ಹೇಳಿದಳು:

"ಮಗುವನ್ನು ನೀನು ಕೊಲ್ಲಕೂಡದು. ಹಾಗೆ ಮಾಡಿದರೆ ಈ ಪಾಪ ಮೂರು ಜನ್ಮಕ್ಕೂ ಮುಗಿಯುವುದಿಲ್ಲ ಎನ್ನುತ್ತಾರೆ. ಒಂದು ಕೆಲಸ ಮಾಡು. ಗಣಪತಿ ಗುಡಿ ಬೀದಿಯಲ್ಲಿ ಒಬ್ಬಳು ಅಜ್ಜಿ ಇದ್ದಾಳೆ. ಅವಳು ತುಂಬ ಒಳ್ಳೆಯವಳು. ಅವಳ ಬಳಿ ಹೋದರೆ ನಿನಗೆ ಪರಿಹಾರ ಸಿಗುತ್ತದೆ. ತುಂಬ ಜನ ಇಂಥವರು ಅವಳಲ್ಲಿ ವಿಮೋಚನೆ ಯನ್ನು ಕಂಡಿದ್ದಾರೆ."

"ನನ್ನನ್ನೂ ಅಲ್ಲಿಗೆ ಕರೆದುಕೊಂಡು ಹೋಗು ಅಕ್ಕಾ" ಎಂದು ಬೇಡಿದಳು ದೇವಾನೈ.

ಒಂದು ದಿನ, ದೇವಾನೈ, ಆ ಪರೋಪಕಾರಿ ಮಹಿಳೆಯ ಮನೆಗೆ ಹೋದಳು. ಮಿತ್ರೆಯೊಂದಿಗೆ. ಪ್ರಸವವೂ ಮುಗಿಯಿತು. ತನ್ನ ಮಗುವನ್ನು ನೋಡಿದೊಡನೆ ಈ ಜಗತ್ತೇ ಬೇರೆ ಎಂದು ಆಕೆಗೆ ಅನ್ನಿಸಿತು. ಇದುವರೆಗೆ ಅನುಭವಿಸಿದ ಎಲ್ಲ ಕಷ್ಟ ಕೋಟಲೆಗಳನ್ನೂ ಅವಳು ಈಗ ಮರೆತಳು. ತನ್ನ ಪುಟ್ಟ ಮಗುವೊಂದೇ ಈ ಜಗತ್ತು ಎಂದು ಅವಳು ಭಾವಿಸಿಕೊಂಡಳು.

"ದೇವರು ಕೊಟ್ಟ ಚಿಗುರು. ಇದು ಏನು ಪಾಪ ಮಾಡಿದೆ? ನಾನೇ ಪಾಪಿ" ಎಂದು ಆಕೆ ತನ್ನ ಮಗುವನ್ನೆತ್ತಿ ಮುದ್ದಾಡಿದಳು. ಹೀಗೆ ಕೆಲವು ದಿನಗಳು ಆಕೆ ತನ್ನ ಮನಃಕ್ಲೇಶವನ್ನು ಅಲ್ಲಿ ಮರೆತಿದ್ದಳು.

"ನೀನು ಈಗ ಕೆಲಸಕ್ಕೆ ಹೋಗಿ ಸೇರಿ ಕೆಲಸಮಾಡಲು ಸಾಧ್ಯವಿಲ್ಲ, ದೇವಾನೈ. ಕೆಲವು ದಿನಗಳು ಇಲ್ಲಿಯೆ ಇರು" ಎಂದು ಹೇಳಿದಳು ಆ ಪರೋಪಕಾರಿ ಮಹಿಳೆ.

'ಇಷ್ಟು ಒಳ್ಳೆಯವರೂ ಜಗತ್ತಿನಲ್ಲಿ ಇದ್ದಾರಲ್ಲ. ನಾನು ಸುಮ್ಮನೇ ದೇವರಿಗೆ ಶಾಪಹಾಕಿದೆ' ಎಂದು ತನ್ನೊಳಗೇ ಹೇಳಿಕೊಂಡಳು ದೇವಾನೈ.

ಒಂದೆರಡು ತಿಂಗಳುಗಳು ಕಳೆದ ಮೇಲಷ್ಟೇ ದೇವಾನೈಗೆ ಸತ್ಯಸಂಗತಿ ತಿಳಿಯಲು ಸಾಧ್ಯವಾಯಿತು. ಆ ಮುದುಕಿ ಸಮಾಜದಲ್ಲಿ ಹೀಗೆ ವಂಚಿತರಾದವರನ್ನು ಸೇರಿಸಿ ಕೊಂಡು ಅಕ್ರಮ ವ್ಯವಹಾರ ಮಾಡುತ್ತಿದ್ದಳು. ದೇವಾನೈ ಸಹ ಈ ಜಾಲಕ್ಕೆ ಈಡಾ ದಳು. ಮತ್ತೆ ಅವಳು ಅಲ್ಲಿಂದ ತಪ್ಪಿಸಿಕೊಳ್ಳಲು ಸಾಧ್ಯವಾಗಲೇ ಇಲ್ಲ.

## 4

"ಸೇಲಂನಲ್ಲಿ, ನಮ್ಮ ಮನೆಯಲ್ಲಿ, ಕೆಲಸಮಾಡುತ್ತಿದ್ದಳಲ್ಲ ದೇವಾನೈ, ಅವಳ ಹಾಗೆಯೆ ಈ ಭಿಕ್ಷುಕಿ ಕಾಣುತ್ತಿದ್ದಾಳೆ" ಎಂದರು ರಾಮನಾಥ ಅಯ್ಯರ್.

ನಿಜ. ರಾಮನಾಥ ಅಯ್ಯರ್, ನಿವೃತ್ತ ಅಧಿಕಾರಿಯೊಬ್ಬರ ಹಿರಿಯ ಮಗ ಸೇಲಂ ನಲ್ಲಿ ದೇವಾನೈ ಕೆಲಸಮಾಡುತ್ತಿದ್ದ ಮನೆಯವರೇ. ಇವರು ಮದರಾಸಿನ ಒಂದು ಬ್ಯಾಂಕಿನಲ್ಲಿ ಉದ್ಯೋಗದಲ್ಲಿ ಇದ್ದಾರೆ.

"ಸೇಲಂ ಹುಡುಗಿ ಇಲ್ಲಿಗೆ ಹೇಗೆ ಬಂದಾಳು? ನಿಮಗೆ ಭ್ರಮೆ" ಎಂದಳು ಸೀತಾ-ಲಕ್ಷ್ಮಿ.

"ಏನೊ? ಹೇಗೊ? ಅದು ಹೇಗಾದರೂ ಆಗಲಿ. ಒಬ್ಬಳು ಹೆಣ್ಣು ಮಗಳು ಹೀಗೆ ಮಗುವನ್ನು ಎತ್ತಿಕೊಂಡು ಭಿಕ್ಷೆ ಬೇಡುವುದು ಮಹಾಪಾಪ. ನಮ್ಮ ದೇಶದ ದುರವಸ್ಥೆ ಇಲ್ಲಿಯು ವರೆಗೆ ಬಂದಿದೆ" ಎಂದರು ಅಯ್ಯರ್.

"ನಿಮಗೆ ಯಾವಾಗಲೂ ಹೀಗೆಯೇ ದೇಶದ ಚಿಂತೆ. ಸದ್ಯ ನಮ್ಮ ನಮ್ಮ ಸಂಸಾರದ ಚಿಂತೆ ಮಾಡಿದರೆ ಸಾಕಾಗಿದೆ" ಎಂದಳು ಧರ್ಮಪತ್ನಿ.

ಮಾರನೆಯ ದಿನ ಸಂಜೆಯೂ ರಾಮನಾಥ ಅಯ್ಯರಿಗೆ ಆ ಭಿಕ್ಷುಕಿಯ ನೆನಪು ಅಳಿಯಲಿಲ್ಲ. ತಮ್ಮ ಆಫೀಸಿನಿಂದ ನೇರವಾಗಿ ಅವರು ಒಬ್ಬರೇ ಚೈನಾಬಜಾರಿಗೆ ಹೋದರು. ಅವಳನ್ನು ಮತ್ತೆ ಅಲ್ಲಿ ಕಾಣಬಹುದು, ಕಂಡು ಯಾರೆಂದು ವಿಚಾರಿಸ ಬಹುದು ಎಂದು ಅದೇ ಫಲಾಹಾರ ಮಂದಿರದ ಬಳಿ ಕಾರನ್ನು ನಿಲ್ಲಿಸಿ ಅವಳಿಗಾಗಿ ಕಾದರು. ಹಲವು ಭಿಕ್ಷುಕರು. "ಅಮ್ಮಾ, ತಂದೇ" ಎಂದು ಅವರ ಕಾರನ್ನು ಸುತ್ತು ವರಿದರು, ಸರಿಯೆ. ಆದರೆ ಆ ಭಿಕ್ಷುಕಿ ಮಾತ್ರ ಎಲ್ಲೂ ಕಾಣಸಿಗಲಿಲ್ಲ.

ಮತ್ತೊಂದು ಶನಿವಾರ ರಾಮನಾಥ ಅಯ್ಯರ್ ಪತ್ನೀಸಮೇತರಾಗಿ ಚೈನಾಬಜಾರಿಗೆ ಹೋದರು. "ನೋಡಲ್ಲಿ, ನಿಮ್ಮ ಆ ಭಿಕ್ಷುಕಿ" ಎಂದಳು ಸೀತಾಲಕ್ಷ್ಮಿ.

ರಾಮನಾಥ ಅಯ್ಯರಿನ ಕಾರಿನ ಬಣ್ಣವನ್ನು ನೋಡಿಯೋ ಏನೋ ಆ ಭಿಕ್ಷುಕಿ ಇತ್ತ ಬರಲಿಲ್ಲ. ಭಿಕ್ಷುಕರಿಗೆ ತುಂಬ ಬುದ್ಧಿ ಜಾಸ್ತಿ ಎಂದು ಕಾಣುತ್ತದೆ! ಯಾರು ಯಾರು ದಾನ ಧರ್ಮ ಮಾಡುತ್ತಾರೆ ಎನ್ನುವುದನ್ನು ಅವರು ಸೂಕ್ಷ್ಮವಾಗಿ ಗ್ರಹಿಸಿಕೊಳ್ಳು ತ್ತಾರೆ. ಈ ಕಾರಿನವರು ಮಹಾ ಜಿಪುಣರು ಎಂದು ಆಕೆ ತೀರ್ಮಾನಿಸಿಬಿಟ್ಟಳೋ ಏನೊ?

ಇವರಿಗೆ ಸ್ವಲ್ಪ ದೂರದಲ್ಲಿದ್ದ ಮತ್ತೊಂದು ಕಾರನ್ನು ಸುತ್ತುವರಿದಿದ್ದಳು ಆ ಭಿಕ್ಷುಕಿ. "ಅಮ್ಮಾ, ದಾನ ಧರ್ಮ ಮಾಡೀ ತಾಯೀ. ಮಗುವಿಗೆ ಏನಾದರೂ ಕೊಡಿ ತಂದೇ" ಎಂದು ಆರ್ತಳಾಗಿ ಕೂಗಿಕೊಳ್ಳುತ್ತಿದ್ದಳು.

ದೂರದಲ್ಲಿದ್ದ ಆ ಭಿಕ್ಷುಕಿಯನ್ನು ತಮ್ಮ ಬಳಿ ಕೈಬೀಸಿ ಕರೆಯಲು ರಾಮನಾಥ ಅಯ್ಯರ್ ಯಾಕೋ ಸಂಕೋಚಪಟ್ಟರು. ಸ್ವಲ್ಪ ಹೊತ್ತು ಹಾಗೆಯೇ ನಿಂತರು. ಅವಳು ಅಲ್ಲಿಗೆ ಬಂದೇ ಬರುತ್ತಾಳೆ ಎನ್ನುವುದು ಅವರ ಭಾವನೆ. ಆದರೆ ಆ ಭಿಕ್ಷುಕಿ ಇತ್ತ ಬಾರದೆ ಗುಂಪಿನಲ್ಲಿ ಎಲ್ಲಿಯೋ ನುಸುಳಿ ಈಗ ಕಾಣೆಯಾಗಿ ಹೋಗಿದ್ದಳು.

"ಸರಿ, ಹೊರಡೋಣ" ಎಂದಳು ಸೀತಾಲಕ್ಷ್ಮಿ.

ಎಂಟು ದಿನಗಳು ಕಳೆದು ಅಯ್ಯರ್ ಪತ್ನಿಯೊಂದಿಗೆ ಸಿನಿಮಾವಿಗೆ ಹೊರಟರು. ಕಥೆ: ನಳೋಪಾಖ್ಯಾನ.

ಸಿನಿಮಾ ಮಂದಿರದಲ್ಲಿ ಭಾರೀ ಜನಸಂದಣಿ. ಪ್ರಖ್ಯಾತ ತಾರೆ ಡಿ. ಕೆ. ಧನಭಾಗ್ಯ ಳದು ದಮಯಂತಿಯ ಪಾತ್ರ.

"ಮೊದಲನೆಯ ಆಟಕ್ಕೆ ಟಿಕೆಟ್ ಸಿಗುವುದಿಲ್ಲ. ಎರಡನೆಯ ಆಟಕ್ಕಾದರೆ ಸಿಗುತ್ತದೆ" ಎಂದರು ಥಿಯೇಟರಿನವರು.

"ಮನೆಗೆ ಹೋಗಿದ್ದು ಮತ್ತೆ ಬರೋಣವೆ?" ಎಂದರು ಅಯ್ಯರ್.

ಸೀತಾಲಕ್ಷ್ಮಿ ಏನೋ ಹೇಳುವುದರೊಳಗಾಗಿ "ಅಮ್ಮಾ, ಭಿಕ್ಷೆ ಹಾಕಿ ತಾಯೀ" ಎಂದೊಬ್ಬಳು ಅವರಿಗೆ ಸಮೀಪವಾಗಿ ಕೂಗಿಕೊಂಡಳು.

ತಕ್ಷಣ ರಾಮನಾಥ ಅಯ್ಯರ್ ಸೇಲಂ ಹುಡುಗಿಯೇನೋ ಎಂದು ಆವಳತ್ತ ತಿರುಗಿ ನೋಡಿದರು. ಊಹೂಂ. ಅವಳಲ್ಲ, ಬೇರೊಬ್ಬಳು.

ಆ ಸಮಯದಲ್ಲಿ ಒಬ್ಬ ಪೋಲೀಸಿನವ ದೊಣ್ಣೆಯನ್ನು ಬೀಸಿ ಆ ಭಿಕ್ಷುಕಿಯನ್ನು ಗದರಿಸಿಕೊಳ್ಳುತ್ತಿದ್ದ.

* * * * *

ಆ ರಾತ್ರಿ ರಾಮನಾಥ ಅಯ್ಯರ್ ಕನಸಿನಲ್ಲಿ ಆ ಭಿಕ್ಷುಕಿಯನ್ನು ಕಂಡರು.

"ನಿನ್ನ ಊರು ಯಾವುದು? ನೀನು ದೇವಾನೈ ಹೌದೋ ಅಲ್ಲವೊ?" ಎಂದು ಅವರು ಅವಳನ್ನು ಕೇಳಿದರು.

ಸಂತಸದಿಂದ ಆಕೆ ಮಗುವನ್ನು ಅಪ್ಪಿಕೊಂಡು, "ಸ್ವಾಮೀ, ಸ್ವಾಮೀ, ತಾವು ಸೇಲಂ ಅಲ್ಲವೆ? ಬೇವಿನ ಮರದ ಮುಂಭಾಗದ ಮನೆಯುವರಲ್ಲವೆ?" ಎಂದು ಕೇಳಿದಳು.

"ನಾಯರ್, ಇವಳನ್ನು ಹಿಂದುಗಡೆ ಸೀಟಿನಲ್ಲಿ ಕೂರಿಸಿಕೋ" ಎಂದು ಅಯ್ಯರ್ ಚಾಲಕನಿಗೆ ಅಣತಿಯಿತ್ತರು.

ಮನೆಗೆ ಹೋಗಿ ಸೇರುತ್ತಲೇ, "ಇವಳು ಯಾರು? ಈ ಮೂದೇವಿಯನ್ನು ಎಲ್ಲಿಂದ ಕರೆದುಕೊಂಡು ಬಂದಿದ್ದೀರಿ?" ಎಂದು ಸೀತಾಲಕ್ಷ್ಮಿ ಕೂಗಿಕೊಂಡಳು.

"ನಮ್ಮ ಮನೆಯಲ್ಲಿಯೇ ಯಾಕೆ ಇವಳಿಗೆ ಆಶ್ರಯ ಕೊಡಬಾರದು? ಊಟ ಹಾಕಿ ತಿಂಗಳಿಗೆ ನಾಲ್ಕು ರೂಪಾಯಿ ಸಂಬಳ ಕೊಟ್ಟರಾಯಿತು" ಎಂದರು ಅಯ್ಯರ್.

"ಚೆನ್ನಾಗಿ ಹೇಳಿದಿರಿ. ಕೆಟ್ಟು ಹೋದವಳನ್ನು ಮನೆಯಲ್ಲಿ ಸೇರಿಸಿಕೊಳ್ಳುವುದೆ? ಹೋಗು, ಮನೆಯೊಳಗೆ ಬರಬೇಡ" ಎಂದು ಸಿಡುಕಿದಳು ಸೀತಾಲಕ್ಷ್ಮಿ.

"ನಾನು ಕಳ್ಳತನ ಕೆಟ್ಟಕೆಲಸ ಏನೂ ಮಾಡೋದಿಲ್ಲಮ್ಮಾ. ಸುಳ್ಳು ಹೇಳೋದಿಲ್ಲ" ಎಂದು ಪ್ರಲಾಪಿಸಿದಳು ಭಿಕ್ಷುಕಿ.

"ಸಾಧ್ಯವಿಲ್ಲ ತೊಲಗಾಚೆ" ಎಂದು ಗರ್ಜಿಸಿದಳು ಸೀತಾಲಕ್ಷ್ಮಿ.

ಅವಳಿಗೆ ಒಂದು ರೂಪಾಯಿಯನ್ನಾದರೂ ಕೊಟ್ಟು ಕಳುಹಿಸೋಣ ಎಂದವರೇ ಅಯ್ಯರ್ ಹಾಗೆ ಹೀಗೆ ಹುಡುಕಾಡಿದರು. ಅರೆ, ಏನಾಶ್ಚರ್ಯ! ಅದರ ಅಂಗಿಯಲ್ಲಿ ಜೇಬೇ ಇಲ್ಲ. ಎಲ್ಲೋ ಮಾಯವಾಗಿ ಹೋಗಿದೆ. ಈಗ ಆ ಭಿಕ್ಷುಕಿಯ ಮಗು ಒಂದೇಸಮನಾಗಿ ಚೀರುತ್ತ ಇದೆ.

ಅಯ್ಯರ್ ಕಣ್ದೆರೆದರು. ತಾವು ಇದುವರೆಗೂ ಕಂಡದ್ದು ಎಲ್ಲ ಕನಸು. ಹಾಸಿಗೆಯಲ್ಲಿ ತಮ್ಮ ಮಗಳು ರಾಧಾ ಕುಳಿತು ಅಳುತ್ತಾ ಇದ್ದಾಳೆ.

* * * * *

'ಹೌದು. ಇದು ಬರಿಯ ಕನಸು. ಸೀತಾಲಕ್ಷ್ಮಿ ಇಷ್ಟು ಕ್ರೂರ ಹೆಂಗಸಲ್ಲ.' ಎಂದು ತಮ್ಮೊಳಗೇ ಹೇಳಿಕೊಂಡರು ರಾಮನಾಥ ಅಯ್ಯರ್.

ಮತ್ತೆ ಬಹಳ ದಿನಗಳವರೆಗೂ ಅವರು ಅಲ್ಲಿ ಇಲ್ಲಿ ತಮ್ಮ ಕಾರನ್ನು ನಿಲ್ಲಿಸಿದ ಜಾಗಗಳಲ್ಲೆಲ್ಲಾ ಹಾಗೆ ಹೀಗೆ ಕಣ್ಣಾಡಿಸುತ್ತಿದ್ದರು. ಆ ಭಿಕ್ಷುಕಿ ತಮ್ಮ ದೃಷ್ಟಿಗೆ ಎಲ್ಲಿಯಾದರೂ ಬೀಳುವಳೇನೋ ಎನ್ನುವ ಆಸೆ ಅವರಿಗೆ. ಆದರೆ ಆಕೆ ಮತ್ತೆ ಎಂದೂ ಅವರ ಕಣ್ಣಿಗೆ ಕಾಣಿಸಲೇ ಇಲ್ಲ.

ಆಕೆ ಏನಾದಳೊ ಯಾರಿಗೆ ತಿಳಿಯಬೇಕು?

# ಶಾಪವಿಮೋಚನೆ

ಕಾಡಿನ ದಾರಿಯಲ್ಲಿ ಒಂದು ಶಿಲಾ ಪ್ರತಿಮೆ. ಅದು ಭಗ್ನವಾಗಿ ಒರಗಿದ ಸ್ಥಿತಿಯಲ್ಲಿ ದ್ದರೂ ಪರಾಕ್ರಮವೇ ಮೂರ್ತಿವೆತ್ತಂತಿರುವ ಒಂದು ರೂಪ. ಅಪೂರ್ವವಾದು ದೊಂದು ಶಿಲಾಕೃತಿ, ಈ ಜಗತ್ತಿನಲ್ಲಿ ಪ್ರತಿಷ್ಠಾಪನೆಯಾಗಿದೆಯೇನೋ ಎನ್ನುವಂತೆ ಅದರ ಆಕರ್ಷಣೆ. ಆದರೆ ಆ ಮೋಹನಕೃತಿಯ ಕಣ್ಣುಗಳಲ್ಲಿ ಮಾತ್ರ ಎಂಥದೋ ಶೋಕ. ನೋಡುವವರಿಗೂ ಈ ಶೋಕದ ಛಾಯೆ ತಾಗದೆ ಇರದು. ಅದು ಶಿಲ್ಪಿಯ ಕನಸಿನ ಛಾಯೆಯಂತೂ ಅಲ್ಲ. ಏನೋ ಶಾಪದ ಪರಿಣಾಮವೆ ಇರಬೇಕು.

ಹೌದು ಅವಳೇ ಅಹಲ್ಯೆ.

ಆ ಕಾಡಿನ ರಸ್ತೆಯಲ್ಲಿ ಶೋಕವನ್ನೆ ಕಲ್ಲಿನಲ್ಲಿ ಕೆತ್ತಿದಂತೆ ನಿಸರ್ಗದೊಂದಿಗೆ ಅಹಲ್ಯೆ ಬೆರೆತುಹೋಗಿದ್ದಾಳೆ. ಬಿಸಿಲು ಸುಡುತ್ತದೆ. ಮಳೆ ಬರುತ್ತದೆ, ಮಂಜು ಸುರಿಯು ತ್ತದೆ. ದುಂಬಿಗಳೂ ಹಕ್ಕಿಗಳೂ ಹಾರಾಡುತ್ತವೆ. ಕೆಲವು ಸಲ ಆ ಕಲ್ಲನ್ನು ಸ್ಪರ್ಶಿಸು ತ್ತವೆ. ಅದರ ಮೇಲೆ ಕುಳಿತುಕೊಳ್ಳುತ್ತವೆ. ಆದರೆ ಅವಳೊ ಪ್ರಜ್ಞಾಹೀನಳಂತೆ ಅಲ್ಲಿ ಒರಗಿಬಿಟ್ಟಿದ್ದಾಳೆ.

ಆ ಶಿಲೆಗೆ ಅನತಿ ದೂರದಲ್ಲಿಯೆ ಬೆಳೆದಿರುವ ಒಂದು ಹುತ್ತ. ನಿಷ್ಠೆಯಲ್ಲಿ ಮುಳುಗಿ ಶೋಕವನ್ನು ಮರೆತು ತಪಸ್ಸು ಮಾಡುತ್ತಿದ್ದಾನೆ ಗೌತಮ. ನಿಸರ್ಗ ಅವನನ್ನೂ ಭೇದವಿಲ್ಲದೆ ಪೋಷಿಸುತ್ತಿದೆ.

ಇನ್ನೂ ಸ್ವಲ್ಪ ದೂರದಲ್ಲಿ ಈ ದಂಪತಿಗಳ ಕುಟುಂಬದ ಗೂಡು ಕೊಂಬೆ ಮುರಿದು ಕೆಳಗೆ ಬಿದ್ದಂತೆ, ಇವರಿಗೆ ಆಸರೆಯಾಗಿದ್ದ ಆ ಗುಡಿಸಲು ಸಹ ಗಾಳಿಪಾಲಾಗಿ ದಿಕ್ಕೆಟ್ಟಿದೆ. ಗೋಡೆಗಳೂ ಬಿದ್ದುಹೋಗಿವೆ. ಉಳಿದದ್ದು ಅದರ ಅವಶೇಷ ಮಾತ್ರ. ಇವರ ಮನಸ್ಸಿಗೆ ನಟ್ಟ ಶೋಕದ ಕಲೆಗಳಂತೆ ಅವು ಈಗ ಕಾಣಿಸುತ್ತ ಇವೆ.

ದೂರದಲ್ಲಿ ಗಂಗೆಯ ಜಳ ಜಳ ಜಳ ನಾದ. ತಾಯಿ ಗಂಗೆ. ಅವಳಿಗೂ ಇವರ ಸಹಿಸಲಶಕ್ಯವಾದ ಶೋಕ ತಿಳಿದಿದೆಯೋ ಏನೊ !

ಹೀಗೆಯೇ ದಿನಗಳು ಕಳೆದಿವೆ.

ಒಂದು ದಿನ.

ಮಧ್ಯಾಹ್ನ ಸೂರ್ಯನ ಶಾಖ ಪ್ರಖರವಾಗಿಯೇ ಇದೆ. ಆದರೂ ಬಳ್ಳಿಗಳ ಹಸುರೂ ನೆಳಲೂ ತೇಲಿ ಬರುತ್ತಿರುವ ಗಾಳಿಯೂ ಜಗತ್ತಿನ ಕೋಟಲೆಯನ್ನು ಅಳಿಸಿ ಹೊಸ ನಂಬಿಕೆಯನ್ನು ಉಂಟುಮಾಡುವಂತೆ ಮನಸ್ಸಿಗೆ ಆಹ್ಲಾದವನ್ನೂ ತಂಪನ್ನೂ ನೀಡುತ್ತಿದೆ.

ನರಕೇಸರಿಯಂತೆ ಧೀರ ಹೆಜ್ಜೆಯನ್ನಿಡುತ್ತ, ತನ್ನ ಕಾರ್ಯ ಜಯಪ್ರದವಾಗಲು,

ಗೆಲುವಿನ ಭಾವದೊಂದಿಗೆ ವಿಶ್ವಾಮಿತ್ರ ಅಲ್ಲಿ ಬರುತ್ತಿದ್ದಾನೆ. ಮಾರೀಚ ಮತ್ತು ಸುಬಾಹು ಹೋದ ಜಾಗ ತಿಳಿಯಲೇ ಇಲ್ಲ. ತಾಟಕಿ ಎನ್ನುವ ಕ್ರೂರ ಮುದುಕಿ ನಾಶವಾಗಿ ಹೋಗಿದ್ದಾಳೆ. ಇನ್ನು ಮುಂದೆ ಶಾಂತವಾಗಿ ಕುಳಿತು ಭಗವಂತನ ಧ್ಯಾನ ಮಾಡುವ ತಪಸ್ವಿಗಳಿಗೆ ಏನೂ ತೊಂದರೆಯಿರುವುದಿಲ್ಲ.

ವಿಶ್ವಾಮಿತ್ರ ಆಗಾಗ್ಗೆ ಹಿಂದಿರುಗಿ ನೋಡಿಕೊಳ್ಳುತ್ತಿದ್ದಾನೆ. ಆ ನೋಟದಲ್ಲಿ ಎಂಥ ಪ್ರೀತಿ, ವಾತ್ಸಲ್ಯ. ಹೌದು, ಇಬ್ಬರು ಬಾಲಕರು ಅವನನ್ನು ಹಿಂಬಾಲಿಸಿ ಬರುತ್ತಿದ್ದಾರೆ. ಅವರು ಬೇರೆ ಯಾರೂ ಅಲ್ಲ. ಅವತಾರ ಶಿಶುಗಳಾದ ರಾಮಲಕ್ಷ್ಮಣರು. ರಕ್ಕಸಕುಲದ ಅಳಿವನ್ನು ಈಗತಾನೆ ಅಲ್ಲಿ ಪ್ರಾರಂಭಿಸಿ, ಏನೂ ಅರಿಯದಂತೆ ಅವರು ಹೆಜ್ಜೆಹಾಕುತ್ತಿದ್ದಾರೆ.

ಓಡುತ್ತ ನಿಲ್ಲುತ್ತ ಆ ಬಾಲಕರು ಅಡಿಯಿಡುತ್ತಿದ್ದಾರೆ. ಮುಂದೆ ಲಕ್ಷ್ಮಣ. ಅವನ ಹಿಂದೆ ರಾಮ. ಹಾಗೆ ಬಂದ ರಾಮ ಆ ಶಿಲೆಯ ಮೇಲೆ ತನ್ನ ಪಾದವನ್ನು ಎತ್ತಿಟ್ಟಿದ್ದಾನೆ.

ಏನು ಹರ್ಷವೋ ಹೊನಲೋ ವಿಶ್ವಾಮಿತ್ರ ಆಗ ಮತ್ತೆ ಹಿಂದಿರುಗಿ ನೋಡಿದ್ದಾನೆ. ನೋಡಿದಂತೆ ಹಾಗೆಯೇ ನಿಂತುಬಿಟ್ಟಿದ್ದಾನೆ.

ಹೌದು. ಯಾವತ್ತೋ ಒರಗಿದ್ದ ಆ ಶಿಲೆಯ ನಾಡಿಗಳು ಈಗ ಮಿಡಿಯುತ್ತ ಇವೆ. ಅಲ್ಲಲ್ಲಿಯೇ ನಿಂತು ಹೆಪ್ಪುಗಟ್ಟಿದ್ದ ರಕ್ತ ಈಗ ಸಂಚಾರವಾಗತೊಡಗಿದೆ. ಶಿಲೆಯಲ್ಲಿ ಉಷ್ಣಾಂಶ ಏರುತ್ತ ಇದೆ. ಅದಕ್ಕೆ ತಿಳಿವೂ ಬರುತ್ತ ಇದೆ.

ಅಹಲ್ಯೆ ಮುಚ್ಚಿದ್ದ ಕಣ್ಣುಗಳನ್ನು ಈಗ ತೆರೆದಿದ್ದಾಳೆ. ಅವಳಿಗೆ ಎಲ್ಲವೂ ಅರಿವಾಗ ತೊಡಗಿದೆ. ಶಾಪವಿಮೋಚನೆಯಾಗಿದೆ.

ದೈವ ಹೆಜ್ಜೆಹಾಕಿ ಬಂದ ಆ ತಾಣ ಈಗ ಪವಿತ್ರವಾಗಿದೆ. ತನಗೆ ಹೊಸ ಜೀವನವನ್ನು ತುಂಬಿದ ಈ ದೈವೀಕ ಪುರುಷ ಯಾರೊ? ಆ ಬಾಲಕನೆ?

ಅವನ ಕಾಲಿಗೆ ಎರಗಿ ಸಾಷ್ಟಾಂಗ ನಮಸ್ಕಾರವನ್ನು ಮಾಡುತ್ತಿದ್ದಾಳೆ ಅಹಲ್ಯೆ. ರಾಮ ಆಶ್ಚರ್ಯದಿಂದ ಇದೇನೆಂದು ವಿಶ್ವಾಮಿತ್ರನತ್ತ ದೃಷ್ಟಿಯನ್ನು ಹಾಯಿಸಿದ್ದಾನೆ.

ವಿಶ್ವಾಮಿತ್ರನಿಗೊ ಎಲ್ಲವೂ ತಿಳಿದಿದೆ. ಇವಳು ಅಹಲ್ಯೆ. ಅಂದು ಇಂದ್ರನ ಮಾಯವೇಷಕ್ಕೆ ಈಡಾದ ಕೋಮಲೆ. ಪತಿಯ ಮೇಲಿನ ಅತಿಯಾದ ಪ್ರೀತಿಯಿಂದಲೇ. ತನ್ನ ದೇಹವನ್ನು ಮಾಯಾ ವೇಷಧಾರಿಗೆ ಈತ ಯಾರೆಂದು ತಿಳಿಯದೆ ಭಂಗತಂದು ಕೊಂಡವಳು. ಗೌತಮನ ಪತ್ನಿ.

ರಾಮನಿಗೆ ಎಲ್ಲವನ್ನೂ ತಿಳಿಯಹೇಳುತ್ತಿದ್ದಾನೆ ವಿಶ್ವಾಮಿತ್ರ. ಅದೋ, ಹುತ್ತ ಬೆಳೆದು ಕಠಿಣವಾದ ತಪಸ್ಸಿನಲ್ಲಿ ತೊಡಗಿದ್ದಾನಲ್ಲ ಆ ಗೌತಮ, ಹೌದು, ಅವನಿಗೂ ಈಗ ಎಚ್ಚರವಾಗಿ ಹೋಗಿದೆ.

ಧ್ಯಾನದಿಂದ ಎಚ್ಚೆತ್ತು ತೆರೆದಿರುವ ಗೌತಮನ ಕಣ್ಣುಗಳು, ಈಗ ಕತ್ತಿಯ ಅಲಗಿನಂತೆ ಹೊಳೆಯುತ್ತ ಇವೆ. ಕಾಯಕಲ್ಪ ಮಾಡಿಸಿಕೊಂಡವನ ಹಾಗೆ ಅವನ ದೇಹ ಬಲ ಗೊಂಡಿದೆ. ಹೆಣ್ಣಿನ ಬಂಧನದಿಂದ ಬಿಡುಗಡೆ ಹೊಂದಲು ಸಾಧ್ಯವಿಲ್ಲವೇನೋ ಎಂಬಂತೆ ಅವನೂ ಈಗ ಇತ್ತ ಹೆಜ್ಜೆ ಹಾಕಿ ಬರುತ್ತಿದ್ದಾನೆ.

ಮತ್ತೇನು ಆಳಲೊ? ಶಾಪವಿಮೋಚನೆಯ ಅನಂತರ ಮುಂದಿನ ಜೀವನ ಹೇಗೆ ಎನ್ನುವುದು ಇನ್ನೂ ನಿರ್ಧಾರವಾಗಿಲ್ಲ. ಮನಸ್ಸು ಹಾಗೆಯೂ ಹೀಗೆಯೂ ತೊನೆ ದಾಡುತ್ತ ಇದೆ.

ರಾಮನ ವಿದ್ಯೆ ಧರ್ಮದೃಷ್ಟಿಯ ಮೇಲೆ ನಟ್ಟಿದೆ. ವಸಿಷ್ಠನ ವಿದ್ಯಾಭ್ಯಾಸದಿಂದ ಪಕ್ವವಾದ ಜ್ಞಾನ ಆತನದು. ಜಗತ್ತಿನ ಆಗುಹೋಗುಗಳು ಹೇಗೆ, ಈ ರೀತಿ ವಿಪರೀತ ದಲ್ಲಿ ಹೋಗಿ ಮುಗಿಯಬೇಕೇನು? ಮನಸ್ಸಿನ ಮೇಲಾದ ಒಂದು ಪರಿಣಾಮಕ್ಕೆ ಈ ಶಿಕ್ಷೆಯೆ? "ಅಮ್ಮಾ" ಎನ್ನುತ್ತ ರಾಮ ಅಹಲ್ಯೆಯ ಪಾಪಕ್ಕೆ ಶಿರವೊಡ್ಡಿದ್ದಾನೆ.

ಈರ್ವರು ಋಷಿಗಳೂ—ಒಬ್ಬ ಪರಾಕ್ರಮವನ್ನೇ ಸಾಧನವಾಗಿ ಉಳ್ಳವನು, ಮತ್ತೊಬ್ಬ ಪ್ರೇಮವನ್ನು ಧರ್ಮವಾಗಿ ಭಾವಿಸುವವನು—ಈ ಬಾಲಕನ ನಡತೆಗೆ ಮಾರುಹೋಗಿದ್ದಾರೆ.

"ಹೃದಯದಲ್ಲಿ ಕೆಟ್ಟ ಭಾವನೆ ಇಲ್ಲದವಳು. ನೀನು ಇವಳನ್ನು ಸ್ವೀಕರಿಸುವುದೇ ಧರ್ಮ" ಎಂದು ಮೆಲ್ಲಗೆ ನುಡಿದಿದ್ದಾನೆ ವಿಶ್ವಾಮಿತ್ರ.

ಅವನ ಮಾತು ತಂಗಾಳಿಯಲ್ಲಿ ಮೆಲ್ಲಗೆ ತೇಲುತ್ತ ಇದೆ.

ಗೌತಮನೂ ಅವನ ಪತ್ನಿಯೂ ನೆಲೆಗೊಂಡಿದ್ದ ಆ ತಾಣಕ್ಕೆ ಈಗ ಜೀವಕಳೆ ಬಂದಿದೆ.

ಹೀಗೆ ಅಲ್ಲಿಗೆ ಜೀವಕಳೆಯನ್ನು ತಂದ ಆ ಮಹಾಪುರುಷರು ಈಗ ಆ ನೆಲೆಯನ್ನು ಬಿಟ್ಟಿದ್ದಾರೆ. ಹೌದು, ಸಂಜೆಯೊಳಗಾಗಿ ಅವರು ಮಿಥಿಲೆಗೆ ಹೋಗಿ ಸೇರಬೇಡವೆ? ಎರಡೂ ಕರಗಳನ್ನು ಪ್ರೀತಿಯಿಂದ ಚಾಚುತ್ತ ಮಿಥಿಲೆ ಅವರನ್ನು ಆಹ್ವಾನಿಸುತ್ತ ಇದೆ.

ಗೌತಮನಿಗೆ ಈಗ ಅಹಲ್ಯೆಯೊಂದಿಗೆ ಮೊದಲಿನಂತೆ ಮಾತಾಡಲು ಎಂಥದೋ ಸಂಕೋಚವಾಗಿದೆ. ಅವೊತ್ತು ಅವಳನ್ನು ಅವನು ಬೆಲೆವೆಣ್ಣು ಎಂದದ್ದು ಈಗ ತನ್ನ ನಾಲಿಗೆಯನ್ನೇ ಸುಟ್ಟುಕೊಂಡ ಹಾಗಾಗಿದೆ. ಹಾಗಿರುವಾಗ ಅವಳೊಂದಿಗೆ ಈಗ ಏನೆಂದು ಮಾತನಾಡುವುದು?

ಮೆಲ್ಲಗೆ ಗೌತಮ ಪತ್ನಿಯನ್ನು ಕೇಳುತ್ತಿದ್ದಾನೆ: "ಈಗ ನಿನಗೆ ಏನು ಬೇಕಾಗಿದೆ?" ಅಷ್ಟು ಹೇಳುವುದಕ್ಕೇ ಅವನಿಗೆ ಸಾಕುಸಾಕಾಗಿ ಹೋಗಿದೆ.

"ನನಗೆ ತುಂಬ ಹಸಿವಾಗುತ್ತಿದೆ" ಎಂದಳು, ಅಹಲ್ಯೆ, ಮುಗ್ಧ ಮಗುವಿನಂತೆ.

ಗಿಡಮರಗಳಿಂದ ಹಲವು ಬಗೆಯ ಹಣ್ಣುಗಳನ್ನು ಹೆಕ್ಕಿ ತಂದಿದ್ದಾನೆ ಗೌತಮ. ಪತ್ನಿಯ ಮೇಲೆ ಈಗ ಅವನಿಗೆ ಮೊದಲಿನ ಪ್ರೀತಿ ಉಂಟಾಗಿದೆ.

ಗೌತಮ ಅಹಲ್ಯೆಯನ್ನು ಹೃದಯಪೂರ್ವಕವಾಗಿ ಪ್ರೀತಿಸುತ್ತಿದ್ದವನು. ಏನೋ ಕೆಟ್ಟಕಾಲ. ಈಗ ಎಲ್ಲವೂ ತಿಳಿಯಾಗಿದೆ. ಅವನ ಮನಸ್ಸೂ ಮುದಗೊಂಡಿದೆ.

ಅಹಲ್ಯೆ ಆಹಾರವನ್ನು ಸ್ವೀಕರಿಸಿದಳು.

ಅವರಿಬ್ಬರಿಗೂ ಈಗ ತೃಪ್ತಿಯಾಗಿದೆ. ಆದರೆ ಏನೋ ಒಂದು ಬಗೆಯ ಸಂಕಟದಲ್ಲಿ ಸಂಕೋಚದಲ್ಲಿ ಅವರು ತೊಳಲಾಡುತ್ತ ಇದ್ದಾರೆ.

'ಗೌತಮನಿಗೆ ತಾನು ತಕ್ಕ ಪತ್ನಿಯೆ?' ಎನ್ನುವುದು ಅಹಲ್ಯೆಯ ಚಿಂತೆ.

'ಅಹಲ್ಯೆಗೆ ತಾನು ಸರಿಯಾದ ಪತಿಯೆ?' ಎನ್ನುವುದು ಗೌತಮನ ಸಂಕಟ.

ಆ ಪರ್ಣಕುಟಿಯ ದಾರಿಯಲ್ಲಿನ ಇಕ್ಕೆಲಗಳಲ್ಲಿರುವ ಬಗೆಬಗೆಯ ಹೂಬಳ್ಳಿಗಳು ಅವರನ್ನು ನೋಡಿ ಈಗ ನಗೆಯಾಡುತ್ತ ಇವೆ.

## 2

ಅಹಲ್ಯೆಯ ಅಪೇಕ್ಷೆಯಂತೆ, ಅಯೋಧ್ಯೆಗೆ ಸಮೀಪವಾಗಿ, ನಿರ್ಜನವಾದ ಒಂದು ಪ್ರದೇಶದಲ್ಲಿ, ಸರಯೂ ನದಿಯ ದಡದಲ್ಲಿ, ಒಂದು ಪರ್ಣಕುಟಿಯನ್ನು ಎಬ್ಬಿಸಿ ಅಲ್ಲಿ ಧರ್ಮಶಾಸ್ತ್ರವನ್ನು ಬೋಧಿಸುತ್ತಿದ್ದಾನೆ ಗೌತಮ. ಈವಾಗ ಗೌತಮನಿಗೆ ಅಹಲ್ಯೆಯ ಮೇಲೆ ಪೂರ್ಣ ನಂಬಿಕೆ. ಇಂದ್ರನ ತೊಡೆಯ ಮೇಲೆ ಅವಳು ಮಲಗಿದರೂ ಸಹ ಅವಳನ್ನು ಅವನು ಈಗ ಶಂಕಿಸಲಾರ. ಆಕೆ ಪರಿಶುದ್ಧವಾಗಿದ್ದಾಳೆ ಎನ್ನುವ ಆತ್ಮ ವಿಶ್ವಾಸ. ಅವಳ ಆರೈಕೆ, ಶುಶ್ರೂಷೆ, ಇಲ್ಲದಿದ್ದರೆ ತಾನು ಏನನ್ನೂ ಸಾಧಿಸಲು ಸಾಧ್ಯವಾಗದು ಎಂದು ಈಗ ಅವನಿಗೆ ಅರಿವಾಗಿದೆ.

ಗೌತಮನನ್ನು ಅಹಲ್ಯೆಯೂ ಈಗ ಹೃದಯಪೂರ್ವಕವಾಗಿ ಪ್ರೀತಿಸಲಾರಂಭಿಸಿದಳು. ಪತಿಯನ್ನು ನೆನೆದುಕೊಂಡಾಗೆಲ್ಲ ಅವಳ ಅಂಗಗಳು ನವವಧುವಿನಂತೆ ಪುಲಕಿತಗೊಳ್ಳುತ್ತವೆ.

ಇಷ್ಟಿದ್ದರೂ ಅಹಲ್ಯೆಯ ಮನಸ್ಸಿನಲ್ಲಿ ಮಾತ್ರ ಯಾವುದೋ ಏನೋ ನೆಟ್ಟ ಕಲ್ಲು ಜಾರದೆ ಹಾಗೆಯೇ ಉಳಿದುಕೊಂಡಿದೆ. ತನ್ನ ಬಗ್ಗೆ ಬೇರೆಯವರು ಏನೂ ಸಂದೇಹಗೊಳ್ಳದಂತೆ ಆಕೆ ತುಂಬ ಎಚ್ಚರಿಕೆಯಿಂದಲೇ ಇದ್ದಾಳೆ. ನುಡಿಯಲ್ಲಿ ಮೊದಲಿನಂತೆ ಇಲ್ಲದೆ ಹಿತಮಿತ. ತನ್ನ ಬಳಿ ಯಾರಾದರೂ ಸುಳಿದರೆ ಅಂಥವರು ಇಂದ್ರರೇನೊ ಎನ್ನುವ ಶಂಕೆ.

ಒಂದು ವಿಧವಾದ ಭಯ ಅಹಲ್ಯೆಯ ಹೃದಯದಲ್ಲಿ ಈಗ ಮನೆಮಾಡಿದೆ. ಹರ್ಷ

ವಿಲ್ಲ, ನಗೆಯಿಲ್ಲ, ಮೊದಲಿನಂತೆ. ತಾನಾಡುವ ಮಾತುಗಳು ಸರಿಯಾಗಿವೆಯೋ ಎಂದು ತಾನೇ ಅಳೆದುನೋಡುವ ಪರಿಪಾಟಿ. ಗೌತಮ ಸಾಧಾರಣವಾಗಿ ಹೇಳುವ ಮಾತು ಗಳಿಗೂ ಈಗ ಅವಳಿಂದ ತನ್ನಲ್ಲಿಯೇ ವಿಮರ್ಶೆ.

ಹೀಗಾಗಿ ಅಹಲ್ಯೆಯ ಜೀವನ ದಿನದಿಂದ ದಿನಕ್ಕೆ ನೀರಸವಾಗತೊಡಗಿದೆ.

ಅವೊತ್ತು ಮರೀಚಿ ಬಂದರು. ಮತ್ತೊಂದು ದಿನ ದಧೀಚಿ ಬಂದರು. ಮಾತಂಗರೂ ವಾರಣಾಸಿಗೆ ಹೋಗುವ ದಾರಿಯಲ್ಲಿ ಗೌತಮನ ಕುಶಲ ವಿಚಾರಿಸುವುದಕ್ಕಾಗಿ ಬಂದಿದ್ದರು. ಅವರೆಲ್ಲ ಹೃದಯ ತುಂಬಿ ಮಾತನಾಡಿದರೂ ಅಹಲ್ಯೆಯ ದೇಹ ಮಾತ್ರ ಅಸ್ಪಷ್ಟವಾಗಿ ನಡುಗುತ್ತದೆ, ಮನಸ್ಸು ಸರಿಯಿಲ್ಲದ ಅತಿಥಿಗಳ ಉಪಚಾರ. ತಾನು ಮೊದಲು ಧಾರಾಳವಾಗಿ ನಡೆದುಕೊಳ್ಳುತ್ತಿದ್ದವರಲ್ಲಿಯೂ ಈಗ ಎಂಥದೋ ಸಂಕೋಚ ಭಾವನೆ.

ಹೀಗೆ ಅವಳ ಜೀವನ ಸಾಗುತ್ತಿತ್ತು.

ಗೌತಮನ ಸಿದ್ಧಾಂತ ಈಗ ಒಂದು ಹೊಸ ರೂಪವನ್ನು ತಾಳಿತ್ತು. ಅಚಾತುರ್ಯ ವಾಗಿ ನಡೆಯುವ ಯಾವ ಕೆಲಸವೂ ಪಾಪಕಾರ್ಯ ಅಲ್ಲ. ಬೇಕೆಂದು ಪೂರ್ವಯೋಜನೆ ಹಾಕಿ ರೂಪಿಸಿದ ಕಾರ್ಯವೇ ಪಾಪಕರ್ಮವಾಗುತ್ತದೆ—ಹೀಗೆಂದು ಗೌತಮ ವಿಶಾಲ ಮನೋಭಾವನೆಯನ್ನು ಬೆಳೆಯಿಸಿಕೊಂಡಿದ್ದ.

ಶಿಥಿಲವಾಗಿದ್ದು ಈಗ ಮೊದಲಿನ ಆಶ್ರಮದಂತೆಯೆ ನಳನಳಿಸುವ ತನ್ನ ಪರ್ಣಕುಟಿಯಲ್ಲಿ ಗೌತಮನ ವಿಚಾರಧಾರೆ ಈ ರೀತಿಯಲ್ಲಿ ಸಾಗಿತ್ತು. ಅವನ ದೃಷ್ಟಿಯಲ್ಲಿ ಅಹಲ್ಯೆ ಈಗ ಪರಿಶುದ್ಧಳಾದವಳು. ಹಾಗೆ ನೋಡಿದರೆ ತನ್ನದೇ ತಪ್ಪು. ದುಡುಕಿ ಅವಳನ್ನು ವಿನಾಶದ ಅಂಚಿಗೆ ಕೊಂಡೊಯ್ದದ್ದು ಆಯಿತು.

ಸೀತೆಯೂ ರಾಮನೂ ಆಗಾಗ್ಗೆ ರಥದಲ್ಲಿ ಕುಳಿತು ಉಲ್ಲಾಸವಾಗಿ ಅಲ್ಲಿಗೆ ಬರುತ್ತಿದ್ದುದುಂಟು. ಅವತಾರದ ಶಿಶು ರಾಮ. ಗೌತಮನ ಹೃದಯದಲ್ಲಿ ಲಕ್ಷ್ಮ ಯುವಕನಾಗಿ ರೂಪುಗೊಳ್ಳುತ್ತಿದ್ದ. ಅವನ ನಗೆ; ಚೇಷ್ಟೆ ಮಾತು ಆಶ್ರಮವನ್ನು ಪಾವನಗೊಳಿಸುತ್ತಿದೆ. ಆ ದಂಪತಿಯರ ಪ್ರೇಮಹರ್ಷವೋ? ಈ ಯುವಕ–ಯುವತಿಯರನ್ನು ನೋಡಿ ಗೌತಮನಿಗೆ ತನ್ನ ಯೌವನದ ದಿನಗಳು ಮರುಕಳಿಸುತ್ತಿದೆ.

ಅಹಲ್ಯೆಯ ಮನಕ್ಲೇಶವನ್ನು ಬಗೆಹರಿಸಲು ಬಂದವಳು ಸೀತೆ. ತನ್ನ ಮೇಲೆ ಆಕೆ ತೋರಿಸುತ್ತಿದ್ದ ಪ್ರೀತಿವಾತ್ಸಲ್ಯಗಳಿಂದ ಅಹಲ್ಯೆಯ ಮನಸ್ಸು ಪ್ರಫುಲ್ಲವಾಗಿತ್ತು. ಈಗಷ್ಟೆ ಅವಳು ಮೊದಲಿನ ಅಹಲ್ಯೆ. ಈ ಮಾತು, ನಗೆ, ಕಣ್ಣುಗಳಲ್ಲಿ ಮಿಂಚು.

ಈ ದಶರಥ ಕುಮಾರರು ವಸಿಷ್ಠನ ಮೇಲ್ವಿಚಾರಣೆಯಲ್ಲಿ ಬೆಳೆದುಬಂದವರಲ್ಲವೆ? ಸರಯೂ ತೀರದಲ್ಲಿ ಈಗ ಅವರು ವಿಹಾರಮಾಡಿ ಆ ಪರ್ಣಕುಟಿ ಇರುವ ತಾಣವನ್ನು ಪವಿತ್ರಗೊಳಿಸಿದ್ದಾರೆ.

ಅಹಲ್ಯೆ ಮೊದಲು ಹೊರಗೆ ಎಲ್ಲಿ ಹೋಗಲೂ ಇಷ್ಟಪಡುತ್ತಿರಲಿಲ್ಲ. ಈಗ ಸೀತೆಯ ಸಾಮೀಪ್ಯದಿಂದ ಆ ಭಾವನೆಯನ್ನು ಅವಳು ತೊರೆದಿದ್ದಳು.

ರಾಮನ ಪಟ್ಟಾಭಿಷೇಕಕ್ಕೆ ಅಯೋಧ್ಯೆಗೆ ಬರುವುದಾಗಿ ಅಹಲ್ಯೆ ಸೀತೆಗೆ ಮಾತು ಕೊಟ್ಟಳು. ಆದರೆ ಅರಮನೆಯಲ್ಲಿ ಎಂಥ ಅನರ್ಥ ನಡೆದುಹೋಯಿತು! ರಾಮ ಕಾಡಿಗೆ ತೆರಳಿ, ದಶರಥ ಅಸುವನ್ನು ನೀಗಿ, ಕಣ್ಣೀರೊಂದಿಗೆ ಭರತ ನಂದಿಗ್ರಾಮಕ್ಕೆ ಹೋಗಿ ಸೇರಿದ್ದ.

ಮಾನವ ಯತ್ನದಂತೆ ಎಲ್ಲ ಕೆಲಸ ಕಾರ್ಯಗಳೂ ಹೇಗೆ ನಡೆಯಲು ಸಾಧ್ಯ? ವಿಧಿ ತನ್ನ ಪಾತ್ರವನ್ನು ಈಗ ಬೇರೊಂದು ದಿಕ್ಕಿಗೆ ಹರಿಸಿತ್ತು.

ವಸಿಷ್ಠರೇನೋ ಬಹಳ ಎಚ್ಚರಿಕೆಯಿಂದ ಕಣ್ಣಲ್ಲಿ ಕಣ್ಣಿಟ್ಟು ರಾಜಕಾರ್ಯ ನಡೆಯಲು ತಕ್ಕ ಏರ್ಪಾಡು ಮಾಡಿದ್ದರು ಸರಿಯೇ. ಆದರೆ ಅವರ ಯತ್ನವೆಲ್ಲವೂ ವಿಫಲವಾಗಿ ಅಯೋಧ್ಯೆ ಈಗ ಶೂನ್ಯದಲ್ಲಿ ಮುಳುಗಿತ್ತು.

ಸರಯೂ ದಡದಲ್ಲಿದ್ದ ಗೌತಮನ ಆಶ್ರಮ ಮೊದಲಿನಂತೆಯೇ ಕಳಾಹೀನ ವಾಯಿತು. ಕೆಲವು ದಿನಗಳಿಂದ ಅಲ್ಲಿದ್ದ ಚಟುವಟಿಕೆ ಮಾಯವಾಗಿ ಎಲ್ಲವೂ ನೀರಸ ವಾಗಿದೆ.

ಅಹಲ್ಯೆ? ಅವಳ ಶೋಕಕ್ಕೆ ಪಾರವಿಲ್ಲ. ಅವಳಿಗೆ ಇದು ಯಾವುದೂ ಅರ್ಥ ವಾಗಲಿಲ್ಲ. ರಾಮ ವನವಾಸಕ್ಕೆ ತೆರಳಿದ್ದಾನೆ. ಅವನ ಹಿಂದೆ ಲಕ್ಷ್ಮಣ, ಸೀತೆ. ಮೊದಲಿನಂತೆಯೇ ಅವಳ ಹೃದಯ ಯಾಕೋ ಈಗ ಕಲ್ಲಾಗತೊಡಗಿದೆ.

ಒಂದು ದಿನ ಗೌತಮ ಗಂಗೆಯಲ್ಲಿ ಮಿಂದು ಜಪ ತಪಗಳನ್ನು ಮುಗಿಸಿ ಆಶ್ರಮಕ್ಕೆ ಹಿಂತಿರುಗಿದ.

ಬಾಗಿಲಲ್ಲಿ ನಿಂತು ಆತನ ಪಾದಗಳನ್ನು ತೊಳೆಯಲು ಕೈಯಲ್ಲಿ ಚೆಂಬನ್ನು ಹಿಡಿದು ಬಂದ ಅಹಲ್ಯೆಯ ತುಟಿಗಳು ಪಟಪಟನೆ ತುಡಿಯತೊಡಗಿದುವು.

"ನನಗೆ ಯಾಕೋ ಈ ಆಶ್ರಮದಲ್ಲಿ ತುಂಬಾ ಬೇಜಾರಾಗಿದೆ. ಮಿಥಿಲೆಗೆ ಹೋಗಿ ಬರೋಣವೇನು?" ಎಂದಳು ಅಹಲ್ಯೆ.

"ಆಗಬಹುದು. ನಾನೂ ಸದಾನಂದನನ್ನು ನೋಡಿ ಬಹಳ ದಿನಗಳಾಯಿತು" ಎಂದ ಗೌತಮ.

ಇಬ್ಬರೂ ಮಿಥಿಲೆಯತ್ತ ಪ್ರಯಾಣ ಬೆಳೆಸಿದರು. ದಾರಿಯಲ್ಲಿ ಏನೋ ಭಯದಿಂದ ಅಹಲ್ಯೆ ಹಿಂಜರಿದು ಹೆಜ್ಜೆ ಹಾಕಿದಳು. ಗೌತಮ ಅವಳ ಕೈಯನ್ನು ಭದ್ರವಾಗಿ ಹಿಡಿದು ಕೊಂಡ. "ನಾನಿದ್ದೇನೆ. ಭಯಪಡಬೇಡ. ಬಾ" ಎಂದ.

## 3

ಬೆಳಗಾಯಿತು. ಗಂಗೆಯ ದಡದಲ್ಲಿ ಅವರೀರ್ವರೂ ಪ್ರಯಾಣ ಮಾಡುತ್ತಿದ್ದಾರೆ.

ಆಗ ಯಾರೋ ನದಿಯಲ್ಲಿ ಮುಳುಗಿ ಗಾಯತ್ರಿ ಜಪವನ್ನು ಮಾಡುತಿದ್ದುದು ಕಂಡುಬಂದಿತು.

ಆ ಜಪ ಮುಗಿಯುವ ವರೆಗೆ ಇವರು ಹಾಗೆಯೇ ಅಲ್ಲಿ ನಿಂತರು.

ಬಳಿಕ "ಸದಾನಂದಾ" ಎಂದು ಕೂಗನ್ನು ಹಾಕಿದ ಗೌತಮ.

"ಅಪ್ಪಾ...ಅಮ್ಮಾ..." ಎನ್ನುತ್ತ ಸದಾನಂದ ಧಾವಿಸಿ ಬಂದವನೆ ಇವರಿಗೆ ನಮಸ್ಕರಿಸಿದ.

ಅಹಲ್ಯೆ ಮಗನನ್ನು ಆಲಿಂಗಿಸಿಕೊಂಡಳು. ಮಗು, ಸದಾನಂದ, ಹೇಗೆ ಪರಕೀಯನಾಗಿ ಬಿಟ್ಟಿದ್ದಾನೆ. ಗಡ್ಡ ಮೀಸೆ ಉದ್ದ ಅಡ್ಡ ಬಿಟ್ಟು ಅವನೂ ಮುದಿ ಋಷಿಗಳ ಹಾಗೆಯೇ ಕಾಣುತ್ತ ಇದ್ದಾನೆ.

ಗೌತಮನಿಗೂ ಮಗನನ್ನು ನೋಡಿ ಸಂತೋಷವಾಯಿತು.

ಸದಾನಂದ ತನ್ನ ತಾಯಿತಂದೆಯರನ್ನು ಕರೆದುಕೊಂಡು ಆಶ್ರಮಕ್ಕೆ ಹೋದ. ಶ್ರಮಪರಿಹಾರ ಮಾಡಿಕೊಳ್ಳಲು ಸೌಲಭ್ಯಗಳನ್ನು ಒದಗಿಸಿ, ಬಳಿಕ ಆತ ಜನಕನ ತತ್ತ್ವ ವಿಚಾರ ಮಂಟಪಕ್ಕೆ ಹೊರಡಲು ಅಣಿಯಾದ.

ಗೌತಮನೂ ಮಗನೊಂದಿಗೆ ಹೊರಟ. ಮಗನ ಜತೆ ಹೋಗುವುದರಲ್ಲಿ ಆತನಿಗೂ ಒಂದು ವಿಧವಾದ ತೃಪ್ತಿ. ಬಹಳ ದೂರ ಪ್ರಯಾಣ ಮಾಡಿ ಬಂದಿದ್ದರೂ ಮನಸ್ಸು ಈಗ ಮುದಗೊಂಡಿರುವುದರಿಂದ ಆತನಿಗೆ ಆಯಾಸ ತೋರುತ್ತಿಲ್ಲ.

ಮಿಥಿಲೆಯ ಬೀದಿಗಳಲ್ಲಿ ಗೌತಮ ಹೆಜ್ಜೆ ಹಾಕುತ್ತಿದ್ದಾಗ ಅಯೋಧ್ಯೆಯಂತೆ ಮಿಥಿಲೆಯೂ ಶೋಕದಲ್ಲಿ ಮುಳುಗಿರುವುದನ್ನು ಕಂಡ. ಆತನ ನಿಟ್ಟುಸಿರು ಗಾಳಿಯಲ್ಲಿ ಸಣ್ಣದಾಗಿ ತೇಲಿಹೋಯಿತು.

ದಾರಿಯಲ್ಲಿ ಜನಗಳು ಹೋಗುತ್ತಿದ್ದರು, ಬರುತ್ತಿದ್ದರು. ಜನಜೀವನ ಎಂದಿನಂತೆಯೇ ಸಾಗಿತ್ತು. ಪೂರ್ಣಕುಂಭವನ್ನು ಹೊತ್ತ ಪಟ್ಟದಾನೆಯೂ ಇಲ್ಲಿ ಹೆಜ್ಜೆ ಹಾಕುತ್ತಿರುವುದು ಕಾಣಿಸಿತು. ಆದರೆ ಈಗ ಯಾರಿಗೂ ಅಲ್ಲಿ ಉತ್ಸಾಹ ಇದ್ದಂತೆ ಕಾಣಿಸಲಿಲ್ಲ. ಏನೋ ಆಗಬೇಕಾದ ಕೆಲಸ ಆಗಲೇಬೇಕು—ಹೀಗೆ.

ಈಗ ಇವರು ಅರಮನೆಯೊಳಗೆ ಪ್ರವೇಶಿಸಿದ್ದೂ ಆಯಿತು. ತತ್ತ್ವಶಾಸ್ತ್ರವನ್ನು ಚರ್ಚಿಸಲು ಆಗಲೇ ಅಲ್ಲಿ ತುಂಬಾ ಜನ ನೆರೆದಿದ್ದರು.

ಆದರೆ ಗೌತಮನಿಗೆ ಒಂದೇ ಚಿಂತೆ. ಮನಸ್ಸಿನ ತನ್ನ ಈಗಿನ ತುಮುಲದಲ್ಲಿ, ಈ ಚರ್ಚೆಯಲ್ಲಿ, ತಾನು ಭಾಗವಹಿಸಲು ಸಾಧ್ಯವೇ ಎನ್ನುವುದು.

ಈಗ ಜನಕನ ದೃಷ್ಟಿಗೆ ಈ ಮುನಿಶ್ರೇಷ್ಠರು ಬಿದ್ದೇಬಿದ್ದರು.

ಒಡನೆ ಜನಕ ಧಾವಿಸಿ ಬಂದವನೇ ಅರ್ಘ್ಯಪಾದ್ಯಗಳಿಂದ ಸತ್ಕರಿಸಿ ಈ ಋಷಿಗಳೀರ್ವರನ್ನೂ ತನ್ನ ಪಕ್ಕದಲ್ಲಿ ಕುಳ್ಳಿರಿಸಿಕೊಂಡ.

ಜನಕನ ಮುಖದಲ್ಲಿ ಶೋಖದ ಛಾಯೆ. ಆದರೆ ಆತ ತಾಳ್ಮೆಗೆಡದೆ ಧೈರ್ಯದಿಂದ ಇರುವವನ ಹಾಗೆ ಕಂಡ.

ಈತನೊಂದಿಗೆ ಏನು ಮಾತಾಡುವುದು ಎಂದು ಗೌತಮನಿಗೆ ಸ್ವಲ್ಪ ಕಸಿಬಿಸಿಯಾಯಿತು.

"ಉದ್ವೇಗದ ಹುಚ್ಚುಹೊಳೆಯಲ್ಲಿ, ರಾಜ್ಯದಲ್ಲಿ ಶಾಂತಿಯನ್ನು ನೆಲೆಸಲು ಸಾಧ್ಯವಿಲ್ಲದಂತಿದೆ" ಎಂದು ತನ್ನ ನೀಳವಾದ ಗಡ್ಡವನ್ನು ನೇವರಿಸುತ್ತ ಮೆಲ್ಲನೆ ನುಡಿದ ಜನಕ.

ಆತನ ಮಾತಿನಿಂದ ಗೌತಮನಿಗೆ ವ್ಯಥೆಯಾಯಿತು.

"ನಿಜ. ಆದರೆ ಇಂಥ ಸಂದರ್ಭಗಳಲ್ಲಿಯೇ ಸತ್ವದ ದರ್ಶನ ಆಗುತ್ತದೆ."

"ರಾಜ್ಯ ವಿಸ್ತರಣೆ, ಮಹದಾಕಾಂಕ್ಷೆ ಇವಿಷ್ಟೆ ಅರಸರಿಗೆ ಇದ್ದರೆ ಸಾಲದು. ತನ್ನ ಮನಸ್ಸನ್ನು ನಿಗ್ರಹಿಸುವ ಸಾಮರ್ಥ್ಯ ಇಲ್ಲದ ಮೇಲೆ ಏನು ಪ್ರಯೋಜನ?"

ಥಟ್ಟನೆ ಗೌತಮ ಕೇಳಿದ:

"ನಿಮ್ಮ ರಾಜ್ಯಕಾರ್ಯ ಹೇಗೆ ಸಾಗುತ್ತಿದೆ?"

"ನಾನು ಈ ರಾಜ್ಯವನ್ನು ಪಾಲಿಸುತ್ತಿಲ್ಲ. ಅದನ್ನು ತಿಳಿದುಕೊಳ್ಳಲು ಪ್ರಯತ್ನಿಸುತ್ತ ಇದ್ದೇನೆ."

ಇಬ್ಬರೂ ಸ್ವಲ್ಪ ಹೊತ್ತು ಮೌನವಾಗಿದ್ದರು.

ಬಳಿಕ "ತಮ್ಮ ಧರ್ಮಶಾಸ್ತ್ರ ಯಾವ ರೀತಿಯದೋ?" ಎಂದು ವಿನಯವಾಗಿ ಕೇಳಿದ ಜನಕ.

"ನನಗೂ ಅಷ್ಟೆ. ಇನ್ನೂ ನಾನು ತಿಳಿದುಕೊಳ್ಳುವುದು ಸಾಕಷ್ಟಿದೆ. ಅನೇಕ ಸಿದ್ಧಾಂತಗಳು ಇನ್ನೂ ನನಗೆ ಅರ್ಥವಾಗಿಲ್ಲ" ಎಂದು ಹೇಳುತ್ತ ಗೌತಮ ಮೇಲೆದ್ದ.

ಮಾರನೆಯ ದಿನ ಅವರು ಜನಕನ ವಿಚಾರಮಂಟಪಕ್ಕೆ ಹೋಗಲಿಲ್ಲ. ಬುದ್ಧಿಗೆ ಏನೋ ಮಂಕು ಕವಿದಿದೆ. ಚರ್ಚೆಗಿಂತ ಈಗ ಏಕಾಂತತೆ ಉತ್ತಮವೆನಿಸಿದೆ. ಅದಲ್ಲದೆ ಅಹಲ್ಯೆಯೂ ಇಲ್ಲಿ ಒಬ್ಬಳೇ ಇದ್ದು ಅವಳಿಗೆ ನೀರಸವಾಗಬಾರದಲ್ಲ.

ಆ ದಿನ ಜನಕ "ತಂದೆಯವರು ಎಲ್ಲಿ?" ಎಂದು ಕುತೂಹಲದಿಂದ ಕೇಳಿದ.

"ಅವರು ನಮ್ಮ ಆಶ್ರಮದ ಎದುರಿಗಿರುವ ಅಶೋಕ ವೃಕ್ಷದಡಿಯಲ್ಲಿ ವಿಶ್ರಾಂತಿಯನ್ನು ತೆಗೆದುಕೊಳ್ಳುತ್ತಿದ್ದಾರೆ" ಎಂದ ಸದಾನಂದ.

"ನಿಷ್ಠೆಯಲ್ಲಿದ್ದಾರೊ?"

"ಇಲ್ಲ, ಚಿಂತೆಯಲ್ಲಿ."

'ಅಲೆಯ ಹೊಯ್ದಾಟ ಇನ್ನೂ ತಣಿದಿಲ್ಲ' ಎಂದು ತನ್ನೊಳಗೇ ಹೇಳಿಕೊಂಡ ಜನಕ.

ಅಹಲ್ಯೆಗೆ ನದಿಯಲ್ಲಿ ಈಜುವುದೆಂದರೆ ತುಂಬಾ ಇಷ್ಟ. ಸೂರ್ಯೋದಯಕ್ಕೆ ಮೊದಲೇ ಆಕೆ ಬಿಂದಿಗೆಯನ್ನು ಎತ್ತಿಕೊಂಡು ಗಂಗೆಯ ತಡಿಗೆ ಹೊರಟುಬಿಡುತ್ತಿದ್ದಳು.

ಒಬ್ಬಳೇ ನದಿಯಲ್ಲಿ ಮುಳುಗಿ ಸ್ನಾನಮಾಡುವಾಗ ಅವಳ ದೇಹ ಹಗುರವಾದಂತೆ ಕಾಣುತ್ತಿತ್ತು. ಹೀಗೆ ಎರಡು ದಿನಗಳು ಕಳೆದುವು.

ಮೂರನೆಯ ದಿನ ಇದಕ್ಕೂ ತೊಡರ ಬಿತ್ತು.

ಅವೊತ್ತು ಅವಳು ಸ್ನಾನ ಮುಗಿಸಿ ಆಶ್ರಮಕ್ಕೆ ಹಿಂದಿರುಗುತ್ತಿದ್ದಳು. ಆಗ ಯಾರೋ ಅಲ್ಲಿ ಮಾತನಾಡಿಕೊಳ್ಳುತ್ತಿರುವ ಶಬ್ದ ಕೇಳಿಸಿತು.

ಹೌದು. ಕೆಲವು ಋಷಿಪತ್ನಿಯರೂ ಆಗ ಅಲ್ಲಿಗೆ ಸ್ನಾನಕ್ಕೆ ಬಂದಿದ್ದರು. ಅಹಲ್ಯೆಯನ್ನು ಕಂಡೊಡನೆ ಅವರು ದಾರಿಬಿಟ್ಟು ಅತ್ತ ಸರಿದರು.

ಅವರಲ್ಲೊಬ್ಬಳು, "ನೋಡು, ಅವಳೇ ಅಹಲ್ಯೆ" ಎಂದಳು. ಆ ಮಾತಿನಲ್ಲಿ ವ್ಯಂಗ್ಯವಿತ್ತು.

ಅಹಲ್ಯೆಯ ಹೃದಯದಲ್ಲಿ ಬಿರುಗಾಳಿಯೆದ್ದಿತು. ಹೌದು, ಗೌತಮ ಶಾಪವಿತ್ತ ದಿನ ಕೂಡ ಇಷ್ಟು ಸಂಕಟ ಆಗಿರಲಿಲ್ಲ. ಈಗ ಅವಳಿಗೆ ಅತೀವ ದುಃಖವಾಯಿತು. 'ದೇವರ ಶಾಪ ವಿಮೋಚನೆಯೇನೋ ಆಯಿತು. ಆದರೆ ಪಾಪವಿಮೋಚನೆ ಆಗಲಿಲ್ಲವಲ್ಲ' ಎಂದು ಆಕೆ ಹಲುಬಿದಳು.

ಅಂದು ಆಕೆ ಒಂದು ಮಾತು ಕತೆ ಏನೂ ಇಲ್ಲದೆ ಪತಿಗೂ ಮಗನಿಗೂ ಊಟಕ್ಕೆ ಬಡಿಸಿದಳು. ಮಗನೂ ಈಗ ಅವಳಿಗೆ ಅನ್ಯನ ಹಾಗೆಯೇ ಕಾಣುತ್ತಿದ್ದಾನೆ. ಎಲ್ಲರೂ ತನಗೆ ವಿರೋಧಿಗಳೇ. ಅಯ್ಯೋ, ಇದೆಂಥ ಜೀವನ!' ಎಂದು ಆಕೆ ಮಮ್ಮಲ ಮರುಗಿದಳು.

ಗೌತಮನೂ ಪ್ರಜ್ಞೆ ಬಂದವನ ಹಾಗೆ ಆಗಾಗ್ಗೆ ಒಂದೊಂದು ತುತ್ತು ಕವಳವನ್ನು ಬಾಯಿಗೆ ಹಾಕುತ್ತಿದ್ದ.

ತಂದೆತಾಯಿಯರ ಈ ಸ್ಥಿತಿಯಿಂದ ಸದಾನಂದನ ಮುಖವೂ ಬಾಡಿತು.

ಅವರ ಮನಸ್ಸಿನ ದುಗುಡವನ್ನು ಕಡಿಮೆಮಾಡುವುದಕ್ಕೋಸ್ಕರ ಆತ, "ಅತ್ರಿ ಋಷಿಗಳು ಜನಕರನ್ನು ನೋಡಲು ಬಂದಿದ್ದಾರೆ. ಅವರು ಅಗಸ್ತ್ಯರನ್ನು ಭೆಟ್ಟಿಮಾಡಿದ್ದರಂತೆ. ನಾಳೆ ಅವರ ಪಯಣ. ರಾಮನೂ ಸೀತೆಯೂ ಅಗಸ್ತ್ಯರ ದರ್ಶನವನ್ನು ಪಡೆದಿದ್ದರಂತೆ. 'ಪಂಚವಟಿ ಎನ್ನುವ ಒಂದು ನೆಲೆ ಇದೆ. ಅದು ನಿಮ್ಮ ವಾಸಸ್ಥಳಕ್ಕೆ ಯೋಗ್ಯವಾಗಿದೆ' ಎಂದು ಅಗಸ್ತ್ಯರು ಅವರಿಗೆ ಹೇಳಿದರಂತೆ" ಎಂದ ಸದಾನಂದ.

"ನಾವೂ ತೀರ್ಥಯಾತ್ರೆಗೆ ಹೊರಟರೆ ಏನು?" ಎಂದು ಮೆಲ್ಲನೆ ನುಡಿದಳು ಅಹಲ್ಯೆ.

"ಹೊರಡೋಣವೇನು?" ಎನ್ನುತ್ತ ಎದ್ದೇಬಿಟ್ಟ ಗೌತಮ.

"ಇಷ್ಟು ಬೇಗ !" ಎಂದು ಪ್ರಶ್ನೆಹಾಕಿದ ಸದಾನಂದ.

"ಹೌದು" ಎನ್ನುತ್ತ ಕಮಂಡಲವನ್ನು ಎತ್ತಿಕೊಂಡು ಆಶ್ರಮದಿಂದ ಹೊರಬಂದ ಗೌತಮ.

ಅಹಲ್ಯೆ ಅವನನ್ನು ಹಿಂಬಾಲಿಸಿದಳು.

ಸದಾನಂದನ ಮನಸ್ಸು ಶೋಕದಿಂದ ತುಂಬಿಹೋಯಿತು.

4

ಸೂರ್ಯಾಸ್ತದ ಸಮಯ. ಸರಯೂ ತೀರದಲ್ಲಿ ಇಬ್ಬರು ಅಯೋಧ್ಯೆಗೆ ಅಭಿಮುಖವಾಗಿ ಹೆಜ್ಜೆಹಾಕಿ ಬರುತ್ತಿದ್ದಾರೆ.

ಹದಿನಾಲ್ಕು ವರ್ಷಗಳ ಕಾಲಚಕ್ರ ಉರುಳಿದೆ. ಅವರು ನೋಡದಿದ್ದ ಪುಣ್ಯಕ್ಷೇತ್ರ ವಿಲ್ಲ, ಋಷಿಸಮೂಹವಿಲ್ಲ. ಆದರೆ ಅವರ ಮನಸ್ಸಿಗೆ ಮಾತ್ರ ಶಾಂತಿ ಇಲ್ಲ.

ಬಲಹೀನನಾದವನ ಕಾಲುಗಳಂತೆ ಹೆಜ್ಜೆ ಇಟ್ಟು, ಒಂದು ಗೊತ್ತು, ಒಂದು ಗುರಿ ಇಲ್ಲದೆ ಅವರು ಎಲ್ಲೆಲ್ಲಿಯೋ ಸಂಚರಿಸಿದ್ದಾರೆ.

ಹೀಗೆ ದಿನಗಳನ್ನು ಕಳೆದು ಅವರು ಈಗ ಹಿಂದಿರುಗಿ ಬಂದಿದ್ದಾರೆ.

'ಇನ್ನೂ ಕೆಲವೇ ದಿನಗಳಲ್ಲಿ ರಾಮ ಮರಳುತ್ತಾನೆ. ಆಗಲಾದರೂ ಮನಸ್ಸಿಗೆ ಶಾಂತಿ ದೊರಕೀತು' ಎನ್ನುವ ಆಸೆಯೇ ಅವರು ಮತ್ತೆ ಇಲ್ಲಿಗೆ ಹಿಂದಿರುಗಲು ಕಾರಣ.

ಹದಿನಾಲ್ಕು ವರುಷಗಳು ಕಳೆದ ಮೇಲೆ ಮತ್ತೆ ಅದೇ ಜಾಗದಲ್ಲಿ ಗೌತಮ ಆಶ್ರಮ ಎಬ್ಬಿಸಿದ. ಒಂದು ರಾತ್ರಿಯಲ್ಲಿಯೇ ಅವರ ಗುಡಿಸಲು ಸಿದ್ಧವಾಗಿಹೋಯಿತು. ಅವರ ಕೆಲಸ ಮುಗಿಯುವಾಗ ಬೆಳಗಾಗಿತ್ತು.

ಇಬ್ಬರೂ ಸರಯೂ ನದಿಗೆ ಹೋಗಿ ಮಿಂದು ಬಂದರು.

ಪತಿಯ ಶುಶ್ರೂಷೆಯಲ್ಲಿ ತೊಡಗಿದಳು ಅಹಲ್ಯೆ. ಅವರಿಬ್ಬರ ಹೃದಯಗಳೂ ಸೀತಾರಾಮರ ಬರವನ್ನು ನಿರೀಕ್ಷಿಸುತ್ತಿದ್ದುವು. ಆದರೆ ಯಾವುದಕ್ಕೂ ಒಂದು ಕಾಲ ಬರಬೇಕಲ್ಲ. ನಿರೀಕ್ಷಿಸಿದಂತೆಯೇ ಎಲ್ಲವೂ ನಡೆಯಲು ಆದೀತೆ?

ಒಂದು ದಿನ ಮುಂಜಾನೆ ಅಹಲ್ಯೆ ಸ್ನಾನಕ್ಕೆಂದು ನದಿಗೆ ಹೋಗಿದ್ದಳು.

ಅವಳಿಗೆ ಮೊದಲು, ಯಾರೋ ಒಬ್ಬಳು ವಿಧವೆ, ಸ್ನಾನಮುಗಿಸಿ ಆ ದಾರಿಯಲ್ಲಿ ಹಿಂದಿರುಗಿ ಬರುತ್ತಿದ್ದಳು. ದೂರದಲ್ಲಿ ಅವಳು ಯಾರು ಎನ್ನುವುದು ತಿಳಿಯಲಿಲ್ಲ. ಆದರೆ ತನ್ನನ್ನು ಸಮೀಪಿಸಿದಂತೆ ಆಕೆ ಯಾರು ಎನ್ನುವುದು ಅಹಲ್ಯೆಗೆ ತಿಳಿದು ಹೋಯಿತು.

ಅಹಲ್ಯೆಯನ್ನು ನೋಡಿದ್ದೊಡನೆ ಆಕೆ ಧಾವಿಸಿ ಬಂದವಳೇ ಬಾಗಿ ಈ ಮುನಿಪತ್ನಿಯ ಪಾದಗಳನ್ನು ಹಿಡಿದುಬಿಟ್ಟಳು.

ಹೌದು. ಅವಳು ಕೈಕೇಯಿ. ಏಕಾಂಗಿನಿಯಾಗಿ ಬಂಧುಗಳೂ ಪರಿವಾರದವರೂ ಯಾರೂ ಇಲ್ಲದೆ ಈಕೆ ಹೀಗೆ ತಪಸ್ವಿನಿಯ ಹಾಗೆ ಆಗಿಬಿಟ್ಟಳಲ್ಲ.

ಬಿಂದಿಗೆಯನ್ನು ಕೆಳಗಿಟ್ಟು ಕೈಕೇಯಿಯ ಎರಡು ಕರಗಳನ್ನೂ ಹಿಡಿದು ಮೇಲೆತ್ತಿ ಕೊಂಡಳು ಅಹಲ್ಯೆ. ಕೈಕೇಯಿಯ ಇಂಥ ವರ್ತನೆ ಅಹಲ್ಯೆಗೆ ಆಗ ಅರ್ಥವಾಗಲೇ ಇಲ್ಲ.

"ಸತ್ಯವಚನದ ಪಾಲನೆಯಲ್ಲಿ ಭರತ ನನ್ನನ್ನು ಸಂಪೂರ್ಣವಾಗಿ ಮರೆತಿದ್ದಾನೆ" ಎಂದಳು ಕೈಕೇಯಿ.

ಅವಳ ದನಿಯಲ್ಲಿ ಕೋಪವಿಲ್ಲ, ತಾಪವಿಲ್ಲ. 'ಹೌದು, ಇವಳು ಮೊದಲಿನ ಕೈಕೇಯಿ ಅಲ್ಲವೇ ಅಲ್ಲ.' ಹಾಗೆಂದು ಅಹಲ್ಯೆ ತನ್ನೊಳಗೇ ಹೇಳಿಕೊಂಡಳು.

ಇಬ್ಬರೂ ಕೈಹಿಡಿದುಕೊಂಡು ಸರಯೂ ತೀರದಲ್ಲಿ ಉದ್ದಕ್ಕೂ ನಡೆದರು. "ಭರತನ ವೈರಾಗ್ಯಕ್ಕೆ ಯಾರು ಕಾರಣ?" ಎಂದಳು ಅಹಲ್ಯೆ. ಅವಳ ತುಟಿಗಳ ಮೇಲೆ ಅನು ತಾಪದಿಂದ ಕೂಡಿದ ಮುಗುಳುನಗೆ.

"ಮಗು ಇಟ್ಟ ಬೆಂಕಿ ಊರನ್ನೂ ಸುಡಹತ್ತಿದರೆ ಆ ಮಗುವನ್ನು ಕೊಂದುಹಾಕ ಬೇಕೇನು?" ಎಂದಳು ಕೈಕೇಯಿ.

ಮಗುವಿಗೂ ಬೆಂಕಿಗೂ ನಡುವೆ ಒಂದು ಅಡ್ಡಕಟ್ಟೆಯನ್ನು ಕಟ್ಟುವುದು ಒಳ್ಳೆಯದು ಎಂದುಕೊಂಡಳು ಅಹಲ್ಯೆ. ಆದರೆ "ಸುಟ್ಟದ್ದನ್ನು ಏನು ಮಾಡಲೂ ಸಾಧ್ಯವಿಲ್ಲವಲ್ಲ" ಎಂದಳು.

"ನಿಜ. ಆದರೆ ಆ ಜಾಗವನ್ನೂ ಶುದ್ಧಿಮಾಡದೆ ಬರೇ ಬೂದಿರಾಶಿಯನ್ನು ಹಾಕಿ ಕೊಂಡು ಕುಳಿತರೆ ಏನು ಪ್ರಯೋಜನ?" ಎಂದಳು ಕೈಕೇಯಿ.

"ಬೂದಿರಾಶಿಯನ್ನು ಅತ್ತ ತಳ್ಳುವವನು ಇನ್ನು ಒಂದು ಎರಡು ದಿನಗಳಲ್ಲಿ ಬರುತ್ತಾನೆ" ಎಂದಳು ಅಹಲ್ಯೆ.

"ಹೌದು" ಎಂದಳು ಕೈಕೇಯಿ, ಅವಳ ದನಿಯಲ್ಲಿ ಈಗ ಆತ್ಮವಿಶ್ವಾಸ ತುಂಬಿತ್ತು. ನಿಜವಾಗಿಯೂ ರಾಮನ ಬರವನ್ನು ದಿನದಿನಕ್ಕೂ ನಿರೀಕ್ಷಿಸುತ್ತಿದ್ದವಳು ಭರತನಿಗಿಂತ ಕೈಕೇಯಿಯೇ.

ಮೂರನೆಯ ದಿನ ಆಕೆ ಅಹಲ್ಯೆಯನ್ನು ಸಂಧಿಸಿದಾಗ ಅವಳ ಮುಖ ಬಿಳಿಚಿ ಕೊಂಡಿತ್ತು. ಮುಖದಲ್ಲಿ ಕರಾಳ ಛಾಯೆ.

"ಬೇಹುಗಾರರನ್ನು ನಾಲ್ಕು ದಿಕ್ಕುಗಳಿಗೂ ಕಳಿಸಿ ನೋಡಿಯಾಯಿತು. ರಾಮನ ಬಗ್ಗೆ ಸುದ್ದಿಯಿಲ್ಲ. ಇನ್ನು ನಾಲ್ವತ್ತು ಘಳಿಗೆಗಳಲ್ಲಿ ಅವನು ಎಲ್ಲಿಂದ ಬರಲು ಸಾಧ್ಯವಿದೆ?

ಭರತ ಪ್ರಾಯೋಪವೇಶವನ್ನು ಮಾಡಿಕೊಳ್ಳುತ್ತಾನಂತೆ. ಅಗ್ನಿಕುಂಡ ಸಿದ್ಧವಾಗುತ್ತ ಇದೆ" ಎಂದಳು ಕೈಕೇಯಿ.

ಭರತ ತನ್ನನ್ನು ಅಗ್ನಿಗೆ ಆಹುತಿಮಾಡಿಕೊಳ್ಳುವುದು ತನ್ನ ಮೇಲೆ ಹೊರಿಸಿದ ರಾಜ್ಯದ ಮೋಹವನ್ನು ತೀರಿಸಲು ತಕ್ಕ ಪ್ರಾಯಶ್ಚಿತ್ತ ಎನ್ನುವ ರೀತಿಯಲ್ಲಿತ್ತು ಕೈಕೇಯಿಯ ಮಾತಿನ ಧಾಟಿ.

ಸ್ವಲ್ಪ ಹೊತ್ತು ಕಳೆದ ಮೇಲೆ "ನಾನೂ ಅಗ್ನಿಪ್ರವೇಶ ಮಾಡುತ್ತೇನೆ. ಆದರೆ ಬಹಿರಂಗವಾಗಿ ಅಲ್ಲ. ಯಾರಿಗೂ ಕಾಣಿಸದಂತೆ" ಎಂದಳು ಕೈಕೇಯಿ. ಅವಳ ಮನಸ್ಸು ಈಗ ವೈರಾಗ್ಯದಿಂದ ತುಂಬಿತ್ತು.

ಹದಿನಾಲ್ಕು ವರ್ಷಗಳು ಕಳೆದ ಮೇಲೆಯೂ ಮತ್ತೆ ಬಿರುಗಾಳಿ. ಅಯೋಧ್ಯೆಗೆ ಕವಿದಿದ್ದ ಶಾಪ ಇನ್ನೂ ಮುಗಿಯಲಿಲ್ಲವೋ ಏನೋ?

ಅಹಲ್ಯೆಯ ಮನಸ್ಸೂ ಗರಿಗೆದರಿ ಹಾರಾಡಿತು. ಇದು ನನ್ನ ಮೇಲಿಟ್ಟ ಪಾದದ ಪಾಪದ ಛಾಯೆಯೋ ಎಂದೂ ಅವಳು ಶಂಕಿಸಲಾರಂಭಿಸಿದಳು.

"ವಸಿಷ್ಠರಿಗಾದರೂ ಹೇಳಿ ಈ ಕಾರ್ಯಕ್ಕೆ ತಡೆಹಾಕಲು ಸಾಧ್ಯವಿಲ್ಲವೋ?" ಎಂದಳು ಅಹಲ್ಯೆ.

"ಭರತ ಸತ್ಯದ ಹಾದಿಯಲ್ಲಿ ಧರ್ಮಶಾಸ್ತ್ರದಂತೆ ನಡೆಯುವವನು. ವಸಿಷ್ಠರು ಹೇಳಿದ ಹಾಗಲ್ಲ" ಎಂದಳು ಕೈಕೇಯಿ.

ಅಹಲ್ಯೆಯ ಹುಬ್ಬುಗಳು ಕೂಡಿಕೊಂಡುವು. ಅವಳು ಸಿಟ್ಟಿನಿಂದ ಕೂಗಿಕೊಂಡಳು:

"ಮಾನವನ ಕೈಗೆ ಎಟುಕದ ಧರ್ಮ ಮಾನವ ಕುಲಕ್ಕೆ ಶತ್ರು ಇದ್ದ ಹಾಗೆ."

ತನ್ನ ಪತಿಯ ಮಾತಿಗೆ ಒಂದು ಸಮಯ ಭರತ ತನ್ನ ನಿರ್ಧಾರವನ್ನು ಬದಲಿಸಲು ಸಾಧ್ಯವಾಗಬಹುದೋ ಎನ್ನುವ ಚಪಲ ಅಹಲ್ಯೆಗೆ.

ಗೌತಮ ಒಪ್ಪಿಕೊಂಡ. ಆದರೆ ಅವನ ಮಾತೂ ನಡೆಯಲಿಲ್ಲ.

ಭರತನನ್ನು ಆಹುತಿ ತೆಗೆದುಕೊಳ್ಳಲು ಅಗ್ನಿಗೆ ಇಷ್ಟವಿಲ್ಲ ಎಂದು ಕಾಣುತ್ತದೆ. ಆಂಜನೇಯ ಹಾರಿ ಬಂದ.

ಅಗ್ನಿಕುಂಡಕ್ಕೆ ನೀರು ಸುರಿದದ್ದಾಯಿತು. ದಿಕ್ಕುದಿಕ್ಕುಗಳಲ್ಲಿ ವ್ಯಾಪಿಸಿದ್ದ ಶೋಕದ ತೆರೆ ಸರಿಯಿತು. ಧರ್ಮಕ್ಕೆ ಮತ್ತೆ ಜಯವಾಯಿತು.

ಹದಿನಾಲ್ಕು ವರ್ಷಗಳು ಕಳೆದ ಮೇಲೆ ತನ್ನ ಕನಸು ಸಿದ್ಧಿಸುತ್ತಿದೆ ಎಂದು ವಸಿಷ್ಠ ಪುಳಕಿತನಾದ.

ಇನ್ನುಮೇಲೆ ನಮಗೆ ಅಲ್ಲಿ ಏನು ಕೆಲಸ ಎಂದು ಗೌತಮನೂ ಹಿಂದಿರುಗಿದ.

ಸೀತೆಯೂ ರಾಮನೂ ತಮ್ಮನ್ನು ನೋಡಲು ಬರುತ್ತಾರೆ ಎನ್ನುವಾಗ ಅಹಲ್ಯೆಯ ಹೃದಯ ತುಂಬಿಹೋಯಿತು. ಅವರ ಆಗಮನದ ವೈಭವ ಎಲ್ಲ ಮುಗಿದ ಮೇಲೆ,

ಒಂದು ದಿನ ರಾಜಪರಿವಾರವಿಲ್ಲದೆ ಅವರಿಬ್ಬರೇ ಆಶ್ರಮಕ್ಕೆ ಬಂದರು.

ರಥದಿಂದ ಇಳಿದು ಬಂದ ರಾಮನ ಮುಖ ಗೆಲುವಿನಿಂದ ತುಂಬಿತ್ತು. ಸೀತೆಯ ತೇಜಸ್ಸು ಈಗ ಮೊದಲಿಗಿಂತಲೂ ವರ್ಧಿಸಿತ್ತು. ಅವರೀರ್ವರೂ ನಗೆಯಾಡುತ್ತ ಆಶ್ರಮಕ್ಕೆ ಪ್ರವೇಶಿಸಿದರು.

ರಾಮನನ್ನು ಕರೆದುಕೊಂಡು ಗೌತಮ ಹೊರಗೆ ಅಡ್ಡಾಡಲು ಹೊರಟ.

ಗರ್ಭವತಿಯಾದ ಸೀತೆಯನ್ನು ಒಳಗೆ ಕರೆದೊಯ್ದು ಉಪಚರಿಸಿದಳು ಅಹಲ್ಯೆ. ಉಲ್ಲಾಸದಿಂದ ಅವರು ಮಾತಿಗೆ ಪ್ರಾರಂಭಿಸಿದರು.

ರಾವಣ ತನ್ನನ್ನು ಬಲಾತ್ಕಾರವಾಗಿ ಒಯ್ದುದ್ದು, ಆ ಕೋಟಲೆ, ಬಳಿಕ ಹಿಂದಿರುಗಿ ಬಂದ ಬಗೆ—ಎಲ್ಲವನ್ನೂ ವಿವರಿಸಿ ಹೇಳಿದಳು ಸೀತೆ. ಅಗ್ನಿಪ್ರವೇಶದ ಕತೆಯನ್ನೂ ವಿವರಿಸಿದಳು.

ಅಹಲ್ಯೆ ಆಗ ಮಧ್ಯೆ ಪ್ರವೇಶಿಸಿ ಕೇಳಿದಳು:

"ಅವರೇ ಹಾಗೆ ಮಾಡಬೇಕು ಎಂದು ಹೇಳಿದರೆ? ನೀನು ಯಾಕೆ ಹಾಗೆ ಮಾಡಿದೆ?"

"ಅವರು ಹೇಳಿದರು. ನಾನು ಮಾಡಿದೆ."

"ಯಾರು ಹಾಗೆ ಹೇಳಿದವರು?" ಎಂದು ಕೂಗಿಕೊಂಡಳು ಅಹಲ್ಯೆ. ಆಗ ಅವಳ ಮನಸ್ಸು ಕಲ್ಲಾಗಿ ಆಕೆ ಹುಚ್ಚು ಹಿಡಿದವಳಂತೆಯೇ ಕಂಡಳು.

ಅಹಲ್ಯೆಗೆ ಒಂದು ನೀತಿ. ರಾಮನಿಗೆ ಬೇರೊಂದು ನೀತಿ. ಗೌತಮ ತನಗೆ ಶಾಪವಿತ್ತುದು ಸರಿಯೇ?

ಇಬ್ಬರೂ ಬಹಳ ಹೊತ್ತು ಮೌನವಾಗಿದ್ದರು.

"ಜಗತ್ತಿಗೆ ನಾವು ಪರಿಶುದ್ಧರೆಂದು ತೋರಿಸಿಕೊಳ್ಳಬೇಡವೆ?" ಎಂದಳು ಸೀತೆ, ಮೃದುವಾಗಿ.

"ಪರಿಶುದ್ಧವಾಗಿದ್ದರೆ ಸಾಕು. ಹಾಗೆಂದು ಜಗತ್ತಿಗೆ ನಿರೂಪಿಸಲು ಸಾಧ್ಯವೇ?" ಎಂದಳು ಅಹಲ್ಯೆ. ಅವಳ ದನಿಯಲ್ಲಿ ದುಗುಡ ತುಂಬಿತ್ತು.

ಅಹಲ್ಯೆ ಮೇಲೂ ಮುಂದುವರಿಸಿದಳು:

"ಒಂದು ಸಮಯ ನಿರೂಪಿಸಲು ಹೊರಡೋಣ. ಆದರೆ ನಮ್ಮ ಹೃದಯದ ಮಿಡಿತ ಯಾರಿಗೆ ಅರಿವಾಗಬೇಕು? ಈ ಜಗತ್ತು ಎನ್ನುವುದು ಯಾವುದು?"

ಹೊರಗೆ ಶಬ್ದವಾಯಿತು. ರಾಮನೂ ಗೌತಮನೂ ಹಿಂದಿರುಗಿ ಬಂದಿದ್ದರು.

ಸೀತೆ ಅಯೋಧ್ಯೆಗೆ ಹಿಂದಿರುಗಲು ಆಶ್ರಮದಿಂದ ಹೊರಬಂದಳು. ಆದರೆ ಅವಳನ್ನು ಬೀಳ್ಕೊಡಲು ಅಹಲ್ಯೆ ಒಳಗಿಂದ ಎದ್ದು ಬರಲಿಲ್ಲ.

ರಥ ಹೊರಟಿತು. ಅದರ ಗಾಲಿಗಳು ಚರಚರನೆ ಸುತ್ತಿದುವು.

ಗೌತಮ ಹಾಗೆಯೇ ನಿಂತು ಚಿಂತೆಯಲ್ಲಿ ಮುಳುಗಿದ. ಒಂದೂ ತೋಚದೆ ಅವನು ಈಗ ತ್ರಿಶಂಕು ಸ್ಥಿತಿಯಲ್ಲಿದ್ದ.

ಈಗ ಅವನಿಗೆ ಹೊಸತ್ತೊಂದು ಯೋಚನೆ ಮಿಂಚಿತು. ಅಹಲ್ಯೆಗೆ ಏನೋ ಮನಃ ಕ್ಲೇಶ, ತುಂಬುದುಗುಡ. ಹೌದು, ಅವಳ ಮನಸ್ಸಿನ ಚಿಂತೆ ಕಡಿಮೆಯಾಗಲು ತಮಗೆ ಒಂದು ಮುದ್ದಾದ ಮಗು ಈಗ ಆದರೆ ಏನಂತೆ! ಅದರ ಒಡನಾಟದಿಂದ ಸೊಬಗಿನಿಂದ ಅಹಲ್ಯೆ ಹಿಂದಿನದು ಎಲ್ಲವನ್ನೂ ಮರೆಯಬಹುದು ಅಲ್ಲವೆ?

ಈ ಯೋಚನೆ ಹೊಳೆಯುತ್ತಲೇ ಗೌತಮ ಆಶ್ರಮದೊಳಗೆ ಪ್ರವೇಶಿಸಿದ.

ಅಹಲ್ಯೆಗೆ ನೆನಹು ತಪ್ಪಿದ ಸ್ಥಿತಿ. ಅವಳ ಮನಸ್ಸಿನ ವಿಶಾಲವಾದ ತೆರೆಯ ಮೇಲೆ ಮರೆತು ಹೋದ ಇಂದ್ರನಾಟಕ ಮತ್ತೆ ಸುಳಿದಾಡುತ್ತ ಇದೆ.

ಗೌತಮ ಅವಳನ್ನು ಸಮೀಪಿಸಿದ. ಅಹಲ್ಯೆಗೆ ಇಂದ್ರ, ಗೌತಮನ ಕಪಟ ವೇಶದಲ್ಲಿ ಮತ್ತೆ ಈಗ ಬಂದ ಹಾಗಾಯಿತು. ಅವಳ ಹೃದಯ ಶಿಲೆಯಾಗಿ ಪರಿವರ್ತನೆಗೊಳ್ಳುತ್ತಿತ್ತು.

ಎಂಥ ಶಾಂತಿ! ಗೌತಮನ ಕೈಗೆ ಈಗ ಸಿಕ್ಕಿದ್ದು ಒಂದು ಕಲ್ಲುಬೊಂಬೆ.

ಅಹಲ್ಯೆ ಮತ್ತೆ ಶಿಲೆಯಾಗಿ ಹೋದಳು. ಅವಳ ಹೃದಯದ ಭಾರ ಈಗ ತಣಿದಿತ್ತು.

ಆ ಆಶ್ರಮದ ಮುಂದೆ ನೀಳವಾದ ಹಾದಿ. ಅದಕ್ಕೂ ವೈರಾಗ್ಯ ಹಿಡಿದಿರುವ ಹಾಗೆ. ಅಲ್ಲಿ ಒಬ್ಬ ಋಷಿ ಉದ್ದಕ್ಕೆ ನಡೆದುಹೋಗುತ್ತಿದ್ದ.

ಹೌದು. ಅವನೇ ಗೌತಮ.

# ಮಂದಪ್ರಕಾಶ

ಅಬ್ಬಾ, ಅವಳ ದುಃಖ ಪರಿಹಾರವಾಯಿತು ಎಂದು ಒಂದು ಸಲ ಅನ್ನಿಸಿತು.

ಅಯ್ಯೋ, ತಿಳಿದೂ ತಿಳಿದೂ ಸಾಯುವ ಸ್ಥಿತಿಯಲ್ಲಿದ್ದ ಅವಳನ್ನು ಬಿಟ್ಟು ಬಂದೆನಲ್ಲ – ಎಂದು ಮತ್ತೊಂದು ಸಲ ಕೊರಗು.

ನಾನು ಏನು ಮಾಡಲು ಸಾಧ್ಯವಿತ್ತು? ಅವಳು ಬಿಟ್ಟುಕೊಟ್ಟರೆ ಅಲ್ಲವೆ?

ಆ ಮನೆಯಿಂದ ಹೊರಬಂದ ಮೇಲೆ ಎಷ್ಟೋ ಸಲ ಅಲ್ಲಿಗೆ ಹೋಗಿಯೂ ಅವಳನ್ನು ನೋಡಲು ಸಾಧ್ಯವಾಗಲಿಲ್ಲ.

ನಿನ್ನೆ ಹೋಗಿದ್ದೆ, ಆಕೆ ಹೃದಯಾಘಾತದಿಂದ ಅಸು ನೀಗಿದಳಂತೆ.

ಹೃದಯಾಘಾತ?

ಆ ಹೃದಯದಲ್ಲಿ ಇನ್ನೂ ಎಷ್ಟೆಷ್ಟು ರಹಸ್ಯಗಳು ಅಡಗಿ ಅದನ್ನು ಮುಚ್ಚಿ ಹಾಕಿತೋ?

ಆ ರಾತ್ರಿ ಕೆಲವೊಂದನ್ನು ಮಾತ್ರ ನನ್ನಲ್ಲಿ ಅವಳು ಬಹಿರಂಗಪಡಿಸಿದಳು ಎಂದು ಕಾಣುತ್ತದೆ.

"ಸಾಕು, ಮಂದಪ್ರಕಾಶವೇ ಸಾಕು. ಮೇಲೂ ಹೇಳಲು ಸಾಧ್ಯವಿಲ್ಲ" ಎಂದು ಕೊನೆಯದಾಗಿ ಅವಳು ಹೇಳಿದ್ದಳು.

ಅವಳು ಹೇಳಿದ್ದಷ್ಟೇ ನನ್ನ ಹೃದಯವನ್ನು ಹೊಕ್ಕು ತುಂಬ ಘಾಸಿಮಾಡಿತ್ತು.

ಅದನ್ನು ಅರಿತೆ ಅವಳು ಅಷ್ಟಕ್ಕೇ ನಿಲ್ಲಿಸಿಕೊಂಡಿದ್ದಳು. ಇನ್ನೇನು? ಈಗ ಅವಳಿಲ್ಲ. ಅವಳು ಹೇಳಿದುದನ್ನೆಲ್ಲ ಹಾಗೆಯೇ ಹೇಳಿಬಿಡುತ್ತೇನೆ.

ಕಳೆದ ವರ್ಷ ನಾನು ಮದರಾಸಿನಲ್ಲಿ ಒಂದು ಮನೆಯೊಳಗೆ ಕೊಠಡಿಯೊಂದರಲ್ಲಿ ಬಾಡಿಗೆಗೆ ಇದ್ದೆ. ಒಳಗೆ ಒಂದೇ ಸಂಸಾರ. ಗಂಡ ಹೆಂಡತಿ ಇಬ್ಬರೇ. ಆತನಿಗೆ ಯಾವುದೋ ಬ್ಯಾಂಕಿನಲ್ಲಿ ಕೆಲಸ. ಹಗಲು ಆತನು ಮನೆಯಲ್ಲಿರುತ್ತಲೇ ಇರಲಿಲ್ಲ; ರಾತ್ರಿ ಇರುವ ಹಾಗೆ ಲೆಕ್ಕ. ಊಟಮಾಡಿ ಹೊರಗೆ ಹೊರಟು ಹೋಗುತ್ತಿದ್ದ. ಮಧ್ಯ ರಾತ್ರಿಯೋ ಎರಡು ಗಂಟೆಗೋ ಬಂದು ಬಾಗಿಲನ್ನು ಬಡಿಯುತ್ತಿದ್ದ.

ಆ ಮನೆಯಲ್ಲಿ, ಅದೂ ಒಂದೇ ಗೋಡೆಯಿದ್ದು ಆ ಕಡೆ ಅವರು ಈ ಕಡೆ ನಾನು – ಹೀಗೆ ಒಬ್ಬಂಟಿಗನಾಗಿರುವುದು ನನಗೇ ಅತೀವ ಸಂಕಟವಾಗಿತ್ತು. ನಾನು ಬರಹಗಾರ, ಹಗಲೂ ಇರುಳೂ ಮನೆಯಲ್ಲಿಯೇ ಇರುವವನು. ಬೆಳಗ್ಗೆ ಮತ್ತು ಸಂಜೆ ಮಾತ್ರ ಸ್ವಲ್ಪ ಹೊತ್ತು ಹೊರಗೆ ಅಡ್ಡಾಡುತ್ತಿದ್ದೆ.

ಆತ ಒಂದು ದಿನ ನನ್ನೊಂದಿಗೆ ಹೇಳಿದ:

"ಸಾರ್, ನೀವು ಹೀಗೆ ಒಬ್ಬರೇ ಇಲ್ಲಿ ಇರುವುದಕ್ಕೆ ಏನೂ ಸಂಕೋಚಪಡಬೇಡಿ.

ನಾನು ಸಂದೇಹದ ಮನುಷ್ಯ ಅಲ್ಲ. ನಿಮ್ಮಷ್ಟಕ್ಕೇ ನೀವು ನಿಮ್ಮ ಕೆಲಸದಲ್ಲಿರುತ್ತೀರಿ. ಯಾರ ಯಾರ ಗುಣ, ಸ್ವಭಾವ ಹೇಗೆ ಎನ್ನುವುದು ನನಗೆ ಗೊತ್ತಿದೆ. ನಿಮ್ಮಂಥಹ ಗುಣವುಳ್ಳವರು ಮನೆಯಲ್ಲಿ ಇರುವುದರಿಂದಲೇ, ನಾನು ಮನೆಯ ಯೋಚನೆಯನ್ನು ಬಿಟ್ಟು ಹೊರಗೆ ಸುತ್ತಾಡಲು ಸಾಧ್ಯವಾಗಿದೆ........"

'ನಿಮ್ಮಂಥ ಗುಣವುಳ್ಳವರು' ಎಂದು ಆತ ಹೇಳಲು ನನ್ನಲ್ಲಿ ಯಾವ ವಿಶೇಷವಿತ್ತು?

ಆ ಹೆಣ್ಣುಮಗಳು, ಸಾವಿತ್ರಿ, ಸಾಮಾನ್ಯವಾಗಿ ನನ್ನ ಕಣ್ಣಿಗೆ ಬೀಳುತ್ತಲೇ ಇರಲಿಲ್ಲ. ನಾನಂತೂ ಹೆಣ್ಣು ಮಕ್ಕಳನ್ನು ತಲೆಯೆತ್ತಿ ದಿಟ್ಟಿಸಿ ನೋಡುವ ಸ್ವಭಾವದವನೂ ಅಲ್ಲ. ಆದುದರಿಂದ ಅವಳ ಮಾತು, ಧ್ವನಿ ಮಾತ್ರ ಕೆಲವು ಕಾಲದ ವರೆಗೆ ನನಗೆ ಪರಿಚಯ ವಾಗಿತ್ತು.

ಆತ, ಗೋಪಾಲಯ್ಯರ್, ಆಫೀಸಿಗೆ ಹೋಗುವ ಮೊದಲೇ ನಾನು ಅವರ ಮನೆಯ ಸಮೀಪವಿದ್ದ ಕೊಳಾಯಿಯಲ್ಲಿ ನೀರು ಹಿಡಿದುಬಿಡುತ್ತಿದ್ದೆ. ಬಳಿಕ ಆ ಕಡೆ ಒಂದು ಸಲವೂ ನಾನು ಸುಳಿಯುತ್ತಿರಲಿಲ್ಲ. ಸಾವಿತ್ರಿಯೂ ಹೆಚ್ಚಿಗೆ ಹೊರಗೆ ಬರುತ್ತಲೇ ಇರಲಿಲ್ಲ. ಯಾರೊಂದಿಗೂ ಅವಳ ಮಾತುಕತೆ ನೆರೆಯಲ್ಲಿ ಇದ್ದ ಹಾಗೆ ಕಾಣೆ.

ಹೀಗೆಯೇ ಒಂದು ವಾರ ಕಳೆಯಿತು.

ರಾತ್ರಿ ಎರಡು ಗಂಟೆಯ ಸುಮಾರಿನಲ್ಲಿ ಆತ ಹೊರ ಬಾಗಿಲ ಕದವನ್ನು ಬಡಿದು, ಈಕೆ ಎದ್ದು ಹೋಗಿ ಕದ ತೆರೆದು, ಬಳಿಕ ಅವರಿಬ್ಬರೂ ಹೆಜ್ಜೆಹಾಕಿ ಬಂದು ತಮ್ಮ ಮನೆಯನ್ನು ಸೇರುವುದು – ನನಗೆ ಅರೆನಿದ್ದೆಯಲ್ಲೂ ಅರಿವಾಗುತ್ತಿತ್ತು.

ಒಂದು ದಿನ ಆತ ಬಾಗಿಲನ್ನು ಬಡಿದಾಗ ಆಕೆ ನಿದ್ದೆಹೋಗಿದ್ದಳು ಎಂದು ಕಾಣು ತ್ತದೆ. ನಾಲ್ಕಾರು ಸಲ ಆತ ಕೂಗಿಕೊಂಡ. ನಾನು ಎದ್ದು ಹೋಗಿ ಬಾಗಿಲನ್ನು ತೆರೆದೆ.

"ನೀವು ಎದ್ದು ತೆಗೆದಿರಾ ಸಾರ್? ಕ್ಷಮಿಸಬೇಕು" ಎನ್ನುತ್ತ ಆತ ಒಳಗೆ ಬಂದ. ನಾನು ನನ್ನ ಕೊಟಡಿಗೆ ಹೋಗಿ ಬಾಗಿಲನ್ನು ಹಾಕಿಕೊಂಡೆ.

ಒಳಗೆ ಹೋಗಿ ನಿದ್ದೆಮಾಡುತ್ತಿದ್ದ ಪತ್ನಿಯನ್ನು ಆತ ಏನು ಮಾಡಿದನೋ ತಿಳಿಯ ಲಿಲ್ಲ. ಬಳಿಕ ನನಗೆ ತಿಳಿಯಿತು. ಪತ್ನಿಯನ್ನು ಆತ ಕಾಲಿನಿಂದ ಜಾಡಿಸಿ ಒದೆದಿದ್ದ, ಆಕೆ ಗಡಿಬಿಡಿಯಿಂದ ಎದ್ದು "ಬಹಳ ಹೊತ್ತು ಬಾಗಿಲನ್ನು ತಟ್ಟಿದಿರಾ? ಮಧ್ಯಾಹ್ನ ದಿಂದಲೂ ತಲೆನೋವು. ಈಗ ಚೆನ್ನಾಗಿ ನಿದ್ದೆ ಮಾಡಿಬಿಟ್ಟೆ......" ಎಂದದ್ದೂ ನನ್ನ ಕಿವಿಗೆ ಬಿದ್ದಿತು.

"ಚೆನ್ನಾಗಿ ನಿದ್ದೆ ಮಾಡಿದೆಯೋ? ಮಾಡಿಸುತ್ತೇನೆ" ಎಂದವನೆ ಅವನು ಅವಳನ್ನು ಹೊಡೆದ. ಹೊಡೆದ ಏಟಿನ ಶಬ್ದವೂ ನನಗೆ ಕೇಳಿಸಿತು. ನನಗೆ ಆಗ ಏನು ಮಾಡ ಬೇಕೆಂಬುದೇ ತೋಚಲಿಲ್ಲ. ಗಂಡಹೆಂಡತಿಯರ ಸುದ್ದಿಯಲ್ಲಿ ಮೂರನೆಯವನಾದ ನಾನು ಪ್ರವೇಶಿಸುವುದೂ ನನಗೆ ಆಗ ಇಷ್ಟವಿರಲಿಲ್ಲ.

ಬಳಿಕ ಆ ರಾತ್ರಿ ಹೆಚ್ಚಿಗೆ ಏನೂ ವಿಶೇಷ ಇದ್ದ ಹಾಗೆ ಕಾಣಲಿಲ್ಲ. ಆದರೆ ಅವಳಿಗೆ ಆನಂತರ ನಿದ್ದೆ ಬರಲಿಲ್ಲ ಎಂದು ಕಾಣುತ್ತದೆ. ಸಣ್ಣದಾಗಿ ಆಕೆ ನರಳುತ್ತಿದ್ದಳು, ನನಗೂ ನಿದ್ದೆ ಬಾರದೆ ಆ ನರಳುವಿಕೆ ಕೇಳಿಸುತ್ತಿತ್ತು.

ಮೂರನೆಯ ದಿನ ಅವಳೇ ಎದ್ದು ಬಾಗಿಲನ್ನು ತೆರೆದಳು. ಆದರೆ ಅವೊತ್ತೂ ಅವಳಿಗೆ ಹೊಡೆತ ಬಿದ್ದಿತು. ಅಂದು ಮಾತ್ರ ಅವಳು ಜೋರಾಗಿ ಕೂಗನ್ನು ಹಾಕುತ್ತ ಪ್ರತಿಭಟಿಸಿದಳು:

"ಯಾಕೆ ನನ್ನನ್ನು ಹೀಗೆ ಕೊಂದುಹಾಕುತ್ತಿದ್ದೀರಿ? ನೀವು ಮಾಡುವುದು ಎಲ್ಲವನ್ನೂ ನಾನು ಸಹಿಸಿಕೊಂಡು ಇದ್ದೇನಲ್ಲ."

"ಓಹೋ, ಇಷ್ಟು ಜೋರಾಗಿ ಮಾತಾಡಲು ನಿನಗೆಷ್ಟು ಧೈರ್ಯ!"

"ಎಷ್ಟು ದಿನ ಅಂತ ನಾನು ಹೀಗೆ ಹಿಂಸೆಯನ್ನು ಅನುಭವಿಸಲಿ!"

"ನೀನು ಬಾಯಿ ತೆರೆದರೆ ಹಲ್ಲು ಉದುರಿಸಿ ಬಿಡುತ್ತೇನೆ ನೋಡು,"

"ಉದುರಿಸಿಬಿಡಿ,"

ಅವಳ ಮೇಲೆ ಏಕಪ್ರಕಾರವಾದ ಪ್ರಹಾರ. ನನ್ನಿಂದ ಇನ್ನು ಮುಂದೆ ಸಹನೆಯನ್ನು ತಂದುಕೊಳ್ಳುವುದು ಸಾಧ್ಯವಾಗಲಿಲ್ಲ.

ನಾನು ಎದ್ದವನೇ "ಸಾರ್, ಸ್ವಲ್ಪ ಬಾಗಿಲನ್ನು ತೆರೆಯಿರಿ" ಎಂದು ಅವನ ಮನೆಯ ಮುಂದೆ ನಿಂತು ಬಾಗಿಲನ್ನು ಬಡಿದೆ.

ನಾನು ಹೀಗೆ ಮಾಡಿದ್ದು ಆತನಿಗೆ ಸರಿಕಾಣಲಿಲ್ಲ ಎಂದು ಕಾಣುತ್ತದೆ. ಆತ ಬಾಗಿಲು ತೆಗೆಯದೆ ಒಳಗಿದ್ದುಕೊಂಡೇ ಕೂಗನ್ನು ಹಾಕಿದ.

"ಯಾಕೆ ತೆಗೆಯಬೇಕು?"

"ತೆಗೆಯಿರಿ, ಹೇಳುತ್ತೇನೆ."

"ಸಾಧ್ಯವಿಲ್ಲ."

"ತೆಗೆಯದೆ ಇದ್ದರೆ ನಾನು ಬಾಗಿಲನ್ನು ಒಡೆದು ಹಾಕುತ್ತೇನೆ."

ಅವನು ಬಾಗಿಲನ್ನು ತೆರೆದು ತಲೆಯನ್ನು ಮಾತ್ರ ಹೊರಗಿಕ್ಕಿ 'ಏನು?' ಎಂದ.

"ಪಾಪ, ಅನ್ಯಾಯವಾಗಿ ಹೀಗೆ ಹೆಂಡತಿಯನ್ನು ಹೊಡೆಯುತ್ತಿದ್ದೀರಲ್ಲ."

"ಇರಬಹುದು. ಅದನ್ನು ಕೇಳುವುದಕ್ಕೆ ನೀವು ಯಾರು?"

"ನೀವು ಹಾಗೆ ಮಾಡಲು ಸಾಧ್ಯವಿಲ್ಲ,"

"ಏನು ಹೇಳುತ್ತ ಇದ್ದೀರಿ."

"ಹೌದು. ನಾನು ಹೇಳುವುದೇ ಹಾಗೆ. ಪೋಲಿಸಿನವರಿಗೆ ಹೋಗಿ ನಾನು ಈಗಲೇ ದೂರನ್ನು ಕೊಡುತ್ತೇನೆ."

ನನ್ನ ಮಾತಿಗೆ ಅವನು ಹೆದರಿದ ಎಂದು ಕಾಣುತ್ತದೆ. ಅವನ ಮುಖಭಾವ

ದಿಂದಲೇ ಹಾಗೆ ತಿಳಿದುಕೊಳ್ಳಬಹುದಿತ್ತು. ಅವನು ಬಲಹೀನ ಎನ್ನುವುದು ನನಗೆ ಈಗ ಅರಿವಾಯಿತು. ಹೆಂಡತಿಯನ್ನು ಹೊಡೆಯುವವರು ಬಲಹೀನರಲ್ಲದೆ ಮತ್ತಾರು?

"ನೀವು ಸಾಧು ಸ್ವಭಾವದವರು, ಹಾಗೆಂದು ಹೇಳಿ ಕೊಟಡಿಯನ್ನು ನಿಮಗೆ ಕೊಟ್ಟಿದ್ದೇನೆ. ಅವಶ್ಯಕವಾಗಿ ನೀವು ನಮ್ಮ ವಿಷಯದಲ್ಲಿ ತಲೆಹಾಕುವುದಾದರೆ ನಾಳೆ ಬೆಳಗ್ಗೆಯೇ ನಮ್ಮ ಕೊಟಡಿಯನ್ನು ತೆರವುಮಾಡಿ ಹೋಗಬೇಕಾಗುತ್ತದೆ."

"ಖಾಲಿ ಮಾಡುವ ವಿಚಾರ ಆಮೇಲೆ ನೋಡಿಕೊಳ್ಳೋಣ. ಈಗ ಮಾತ್ರ ನೀವು ಬೆಳಗಾಗುವುದರೊಳಗೆ ನಿಮ್ಮ ಮನೆಯೊಳಗೆ ಪ್ರವೇಶಿಸುವುದು ಸಾಧ್ಯವಿಲ್ಲ."

"ನನಗೆ ಆ ರೀತಿ ಆಜ್ಞೆಮಾಡಲು ನೀವು ಯಾರು?"

"ನಾನು ಯಾರಾದರೆ ನಿಮಗೇನಂತೆ! ಈಗ ನೀವು ನಾನು ಹೇಳಿದ ಹಾಗೆ ಕೇಳಬೇಕು, ಅಷ್ಟೆ. ಇಲ್ಲದಿದ್ದರೆ ನಿಮಗೆ ಒಳ್ಳೆಯದಲ್ಲ."

"ಹೆದರಿಸುತ್ತಿದ್ದೀರೋ?"

"ಹೆದರಿಸುವುದು ಮಾತ್ರವಲ್ಲ, ಅದನ್ನು ಕಾರ್ಯದಲ್ಲಿಯೂ ಮಾಡಿ ತೋರಿಸುತ್ತೇನೆ. ಬನ್ನಿ, ನನ್ನ ಕೊಟಡಿಯಲ್ಲಿ ಬಂದು ಮಲಗಿಕೊಳ್ಳಿ. ನೋಡಿಯಮ್ಮ, ನೀವು ಅಗಲಿ ಹಾಕಿ ಒಳಗೆ ಹೋಗಿ ಮಲಗಿಕೊಳ್ಳಿ."

"ನೀವು ಹೇಳಿದಿರಿ ಅಂತ ಅವಳು ಹಾಗೆ ಮಾಡಲು ಸಾಧ್ಯವಿಲ್ಲ."

"ನಾನು ಇಲ್ಲಿರುವ ವರೆಗೆ ನೀವು ಇನ್ನು ಮುಂದೆ ಆ ತಾಯಿಯ ಮೇಲೆ ಒಂದು ಬೆರಳನ್ನೂ ಎತ್ತಲು ಸಾಧ್ಯವಿಲ್ಲ."

ಆಗ ಸಾವಿತ್ರಿ ಪೂರ್ಣವಾಗಿ ಬಾಗಿಲನ್ನು ತೆಗೆದುಕೊಂಡು ಹೊರಬಂದಳು. ನನ್ನೊಂದಿಗೆ ಅವಳು ಎಂದೂ ಮಾತಾಡಿದ್ದೇ ಇಲ್ಲ.

"ದಯವಿಟ್ಟು ನೀವು ನಮ್ಮ ಮಧ್ಯೆ ಪ್ರವೇಶಿಸಬೇಡಿ" ಎಂದವಳೆ ಆಕೆ ಪತಿಯತ್ತ ತಿರುಗಿ, 'ಬನ್ನಿ, ಒಳಗೆ ಹೋಗೋಣ' ಎಂದಳು.

"ನೀನು ಒಳಗೆ ಹೋಗು. ಯಾರು ಇಲ್ಲಿಗೆ ನಿನ್ನನ್ನು ಕರೆದವರು?" ಎಂದು ಆತ ಅವಳನ್ನು ಗದರಿಸಿಕೊಂಡ.

"ನೋಡಿ ಅಮ್ಮ, ವಿಷಯ ನನ್ನ ಕೈಯಲ್ಲಿಯೂ ಇಲ್ಲ, ನಿಮ್ಮ ಬಳಿಯಲ್ಲಿಯೂ ಇಲ್ಲ. ನಾನು ನಿಮ್ಮ ಮಧ್ಯೆ ಪ್ರವೇಶಿಸದೆ ಇರಲು ಸಾಧ್ಯವಿಲ್ಲ. ಪೋಲಿಸಿಗೆ ಸುದ್ದಿ ತಿಳಿಸಿದರೆ ಅನಾವಶ್ಯಕವಾಗಿ ನಿಮಗೇ ತೊಂದರೆ" ಎಂದೆ ಅವಳನ್ನು ದಿಟ್ಟಿಸುತ್ತ.

"ನೀವು ಇದನ್ನೆಲ್ಲ ಕಿವಿಗೆ ಹಾಕಿಕೊಳ್ಳುವುದು ನನಗೆ ಸಂಕಟವಾಗಿದೆ" ಎಂದಳು ಸಾವಿತ್ರಿ.

"ಸರಿ, ಬಾಗಿಲು ತೆರೆದಿರಲಿ. ನೀವು ಒಳಗೆ ಮಲಗಿ ನಾನು ಹೊರಬಾಗಿಲನ್ನು ಹಾಕಿಬರುತ್ತೇನೆ. ನಾನೂ ನಿಮ್ಮವರೂ ನನ್ನ ಕೊಟಡಿಯಲ್ಲಿಯೆ ಮಲಗುತ್ತೆವೆ" ಎಂದೆ.

"ನಾನು ಇಲ್ಲಿ ಮಲಗಲು ಸಾಧ್ಯವಿಲ್ಲ. ನನಗೆ ಈಗ ಹೊರಗೆ ಕೆಲಸ ಇದೆ. ಹೋಗಬೇಕಾಗಿದೆ" ಎಂದವನೇ ಆತ ಹೊರಗೆ ಹೋಗಲು ಅಣಿಯಾದ.

ಎಷ್ಟು ವಿಚಿತ್ರವಾದವನು! ಅವನ ಆ ನಡತೆಯೇ ನನಗೆ ಅರ್ಥವಾಗಲಿಲ್ಲ.

ಸಾವಿತ್ರಿ ಒಳಗೆ ಹೋಗಿ ಅಗಲಿಯನ್ನು ಹಾಕಿಕೊಂಡಳು. ಆತ ಹೊರ ನಡೆದ. ನಾನು ಹೊರಬಾಗಿಲನ್ನು ಹಾಕಿ ನನ್ನ ಕೋಟಡಿಗೆ ಬಂದು ಮಲಗಿಕೊಂಡೆ.

ನಿದ್ದೆ ಬರಲಿಲ್ಲ. ಸಾವಿತ್ರಿಯ ರೂಪ ನನ್ನ ಕಣ್ಣಮುಂದೆ ಬಂದು ನಿಂತಿತು. ಅವಳ ಸೊಗಸಾದ ಮುಖದಲ್ಲಿ ದುಃಖದ ಪಡಿನೆಳಲು. ವಯಸ್ಸು ಆಕೆಗೆ ಹದಿನೆಂಟು ಇರಬಹುದು. ಕಣ್ಣಿಗೆ ಹಿತವಾದ ಕೆಂಪು ಬಣ್ಣದ ದೇಹ. ದೀಪದ ಬೆಳಕಿನಲ್ಲಿ ಈಗಷ್ಟೇ ನಾನು ಅವಳನ್ನು ಸರಿಯಾಗಿ ನೋಡಿದ್ದು.

ಪಾಪ, ಅವಳನ್ನು ಈತ........

ಅಗಳಿ ತೆಗೆಯುವ ಶಬ್ದ ಕೇಳಿಸಿತು.

ನಾನು ಹಾಸಿಗೆಯಲ್ಲಿ ಎದ್ದು ಕುಳಿತೆ. ಅವಳು ನನ್ನ ಕೋಟಡಿಯ ಬಾಗಿಲಲ್ಲಿ ಬಂದು ನಿಂತಹಾಗೆ ಭಾಸವಾಯಿತು. ಒಡನೆ ಎದ್ದವನೆ ಸ್ವಿಚ್ ಹಾಕಿದೆ.

"ಬೇಡಿ, ದೀಪಬೇಡಿ, ಆರಿಸಿಬಿಡಿ" ಎಂದಳು ಸಾವಿತ್ರಿ.

ದೀಪವನ್ನು ಆರಿಸಿದೆ. ಹಾಸಿಗೆಯ ಮೇಲೆ ಹಾಗೆಯೆ ಕುಳಿತೆ. ಅವಳು ನನ್ನಿಂದ ದೂರವಾಗಿ ಮೆಲ್ಲಗೆ ಕುಳಿತುಕೊಂಡಳು. ಗಂಡ ಒಂದು ವಿಚಿತ್ರ. ಹೆಂಡತಿಯೂ ಹಾಗೆಯೇ ಇರಬಹುದೇನೋ ಎಂದು ನನಗೆ ಆಶ್ಚರ್ಯವಾಯಿತು.

"ಹೀಗೆ ನಾನು ರಾತ್ರಿಯ ವೇಳೆ ನಿಮ್ಮೊಂದಿಗೆ ಮಾತನಾಡಲು ಹೊರಟದ್ದು ತಪ್ಪು ಎಂದು ಭಾವಿಸಬೇಡಿ. ಇದರಿಂದ ನಿಮಗೆ ನನ್ನ ಮೇಲೆ ಬೇಸರ ಆಗುವುದಿಲ್ಲ ಎಂದು ಭಾವಿಸುತ್ತೇನೆ. ಅದಕ್ಕಾಗಿಯೇ ನಾನು ಇಲ್ಲಿಗೆ ಬಂದೆ."

"ಏನಮ್ಮಾ........"

"ನನ್ನ ಹೆಸರು ಸಾವಿತ್ರಿ."

"ಯಾತಕ್ಕಾಗಿ ಇವನೊಂದಿಗೆ ನೀವು ಇಲ್ಲಿದ್ದೀರಿ? ನಿಮ್ಮ ತವರಿಗೆ ಹೊರಟು ಹೋಗಬಾರದೆ? ಇಂಥವರ ಕೂಡ ಬಾಳುವೆ ಮಾಡದಿದ್ದರೆ ಏನಂತೆ?"

"ಅದಕ್ಕೆ ಒಂದು ಕಾಲ ಎಂದು ಇದೆಯಲ್ಲ. ಆ ಮೇಲೆ ಅಲ್ಲಿ ಸ್ಥಾನವೆಲ್ಲಿದೆ? ತಾಯಿ ತಂದೆ ಪತಿ ಹೀಗೆ ಇರುವ ಜೀವನವೇ ಶುದ್ಧ ಹುಡುಗಾಟಿಕೆ. ಕಾಗೆ ಗುಬ್ಬಚ್ಚಿಗಳ ಹಾಗೆಯೇ ಮಾನವರ ವರ್ತನೆಯೂ ಸಹ. ರೆಕ್ಕೆ ಬಲಿಯಿತೋ......"

"ನಿಮ್ಮ ಪತಿ......"

"ಏನು ಈ ಹುಡುಗಿ ಹೀಗೆ ಮಾತಾಡುತ್ತಾಳೆ ಎಂದು ನೀವು ಭಾವಿಸಬಹುದು. ನೀವು ಏನಾದರೂ ತಿಳಿದುಕೊಳ್ಳಿ. ನನಗೆ ಆ ಬಗ್ಗೆ ಚಿಂತೆಯಿಲ್ಲ. ಗಂಡಸಿಗೆ ಬಂದ

ಹೊಸತರಲ್ಲಿ ಹೆಂಡತಿ ಅಷ್ಟೆ. ಆ ಮೇಲೆ ಅವಳು ಕುಡಿದು ಬಿಸಾಕಿದ ಒಂದು ಪಾತ್ರೆ."

"ನೀವು ಹಾಗೆ......"

"ನೀವು ಏನನ್ನು ಹೇಳಲು ಹೊರಟಿದ್ದೀರಿ ಎನ್ನುವುದು ನನಗೆ ಅರ್ಥವಾಗುತ್ತಿದೆ. ನಾನು ಹೇಳುವುದೇ ಹಾಗೆ. ನಿಮಗೆ ಮದುವೆಯಾಗಿದೆಯೇ?"

"ಇಲ್ಲ."

"ಮದುವೆಯಾಗಲಿ. ನಾನು ಹೇಳಿದ ಅರ್ಥ ಆ ಮೇಲೆ ನಿಮಗೆ ತಿಳಿಯುತ್ತದೆ.'

ಅವಳು ಬಾಗಿಲ ಮುಂದೆ ಕುಳಿತು ಮಾತಾಡುತ್ತಿದ್ದರೂ ಅವಳ ದನಿ ಗಂಭೀರವಾಗಿತ್ತು.

"ನೋಡಮ್ಮ ಸಾವಿತ್ರಿ......ನಿಮ್ಮ ಪತಿ ಒಂದು ಸಮಯ ಹಿಂದಿರುಗಿ ಬಂದಾರು. ಹೀಗೆ ಬಾಗಿಲು ತೆರೆದು ಕುಳಿತಿದ್ದರೆ ಏನಾದರೂ ತಪ್ಪಾಗಿ ತಿಳಿದುಕೊಂಡಾರು."

"ಇನ್ನು ಮೇಲೆ ಅವರು ಏನು ಮಾಡಲು ಸಾಧ್ಯವಿದೆ? ಕೊಲೆ ಮಾಡುತ್ತಾರೆ, ಅಷ್ಟೆ, ಅದಕ್ಕಿಂತ ಮೇಲೆ!"

"ನೀವು ಹೀಗೆ ಮಾತಾಡಬಾರದು. ಇನ್ನಾದರೂ ನಿಮ್ಮ ಪತಿಗೆ ವಿವೇಕ ಮೂಡೀತು. ನೀವೇ ಒಳ್ಳೆಯ ಮಾತುಗಳಿಂದ ಅವರ ಮನಸ್ಸನ್ನು ಸೂರೆಗೊಳ್ಳಲು ಸಾಧ್ಯವಿದೆ."

"ವಿವೇಕ? ಸೂರೆ? ಈ ಮೂರು ವರ್ಷಗಳಲ್ಲಿ ನಾನು ಸಾಧಿಸದೇ ಇರುವುದು?"

"ಮತ್ತೆ ಏನು ಮಾಡುತ್ತೀರಿ?"

"ಮಾಡುವುದೇನು? ಆತ್ಮಹತ್ಯೆ ಮಾಡಿಕೊಳ್ಳುತ್ತೇನೆ. ಸಾಧ್ಯವಾಗಲಿಲ್ಲ. ಜೀವ ಇರುವ ವರೆಗೂ ಇಂಥ ಬಾಳು ಬಾಳಬೇಕಾದದ್ದೇ."

"ಇದೇ ರೀತಿ."

"ಬೇರೆ ಮಾರ್ಗ ಏನಿದೆ?"

ನನಗೆ ಇದಕ್ಕೆ ಉತ್ತರ ಹೇಳಲು ಸಾಧ್ಯವಾಗಲಿಲ್ಲ.

"ಯಾಕೆ ನಿಮ್ಮಿಂದ ಉತ್ತರ ಬರಲಿಲ್ಲ" ಎಂದಳು ಸಾವಿತ್ರಿ.

"ನಾನು ಏನು ಹೇಳಲಿ? ಸರಿ, ಒಂದು ಮಾತನ್ನು ನಾನು ನಿಮ್ಮನ್ನು ಕೇಳ ಬಹುದೋ?"

"ನೀವು ಕೇಳುವುದು ಏನು ಎನ್ನುವುದು ನನಗೆ ತಿಳಿದಿದೆ. ನಿಮ್ಮೊಂದಿಗೆ ನಾನು ಓಡಿಬರಲು ನೀವು ಹೇಳಬಹುದು. ಕೆಲವು ತಿಂಗಳು ಕಳೆದ ಮೇಲೆ ನೀವೂ ಹೀಗೆಯೇ ತಾನೆ ಮಾಡುವವರು.."

"ಸಾವಿತ್ರಿ!"

"ಒಂದು ಸಮಯ ನೀವು ನನ್ನನ್ನು ಕೊಲ್ಲದೆ ಇರಬಹುದು. ನಿಮ್ಮ ಜಯಕೆ ಈಡೇರುವಾಗ ಮುದ್ದಿಸುತ್ತೀರಿ. ಮುಗಿಯಿತೋ, ಆ ಕಡೆ ಮುಖವನ್ನು ತಿರುಗಿಸಿ ಕೊಳ್ಳುತ್ತೀರಿ."

"ಇಷ್ಟು ನಿರ್ದಾಕ್ಷಿಣ್ಯವಾಗಿ ನೀನು ಮಾತಾಡುವಾಗ ನಾನೂ ಇದಕ್ಕೆ ಉತ್ತರ ಹೇಳಬಹುದೋ?"

"ಧಾರಾಳವಾಗಿ."

"ಗಂಡನ್ನು ಆಕರ್ಷಿಸಿ ತನ್ನವನನ್ನಾಗಿ ಮಾಡಿಕೊಳ್ಳುವ ಶಕ್ತಿ ಹೆಣ್ಣಿಗಿದೆ. . . .

"ಅದು ಬರಿಯ ಕತೆ. ಆ ಬೋಧನೆ ನನಗೆ ಮಾಡಬೇಡಿ. ಇಂಥ ಬೋಧನೆ ಕೇಳಿ ಕೇಳಿ ನನ್ನ ಕಿವಿ ಕಿವುಡಾಗಿದೆ. ನಿಜವಾದ ಸಂಗತಿಯನ್ನೇ ಈಗ ನಾನು ನಿಮಗೆ ಹೇಳುತ್ತಿದ್ದೇನೆ. ನೀವು ಏನೋ ಹೇಳುತ್ತಿದ್ದೀರಿ. ಸೌಂದರ್ಯ ಯಾವಾಗಲೂ ಶಾಶ್ವತವಾಗಿರುವುದಿಲ್ಲ."

"ನೀವು ಈ ತೀರ್ಮಾನಕ್ಕೆ ಹೇಗೆ ಬಂದಿರಿ?"

"ಹೇಗೆ ಬಂದೆ? ನನ್ನ ಪತಿಯ ಹಾಗೆ ನನ್ನನ್ನು ಪ್ರೀತಿಸಿದವನು ಬೇರೆ ಯಾರೂ ಇರಲಾರ. ನಾನಂತೂ ಕುರೂಪಿಯಲ್ಲ. ವಯಸ್ಸಾದವಳೂ ಅಲ್ಲ. ಕೆಟ್ಟ ನಡತೆ ಯವಳೂ ಅಲ್ಲ. ಸಾಕೆ?"

"ಸಾವಿತ್ರಿ, ನಿಮ್ಮ ಹೃದಯಕ್ಕೆ ತಗಲಿದ ಪೆಟ್ಟಿನಿಂದ ನೀವು ಹೀಗೆಲ್ಲ ಮಾತನಾಡು ತ್ತಿದ್ದೀರಿ. ನೀವು ಯಾವೊತ್ತೂ ಸುಖವನ್ನು ಅನುಭವಿಸಲೇ ಇಲ್ಲವೆ?"

"ಯಾವ ಸುಖ? ಆಭರಣಗಳನ್ನು ಧರಿಸಿಕೊಳ್ಳುವುದೋ? ನಾನು ಹಾಕದ ಆಭರಣ ಇಲ್ಲ. ನನ್ನ ತಂದೆ ನಾಗಪಟ್ಟಣದಲ್ಲಿ ದೊಡ್ಡ ವಕೀಲರು, ಶ್ರೀಮಂತರು. ರವಿಕೆ-ಸೀರೆ ಥರಥರಾದ್ದು, ಊಟದಲ್ಲಿ ತಿಂಡಿಯಲ್ಲಿ ನನಗೆ ಯಾವಾಗಲೂ ಅಷ್ಟು ಅಕ್ಕರೆ ಇಲ್ಲ. ಮತ್ತೇನು ಬಾಕಿ ಉಳಿದಿದೆ? ಶರೀರ ಸುಖ ಅಲ್ಲವೆ? ಇದುವರೆಗೂ ನಾನು ಅದನ್ನು ಅನುಭವಿಸಲೇ ಇಲ್ಲ."

"ಹಾಗಂದರೆ!"

"ನನ್ನ ಪತಿ ಸಾಕಷ್ಟು ನನ್ನನ್ನು ತೃಪ್ತಿಪಡಿಸಿದ್ದಾನೆ. ಆದರೆ ಸುಖವನ್ನು ಮಾತ್ರ ನಾನು ಅನುಭವಿಸಲೇ ಇಲ್ಲ."

"ಮತ್ತೆ ನೀವು ಯಾವುದನ್ನು ಸುಖ ಎನ್ನುತ್ತಿದ್ದೀರಿ?"

"ನಾನು ಹೃದಯ ತುಂಬಿ ಮಾತನಾಡುವುದಕ್ಕೂ ಒಂದು ಮಿತಿ ಬೇಡವೆ? ಮೇಲೂ ನನ್ನನ್ನು ಪ್ರಶ್ನಿಸುತ್ತಿದ್ದೀರಾ?"

"ನಿಮ್ಮ ಪತಿ ಯಾಕೆ. . . . . . . ."

"ನನ್ನ ಕೈಹಿಡಿದವನಿಗೆ ನಾನು ಈಗ ಸಪ್ಪೆಯಾಗಿ ಹೋಗಿದ್ದೇನೆ. ಬೆಲೆಕೊಟ್ಟು, ಬೇರೆ ಹುಡುಗಿಯನ್ನು ಆತ ನೋಡಿಕೊಂಡಿದ್ದಾನೆ."

"ಸಾವಿತ್ರಿ, ಧೈರ್ಯವಾಗಿ ನೀವು ಒಂದು ಕೆಲಸ ಮಾಡಬಹುದಲ್ಲ!"

"ನಾನು ಯಾವುದನ್ನೂ ಮಾಡಲು ಸಿದ್ಧ. ಆದರೆ ಅದರಿಂದ ಏನೂ ಪ್ರಯೋಜನ ವಿಲ್ಲ. ಸ್ವಲ್ಪ ಕಾಲ ಅದರಿಂದೇನಾದರೂ ಪ್ರಯೋಜನವಾದೀತು ಅಷ್ಟೆ."

"ನಿಮಗೆ ತೃಪ್ತಿಯಾಗುವ ಹಾಗೆ ನಾನು ಪ್ರಯತ್ನಿಸುತ್ತೇನೆ."

"ನಿಮ್ಮನ್ನು ನೀವೇ ಈಗ ವಂಚಿಸಿಕೊಳ್ಳುತ್ತಿದ್ದೀರಿ. ನನ್ನ ಸೌಂದರ್ಯವನ್ನು ನೋಡಿ ನೀವು ಮರುಳಾಗಿದ್ದೀರಿ. ನಿಮ್ಮ ಬಯಕೆ ಈಡೇರುವುದಕ್ಕಾಗಿ, ನನ್ನ ತೃಪ್ತಿಯ ಮಾತು ಆಡುತ್ತಿದ್ದೀರಿ."

"ಯಾವುದು ಹೇಳಿದರೂ..."

"ಒಂದನ್ನೂ ಹೇಳಬೇಡಿ. ದಯೆಯಿಟ್ಟು ದೀಪ ಹಾಕಿ."

ನಾನು ಎದ್ದು ಸ್ವಿಚ್ ಹಾಕಿದೆ. ಅವಳು ಹೇಳಿದಳು:

"ನಾನು ಇನ್ನು ಹೋಗಿ ಮಲಗಬಹುದಲ್ಲ."

"ನಿದ್ದೆ ಬರುತ್ತದೇನು?"

"ನಿದ್ದೆ? ಬರುತ್ತಿಲ್ಲ."

"ಮತ್ತೆ ಸ್ವಲ್ಪ ಹೊತ್ತು ಮಾತಾಡುತ್ತ ಕುಳಿತುಕೊಳ್ಳಬಹುದಲ್ಲ."

"ಯಾಕೆ? ನಿಮ್ಮ ನಿದ್ದೆಗೂ ಭಂಗ ತರಲೆಂದೇ?"

"ಸಾವಿತ್ರೀ..."

"ನೀವು ಏನೂ ಹೇಳಬೇಡಿ."

"ನೀವು ಹೇಳುವುದೆಲ್ಲ ಸರಿಯೆಂದೇ ಈಗ ನನಗೆ ಅರಿವಾಗುತ್ತ ಇದೆ."

"ನಿಜವಾಗಿಯೂ?" ಎನ್ನುತ್ತ ಎದ್ದು ಬಂದು ಅವಳು ನನ್ನ ಸನಿಹದಲ್ಲಿ ಕುಳಿತು ಕೊಂಡಳು."

"ಸುಳ್ಳು ಹೇಳಿದರೆ ನೀವು ಒಡನೆ..."

"ಅಬ್ಬಾ, ಈಗತಾನೆ ನನ್ನ ಮನಸ್ಸಿಗೆ ಸ್ವಲ್ಪ ನೆಮ್ಮದಿಯಾಗಿದೆ."

"ಸಾವಿತ್ರಿ, ಇವೊತ್ತು ನಿಮ್ಮಿಂದ ನನ್ನ ಅಭಿಪ್ರಾಯಗಳೆ ಬದಲಾವಣೆಯಾಗಿ ಹೋಗಿದೆ."

"ನಿಮ್ಮ ಈ ಅಭಿಪ್ರಾಯ ಅಂತರಂಗವಾಗಿಯೇ ಇರಲಿ. ನಾನು ಸತ್ತಮೇಲೆ ಬೇಕಾದರೆ ಯಾರೊಂದಿಗಾದರೂ ಹೇಳುವಿರಂತೆ."

"ಯಾಕೆ ಹೀಗೆಲ್ಲ ಮಾತನಾಡುತ್ತಿದ್ದೀರಿ!"

"ಇಲ್ಲ. ಇನ್ನು ಮುಂದೆ ಈ ದೇಹ ದುಃಖವನ್ನು ಸಹಿಸಿಕೊಳ್ಳುವುದು ಸಾಧ್ಯವಿಲ್ಲ. ಆದರೆ ಯಾವ ಕಾರಣದಿಂದಲೋ ಅರಿಯೆ, ಒಂದು ವಿಧವಾದ ತೃಪ್ತಿ ನನಗೆ ಉಂಟಾಗಿದೆ."

"ನಾನು ಹೇಳಲಿಲ್ಲವೇನು?" ಎನ್ನುತ್ತ ನನಗರಿವಿಲ್ಲದೆಯೇ ಕೆಳಗೆ ಒರಗುವ ಹಾಗಿದ್ದ ಅವಳನ್ನು ನನ್ನ ಎದೆಗಾನಿಸಿಕೊಂಡೆ.

ಅವಳು ಯಾವ ವಿಧವಾದ ಪ್ರತಿಕ್ರಿಯೆಯನ್ನೂ ವ್ಯಕ್ತಪಡಿಸದೆ ಕಣ್ಣುಗಳನ್ನು ಭದ್ರವಾಗಿ ಮುಚ್ಚಿ ಹಾಗೆಯೇ ಕುಳಿತುಕೊಂಡಳು.

ಇದು ನಡೆದು ಹಲವು ತಿಂಗಳು ಕಳೆದ ಮೇಲೆ, ಈ ಸಂಭವವನ್ನು ಬರೆಯುವಾಗ, ಅದರಲ್ಲೂ ಒಂದು ಹೆಣ್ಣು ತನ್ನ ಅಂತರಂಗವನ್ನು ನನ್ನಲ್ಲಿ ಮುಚ್ಚುಮರೆಯಿಲ್ಲದೆ ನಿವೇದಿಸಿಕೊಂಡಿರುವಾಗ ಒಂದು ಸುಳ್ಳು ಶಬ್ದವನ್ನೂ ನಾನು ಇದರಲ್ಲಿ ಸೇರಿಸಲು ಸಾಧ್ಯವಾಗಿಲ್ಲ.

ಮೆಲ್ಲಗೆ ಅವಳನ್ನು ಹಾಸಿಗೆಯಲ್ಲಿ ಮಲಗಿಸಿದೆ, ನನ್ನ ಹಾಸಿಗೆಯಲ್ಲಿ. ಆಗಲೂ ಅವಳು ಏನೂ ಮಾತಾಡಲಿಲ್ಲ. ತನ್ನೆಲ್ಲ ರಹಸ್ಯಗಳನ್ನೂ ಒಂದೂ ಬಿಡದೆ ಹೇಳಿದ್ದ ಅವಳ ಕಣ್ಣುಗಳು ಈಗ ಮುಚ್ಚಿಕೊಂಡಿದ್ದುವು.

ಕಣ್ಣುಗಳನ್ನು ಭದ್ರವಾಗಿ ಮುಚ್ಚಿದ್ದಂತೆಯೇ ಆಕೆ "ಅಮ್ಮಾ, ಅಮ್ಮಾ" ಎಂದು ಸಣ್ಣದಾಗಿ ನರಳಿದಳು.

"ಸಾವಿತ್ರಿ" ಎಂದವನೇ ನಾನು ಅವಳ ಮುಖದತ್ತ ಬಾಗಿದೆ.

"ಸಾಕು......"

"ಸಾವಿತ್ರಿ, ದೀಪ... "

ಅವಳು ಎದ್ದು ಈಗ ಹಾಸಿಗೆಯ ಮೇಲೆ ಕುಳಿತುಕೊಂಡಳು.

"ಹೌದು. ದೀಪವನ್ನು ಆರಿಸಿ ನೀವು ಮಲಗಿಕೊಳ್ಳಿ. ಸ್ವಲ್ಪ ಹೊತ್ತು ಇದ್ದ ಈ ಮಂದಪ್ರಕಾಶವೇ ಸಾಕು."

ನೀನು ಹೇಳುವುದು ನನಗೆ ಅರ್ಥವಾಗಲಿಲ್ಲ, ಸಾವಿತ್ರಿ."

"ಇನ್ನು ಮುಂದೆ ನಾನು ಏನನ್ನೂ ಹೇಳುವುದು ಸಾಧ್ಯವಿಲ್ಲ. ನಾನು ಹೋಗುತ್ತೇನೆ. ನಾಳೆಗೇ ನೀವು ಬೇರೆ ಸ್ಥಳವನ್ನು ನೋಡಿಕೊಳ್ಳಿ."

"ಯಾಕೆ? ನಾನು ಅಂಥ ತಪ್ಪುಕೆಲಸ ಏನು ಮಾಡಿದ್ದೇನೆ?"

"ನೀವು ಮಾಡಿಲ್ಲ, ನಿಜ. ಆದರೆ ಇನ್ನುಮುಂದೆ ನೀವೂ ನಾನೂ ಈ ಮನೆಯಲ್ಲಿ ಸೇರಿ ಇರಲು ಸಾಧ್ಯವಿಲ್ಲ. ಅದು ಭಾರೀ ವಿಪತ್ತು" ಎಂದವಳೇ, ನನ್ನನ್ನು ಒಂದು ಸಲ ದಿಟ್ಟಿಸಿ, ಎದ್ದು ದೀಪವನ್ನಾರಿಸಿ, ಸರಸರನೆ ಹೊರನಡೆದು ತನ್ನ ಮನೆಗೆ ಹೋಗಿ ಬಾಗಿಲನ್ನು ಹಾಕಿಕೊಂಡುಬಿಟ್ಟಳು.

ಇದುವರೆಗೂ ನನ್ನ ಹೃದಯವನ್ನು ಬೆಳಗಿದ್ದ ಬೆಳಕು ಈಗ ನಂದಿಹೋಯಿತು.

ಸಾಕು, ಯಾವುದು ಸಾಕು ಎನ್ನುತ್ತೀರಾ?

ಅವಳ ಜೀವನ, ದುಃಖಬಾಳು, ಆ ಸೌಂದರ್ಯ. ನನ್ನ ಸಮಾಧಾನ, ಕ್ಷೀಣವಾದ ಆ ಬೆಳಕಿನಲ್ಲಿ....?

# ಹಣ ಬದುಕಿತು

ನಾಲ್ಕು ಐದು ಮನೆಗಳಾಚೆ, ಆ ಬೀದಿಯ ಕೊನೆಯಲ್ಲಿ, ಒಂದು ನಾಯಿ ಳೋಳೋ ಎಂದು ಊಳಿಹಾಕಿದ ಶಬ್ದ. ಅರುಣಾಚಲ ಮೊದಲಿಯಾರರನ್ನು ಸುತ್ತುಗಟ್ಟಿದ್ದ ಎಲ್ಲರಿಗೂ ಇದರಿಂದ ಹೃದಯಬಡಿತ. ಆ ಕೊಟಡಿಯಲ್ಲಿ, ಕ್ಷೀಣವಾಗಿ, ಉರಿಯುತ್ತಿದ್ದ ದೀಪದ ಬೆಳಕಿನಲ್ಲಿ, ಆಗ, ಒಬ್ಬರ ಮುಖವನ್ನು ಮತ್ತೊಬ್ಬರು ನೋಡಿಕೊಂಡರು. ಹೊರ ಪಡಸಾಲೆಯಲ್ಲಿದ್ದವರು, ಒಳಗೆ ಇದ್ದ ಹೆಣ್ಣು ಮಕ್ಕಳು, ಎಲ್ಲರೂ ಕಾಣದ ಒಂದು ಭಯದಿಂದ ಈಗ ನಡುಗಿಹೋದರು.

ಜಗಲಿಯಲ್ಲಿದ್ದ ಒಬ್ಬ ಆ ನಾಯಿಯನ್ನು ಓಡಿಸಲು ಎದ್ದುಹೋದ.

ಅರುಣಾಚಲ ಮೊದಲಿಯಾರ್ ಮಲಗಿದ್ದ ಕೊಟಡಿಯಲ್ಲಿ, ಅವರ ಕೊನೆಯ ಮಗ ಜಗದೀಶ, ಅವಸರವಾಗಿ ಅಲ್ಲಿದ್ದ ಕಿಟಿಕಿಯ ಬಾಗಿಲನ್ನು ಮುಚ್ಚಲು ಪ್ರಯತ್ನಿಸಿದ. ಮೊದಲಿಯಾರ್ ಶ್ರಮದಿಂದ ತಲೆಯನ್ನು ಈ ಕಡೆ ತಿರುಗಿಸಿ ಕೈಸಂಜ್ಞೆಮಾಡಿದರು. ದೊಡ್ಡ ಮಗ ವೈದ್ಯಲಿಂಗಂ, ಭಾವಮೈದುನ ಕಂದಸಾಮಿ ಮೊದಲಿಯಾರ್, ಆ ವೃದ್ಧನನ್ನು ಸಮೀಪಿಸಿದರು. ವೈದ್ಯಲಿಂಗಂ "ಏನಪ್ಪ ಬೇಕಾಗಿದೆ?" ಎಂದ.

ಆ ಮುದುಕರು, "ಕಿಟಿಕಿಯ ಬಾಗಿಲನ್ನು ಯಾಕೆ ಹಾಕುತ್ತೀರ?" ಎಂದರು. ಎಲ್ಲಿಯೋ ಮಾತನಾಡಿದ ಹಾಗೆ ಕ್ಷೀಣವಾದ ಧ್ವನಿ. ಆದರೂ ಜಗದೀಶನ ಕಿವಿಗೆ ಆ ಮಾತು ಕೇಳಿಸಿತು.

"ಜಿಲ್ ಎಂತ ಗಾಳಿ ಬೀಸ್ತಾ ಇದೆ. ಅದಕ್ಕಾಗಿ" ಎಂದ.

"ಪರವಾಯಿಲ್ಲ, ಮುಚ್ಚಬೇಡ" ಎಂದು ವೃದ್ಧರು ನುಡಿದರು.

ಅರ್ಧಮುಚ್ಚಿದ್ದ ಬಾಗಿಲನ್ನು ಈಗ ಪೂರ್ಣವಾಗಿಯೇ ತೆರೆದ ಜಗದೀಶ.

ನಾಯಿ ಊಳಿಹಾಕಿದುದನ್ನು ತಂದೆ ಕೇಳಬಾರದು ಎನ್ನುವುದು ಜಗದೀಶನ ಉದ್ದೇಶ. ಆದರೆ ಅವರು ಈಗ ಅದನ್ನು ಕೇಳಿಸಿಕೊಂಡರು ಎಂದು ಅವನಿಗೆ ಅರಿವಾಯಿತು. ಚಿಂತೆಯಿಂದಲೂ ಭಯದಿಂದಲೂ ಎಲ್ಲರೂ ಅವರತ್ತ ನೋಡಿದರು. ಆದರೆ ಆ ವೃದ್ಧರೋ ಭದ್ರವಾಗಿ ಈಗ ಕಣ್ಣುಗಳನ್ನು ಮುಚ್ಚಿಕೊಂಡಿದ್ದರು.

ಎರಡನೆಯ ಸಲವೂ ನಾಯಿ ಊಳಿಹಾಕಿತು. ಬಳಿಕ ತನ್ನ ಮೇಲೆ ಬಿದ್ದ ಕಲ್ಲಿನ ಪೆಟ್ಟಿನಿಂದ ಕುಯ್ಯೋ ಮುರ್ರೋ ಎಂದು ಕೂಗನ್ನು ಹಾಕುತ್ತ ಅತ್ತ ಓಡಿಹೋಯಿತು.

ಅರುಣಾಚಲ ಮೊದಲಿಯಾರರ ಕಣ್ಣುಗಳು ಮುಚ್ಚಿಯೇ ಇದ್ದುವು. ನಾಯಿಯ ಊಳಿ, ಅವರ ಮನಸ್ಸಿನಲ್ಲಿದ್ದ ಅಲ್ಪಸ್ವಲ್ಪ ಆಸೆಯನ್ನೂ ನಂಬಿಕೆಯನ್ನೂ ಈಗ ಪೂರ್ಣವಾಗಿ ಅಳಿಸಿಹಾಕಿತ್ತು. 'ಬೆಳಿಗ್ಗೆ ಮದರಾಸಿನಿಂದ ದೊಡ್ಡ ಡಾಕ್ಟರು ಬರುತ್ತಾರೆ ನನ್ನ ಆಯುಸ್ಸನ್ನು ದೀರ್ಘಗೊಳಿಸುತ್ತಾರೆ' ಎಂದಿದ್ದ ಮನಸ್ಸು, ಈಗ, ಬೆಳಗಾಗುವುದ

ರೊಳಗೆ ಬರಲಿದ್ದ ಕಾಲವನ್ನು ಕುರಿತು ಚಿಂತಿಸತೊಡಗಿತ್ತು. 'ಇನ್ನು ನಂಬಿಕೆಗೆ ಆಧಾರ ವಿಲ್ಲ' ಎಂದು ಅವರ ಹೃದಯ ವೇಗವಾಗಿ ಬಡಿದುಕೊಂಡಿತು.

ಮೊದಲಿಯಾರ್ ಮದರಾಸಿನಿಂದ ಹಳ್ಳಿಗೆ ಬಂದು ಒಂದು ತಿಂಗಳು ಮಾತ್ರ ಕಳೆದಿತ್ತು. ಅಲ್ಲಿದ್ದಾಗಲೇ ಅವರಿಗೆ ಆರೋಗ್ಯ ಅಷ್ಟು ಚೆನ್ನಾಗಿರಲಿಲ್ಲ. ಆಗಾಗ್ಗೆ ಆಯಾಸ, ನಿತ್ರಾಣ. ಅವರಿಗೆ ಈ ಬಗ್ಗೆ ಆಶ್ಚರ್ಯ ಸಹ.

'ನರೆ ಮತ್ತು ಸುಕ್ಕು ದೇಹಕ್ಕೆ ಸೇರಿದ್ದು. ಮುಪ್ಪು ಮನಸ್ಸಿಗೆ ಸಂಬಂಧಿಸಿದ್ದು. ನಮ್ಮ ಚಿಂತನಾಶಕ್ತಿಯ ಮಿಂಚೇ ಯೌವನದ ಲಕ್ಷಣ. ಹೃದಯದಲ್ಲಿ ಹಸಿರು ಇರುವ ವರೆಗೆ ನಮಗೆ ಮುಪ್ಪು ತಗಲುವುದಿಲ್ಲ' ಎಂದು ಅವರು ಯಾವುದೋ ಪುಸ್ತಕದಲ್ಲಿ ಓದಿದ ನೆನಪು. ಅದನ್ನೇ ಅವರು ತಮ್ಮ ಬಾಳಿನ ಗುರಿಯಾಗಿಟ್ಟುಕೊಂಡಿದ್ದರು. 'ದೇಹದಲ್ಲಿ ಬದಲಾವಣೆ ಆಗುವುದು ಸ್ವಾಭಾವಿಕ. ಮನಸ್ಸಿಗೆ ಇದರಿಂದೇನೂ ಬಾಧಕ ವಿಲ್ಲ' ಎಂದು ಹೇಳಿಕೊಳ್ಳುವುದು ಅವರಿಗೆ ಸಾಮಾನ್ಯವಾಗಿ ಹೋಯಿತು.

ದೃಢಮನಸ್ಕರಾದ ಅವರನ್ನೂ ಯಾಕೋ ಈಗ ಭಯ ಆವರಿಸಿತು. ಡಾಕ್ಟರನ್ನು ನೋಡಿದರು. "ನಿಮಗೆ ಏನೂ ಕಾಯಿಲೆ ಇಲ್ಲ. ಭಯಪಡಬೇಡಿ. ಶಕ್ತಿಮೀರಿ ದುಡಿಯುತ್ತಿರುವುದೇ ಇದಕ್ಕೆ ಕಾರಣ. ಸ್ವಲ್ಪ ದಿನ ಹಳ್ಳಿಗೆ ಹೋಗಿ ವಿಶ್ರಾಂತಿ ತೆಗೆದು ಕೊಂಡರೆ ಎಲ್ಲ ಸರಿಹೋಗುತ್ತದೆ" ಎಂದರು ಡಾಕ್ಟರು.

ಡಾಕ್ಟರ ಸಲಹೆಯನ್ನು ಮೊದಲಿಯಾರ್ ಒಪ್ಪಿಕೊಂಡರು. 'ಕೊಡೈಕ್ಕೆನಾಲ್, ಕುಟ್ರಾಲು, ನೀಲಗಿರಿ ಇತ್ಯಾದಿ ಯಾವುದಾದರೂ ಸ್ಥಳಗಳಿಗೆ ಹೋಗಿದ್ದು ಬನ್ನಿ' ಎಂದು ಮಕ್ಕಳೂ ಬಂಧುಗಳೂ ಹೇಳಿದರು. ಆದರೆ ಮೊದಲಿಯಾರ್ ಅಂಥ ಸ್ಥಳಗಳಿಗೆ ಎಲ್ಲಿಗೂ ಹೋಗದೆ ತಮ್ಮ ಸ್ವಗ್ರಾಮಕ್ಕೆ ಮರಳಲು ನಿರ್ಧರಿಸಿದರು.

ಗ್ರಾಮದಲ್ಲಿ ತಲೆತಲಾಂತರದಿಂದ ಬಂದ ಆಸ್ತಿ ಅವರಿಗೆ ಇದ್ದಿತು. ಸಾಕಷ್ಟು ಹೊಲ ಗದ್ದೆಗಳೂ ಇದ್ದುವು. ತಾವು ಸಂಪಾದಿಸಿದ ಸಂಪಾದನೆಯಲ್ಲಿ ಇವರು ಮೇಲೂ ಹಾಕಿ ಆಸ್ತಿಯನ್ನು ವರ್ಧಿಸಿದ್ದರು. ಈಗ ಕೆಲವು ದಿನಗಳಿಂದ ಗ್ರಾಮಕ್ಕೆ ಹೋಗಬೇಕು ಎಂದೇನೋ ಅವರಿಗೆ ಮನಸ್ಸಿದ್ದಿತು. ಆದರೆ ಮದರಾಸಿನಲ್ಲಿ, ಸಂಪಾದನೆಯನ್ನು ಬಿಟ್ಟು, ಆ ಕಡೆ ಈ ಕಡೆ ಸುಳಿಯಲೂ ಅವರಿಗೆ ವ್ಯವಧಾನವಿಲ್ಲ.

ಈಗ ಆರೋಗ್ಯದೃಷ್ಟಿಯಿಂದ, ಡಾಕ್ಟರ ಸಲಹೆಯ ಮೇರೆಗೆ, ಅವರು ತಮ್ಮ ಹಳ್ಳಿಗೆ ಹಿಂದಿರುಗಿದರು.

## 2

ಅರುಣಾಚಲ ಮೊದಲಿಯಾರರ ಆಗಮನ ಗ್ರಾಮದಲ್ಲಿ ಹಬ್ಬವಾಯಿತು. ಅವರು ಆ ಪ್ರಾಂತ್ಯದಲ್ಲಿಯೇ ದೊಡ್ಡ ಜಮೀನುದಾರರು. ಮದರಾಸಿನಲ್ಲಿ ಪ್ರಸಿದ್ಧ ವರ್ತಕರು.

ಲಕ್ಷಗಟ್ಟಲೆ ಕೊಳ್ಳುವ ಕೊಡುವ ವ್ಯಾಪಾರವನ್ನು ಅವರ ಸಂಸ್ಥೆ ಮಾಡುತ್ತಿತ್ತು. ಮೊದಲಿಯಾರ್ ಮುಟ್ಟಿದ್ದೆಲ್ಲ ಚಿನ್ನ ಎನ್ನುವ ಮಾತು, ಗ್ರಾಮದಲ್ಲಿ ಮಾತ್ರವಲ್ಲ ನಗರದಲ್ಲೂ ವ್ಯಾಪಿಸಿತ್ತು.

ಒಂದು ದೃಷ್ಟಿಯಲ್ಲಿ ಆ ಮಾತು ನಿಜ. ಮೊದಲಿಯಾರರ ವ್ಯಾಪಾರ ಚತುರತೆ ಹೆಚ್ಚಿನದು. ವ್ಯಾಪಾರದಲ್ಲಿ ಮುಂದೆ ಉಂಟಾಗುವ ಲಾಭ ನಷ್ಟವನ್ನು ಕುರಿತು ಮೊದಲೇ ಊಹಿಸುವ ಚಿಂತನಾಶಕ್ತಿ ಅವರಿಗಿತ್ತು. ನಷ್ಟ ಏರ್ಪಡುವ ಯಾವ ವ್ಯವಹಾರದಲ್ಲಿಯೂ ಅವರು ಎಂದೂ ಕೈಹಾಕುತ್ತಿರಲಿಲ್ಲ.

ಮೊದಲಿಯಾರ್ ತಮ್ಮ ಇಪ್ಪತ್ತೈದನೆಯ ವಯಸ್ಸಿನಲ್ಲಿ ಮದರಾಸಿಗೆ ತೆರಳಿದರು. ಮೂವತ್ತು ವರುಷಗಳು ಅಲ್ಲಿ ಕಳೆದದ್ದು ಆಗಿದೆ. ಈ ಅವಧಿಯಲ್ಲಿ ಹಂತ ಹಂತವಾಗಿ ಅವರು ಮೇಲೇರಿದರು. ವರ್ಷಕ್ಕೆ ಒಂದು ಲಕ್ಷ ಸಂಪಾದಿಸುತ್ತಾರೇನೋ ಎನ್ನುವಂಥ ಅನುಕೂಲಸ್ಥಿತಿ ಅವರದು.

ಗ್ರಾಮಕ್ಕೆ ಈಗ ಅವರು ವಿಶ್ರಾಂತಿ ತೆಗೆದುಕೊಳ್ಳುವುದಕ್ಕಾಗಿಯೇ ಬಂದರು. ವಿಶ್ರಾಂತಿಯ ಸಮಯದಲ್ಲಿ ತಮ್ಮ ಹೊಲ ಮನೆಗಳ ಕಡೆಗೂ ಗಮನಹರಿಸಲು ಸಾಧ್ಯ ವಾಗುತ್ತದೆ ಎಂದು ಅವರು ಬಗೆದರು. ಆದರೆ ಅವರು ಗ್ರಾಮಕ್ಕೆ ತೆರಳಿದ ಎರಡು ಮೂರು ದಿನಗಳಲ್ಲಿ ಅವರ ದೇಹಸ್ಥಿತಿ ವಿಷಮಿಸಿತು. ಒಡನೆಯೇ ಅವರು ಮದರಾಸಿಗೆ ಹಿಂದಿರುಗ ಬಹುದಾಗಿದ್ದಿತು. ಆದರೆ ನೋಡೋಣ ಎಂದು ಕೆಲವು ದಿನಗಳು ಉಳಿದರು. ಈಗ ಊರು ಬಿಟ್ಟು ಹೊರಗೆ ಹೋಗಲೇಕೂಡದು ಎಂದು ಡಾಕ್ಟರರು ಅವರಿಗೆ ಸಲಹೆಮಾಡಿದ್ದಾರೆ.

ಮದರಾಸಿನಿಂದಲೇ ಈಗ ಡಾಕ್ಟರುಗಳು ಬಂದರು. ಮೊದಲಿಯಾರ್ ಆಸೆಯಿಂದ ತೆಗೆದುಕೊಂಡ ಹೊಸ ಬ್ಯೂಕ್ ಕಾರು, ವೈದ್ಯಲಿಂಗಂ ಬಳಿಯಿದ್ದ ಆರ್ಮ್‌ಸ್ಟ್ರಾಂಗ್ ಕಾರು, ಮದರಾಸಿಗೂ ಆ ಗ್ರಾಮಕ್ಕೂ ಓಡಾಡುತ್ತಿದ್ದುವು. "ಇನ್ನು ಏನೂ ಭಯವಿಲ್ಲ. ಒಂದು ವಾರದಲ್ಲಿ ಮದರಾಸಿಗೆ ಹಿಂದಿರುಗಬಹುದು" ಎಂದು ಡಾಕ್ಟರರು ಹೇಳುವರು. ಆ ಸಂತೋಷ ಎರಡು ದಿನಗಳು ಮಾತ್ರ. ಮೂರನೆಯ ದಿನ ಎಲ್ಲವೂ ತಲೆಕೆಳಗು. ಮತ್ತೆ ಅದೇ ಡಾಕ್ಟರ್, "ಇನ್ನು ಹದಿನೈದು ದಿನಗಳು ನೀವು ಎಲ್ಲಿಯೂ ಹೋಗ ಕೂಡದು" ಎನ್ನುವರು.

ಎರಡು ದಿನಗಳಿಂದ ನಂಬಿಕೆಗೆ ಸ್ವಲ್ಪ ಅವಕಾಶ ಇದ್ದಿತು. ಮದರಾಸಿನಿಂದ ದೊಡ್ಡ ಡಾಕ್ಟರ್ ಒಬ್ಬರನ್ನು ಕರೆತರುವುದು ಎಂದು ತೀರ್ಮಾನವಾಗಿತ್ತು. ಅವರು ಕಾರಿನಲ್ಲಿ ಬರಬೇಕಾದರೆ ನಿಧಾನವಾಗುತ್ತದೆ. ಆದುದರಿಂದ ಆ ಗ್ರಾಮಕ್ಕೆ ಒಂದು ಮೈಲಿ ದೂರ ದಲ್ಲಿರುವ ವಿಶಾಲವಾದ ಒಂದು ಮೈದಾನಕ್ಕೆ ವಿಮಾನದ ಮೂಲಕ ಕರೆತರುವುದು ಎಂದು ಏರ್ಪಾಡಾಗಿದೆ. ಅಲ್ಲಿಂದ ಕಾರಿನ ಪ್ರಯಾಣ. ನಾಳೆ ಬೆಳಗ್ಗೆ ವಿಮಾನದ ಮೂಲಕ ಆ ಡಾಕ್ಟರು ಇಲ್ಲಿಗೆ ಬರುವವರಿದ್ದಾರೆ.

ಆದರೆ ಈಗ ಆ ಡಾಕ್ಟರು ಬಂದು ಸೇರುವುದಕ್ಕೆ ಮೊದಲೇ ಮೃತ್ಯು ಬರುತ್ತದೆ ಎಂದು ಆ ನಾಯಿ ಊಳಿಯಿಟ್ಟು ಸಾರುತ್ತಿದೆ. ಮೊದಲಿಯಾರರ ಮನಸ್ಸು ವೇಗವಾಗಿ ಚಲಿಸಿತು. 'ನಂಬಿಕೆಗೆ ಇನ್ನು ಅವಕಾಶವಿಲ್ಲ, ಅವಕಾಶವಿಲ್ಲ' ಎಂದು ತಾವೇ ಹತ್ತು ಸಲ ಅವರು ಹೇಳಿಕೊಂಡರು.

## 3

ಮೊದಲಿಯಾರ್ ವ್ಯಾಪಾರಕ್ಕೆಂದು ಪ್ರವೇಶಿಸಿದ ಆ ದಿನಗಳಲ್ಲಿ ತುಂಬಾ ದೈವಭಕ್ತ ರಾಗಿದ್ದರು. ಆ ಮೇಲೆ ಅವರು ನಾಸ್ತಿಕರಾಗಲಿಲ್ಲ, ನಿಜ. ಆದರೆ ಮೊದಲಿನ ಹಾಗೆ ದೇವರನ್ನು ಅವರು ಅಷ್ಟು ಹಚ್ಚಿಕೊಂಡ ಹಾಗೆ ಕಾಣೆ. ಆ ಭಕ್ತಿ ಭಾವ ಅವರನ್ನು ಬಿಟ್ಟು ದೂರ ಸರಿದಿತ್ತು. ಮನೆಯಲ್ಲಿ ನಡೆಯುವ ಹಬ್ಬ, ಪೂಜೆ ಇತ್ಯಾದಿಗಳಲ್ಲಿ ಅವರು ಭಾಗವಹಿಸುತ್ತಿದ್ದರು, ಸರಿಯೇ. ದಾನಧರ್ಮಗಳಿಗೂ ಸಾಕಷ್ಟು ಖರ್ಚು ಮಾಡುತ್ತಿದ್ದರು. ಆದರೆ ಅವೆಲ್ಲವೂ ಹೃದಯತುಂಬಿದ್ದಲ್ಲ.

ಈ ಸ್ಥಿತಿಗೆ ಅವರು ಬರಲು ಕಾರಣ ಅವರ ವೃತ್ತಿ. ಅವರ ಹೃದಯದಲ್ಲಿ ಮೊದಲು ಏನೇನು ಇದ್ದಿತೋ ಅಲ್ಲೆಲ್ಲ ಈಗ ಹಣ ವ್ಯಾಪಿಸಿಕೊಂಡಿತ್ತು. ತನ್ನ ನೆಲೆ ಯನ್ನಾಗಿ ಮಾಡಿಕೊಂಡಿತ್ತು. ಇದು ಅವರ ಅರಿವಿಗೆ ಬರಲೇ ಇಲ್ಲ.

ಗ್ರಾಮದಲ್ಲಿ ಅವರ ಸ್ಥಿತಿ ಚಿಂತಾಜನಕವಾದ ಮೇಲೆ, ಹಣಕ್ಕಿಂತ ಬೇರೆ ವಿಷಯ ಗಳು ಅವರ ಮನಸ್ಸನ್ನು ಕೊರೆಯಲಾರಂಭಿಸಿದುವು. ತಮ್ಮ ಕಾಲಾನಂತರ. ತಮ್ಮ ಆಸ್ತಿ-ವ್ಯಾಪಾರ ಹೇಗೆ ಸಾಗುತ್ತದೆ ಎನ್ನುವುದೇ ಅವರ ಚಿಂತೆ. ಬೇಗ ಅದಕ್ಕೊಂದು ದಾರಿ ಮಾಡಬೇಕು ಎಂದು ಅವರು ಈಗ ಚಡಪಡಿಸಿದರು. ತಮ್ಮ ಮಕ್ಕಳನ್ನು ಸನಿಹಕ್ಕೆ ಕರೆದು, ಅವರೊಂದಿಗೆ ಮಾತನಾಡಿದರು. ಭಾವಮೈದುನ ಕಂದಸಾಮಿ "ಅದನ್ನೆಲ್ಲ ಈಗ ನೀವು ಯಾಕೆ ಯೋಚನೆ ಮಾಡುತ್ತೀರಿ? ಮದರಾಸಿನಿಂದ ದೊಡ್ಡ ಡಾಕ್ಟರರನ್ನು ಕರೆಸೋಣ. ಇನ್ನು ಒಂದು ವಾರದಲ್ಲಿ ಮದರಾಸಿಗೆ ಹಿಂದಿರುಗ ಬಹುದು. ಆ ಮೇಲೆ ಬಾಕಿ ವಿಷಯಗಳನ್ನು ಕುರಿತು ಯೋಚಿಸೋಣ ಎಂದ.

ಕಂದಸಾಮಿ ಮೊದಲಿಯಾರ್ ಹೇಳಿದ ಮಾತು ಈಗ ಅವರಿಗೆ ತುಂಬಾ ಹಿತವಾ ಗಿತ್ತು. ತಮ್ಮ ಅನಂತರ ಆಸ್ತಿಗೆ ಒಂದು ವ್ಯವಸ್ಥೆ ಮಾಡಿ ಕಣ್ಣುಮುಚ್ಚೋಣ ಎಂದಿದ್ದ ಅವರಿಗೆ ಭಾವಮೈದುನನ ಮಾತು, ಎರಡನೆಯ ಅಂಶವನ್ನು ಕುರಿತು ಯೋಚಿಸುವು ದಾದರೂ ಯಾಕೆ ಎಂದು ತೀರ್ಮಾನಮಾಡಿತು. ಈ ಸಲ ಹಾಸಿಗೆ ಬಿಟ್ಟು ಮೇಲೆದ್ದರೆ ಎಲ್ಲ ಸಮರ್ಪಕವಾಗಿ ಮಾಡಿ ಮುಗಿಸಬೇಕು ಎಂದು ಅವರು ನಿಶ್ಚಯಮಾಡಿಕೊಂಡರು.

ಆ ತೀರ್ಮಾನ ಸರಿಯಾದುದಲ್ಲ ಎಂದು ನಾಯಿ ಈಗ ಊಳಿ ಹಾಕಿದೆ. ಮೊದಲಿ ಯಾರ್ ದಿಕ್ಕೆಟ್ಟರು. ಈ ಜನ್ಮ ಪೂರಾ ದೈವದ ಚಿಂತನೆಮಾಡಲು ಸಾಧ್ಯವಾಗದೆ,

ಇಷ್ಟು ಬೇಗ ಎಲ್ಲ ಮುಗಿದು ಹೋಗುತ್ತಿದೆಯಲ್ಲಾ ಎಂದು ಅವರು ಹಲುಬಿದರು. ದೇವರನ್ನೂ ಅವರು ಈಗ ಪ್ರಾರ್ಥಿಸಿಕೊಂಡರು.

"ದೇವರೇ, ಇದೊಂದು ಅವಕಾಶ ನನಗೆ ಕೊಡು ಸ್ವಾಮಿ."

ದೇವರಿಂದ ಉತ್ತರ ಬರಲಿಲ್ಲ. ಆದರೆ ಅವರು ಮೇಲೂ ಹೇಳಿಕೊಂಡರು.

"ಇದಕ್ಕಾಗಿ ನೀನು ಏನು ಬೆಲೆ ಹೇಳಿದರೂ ನಾನು ತೆರುತ್ತೇನೆ. ನಾನು ಸಂಪಾದನೆ ಮಾಡಿದ ಎಲ್ಲ ದ್ರವ್ಯ. ನೀನು ಎಂಥ ಜಾಗಕ್ಕೆ ತೆಗೆದುಕೊಂಡು ಹೋಗಿ ಹಾಕು ಎಂದರೂ ಹಾಕುತ್ತೇನೆ.

ಯಮ ನಮ್ಮ ಗ್ರಾಮದ ಎಲ್ಲೆಗೆ ಬಂದಿದ್ದಾನೆಂದು ನಾಯಿ ಈಗ ಸಾರುತ್ತಿದೆ . . ."

ಅಲ್ಲಿಂದ ಒಂದೇ ಹಾರಿಗೆ ಅವರ ಮನಸ್ಸು ಯಮನ ಸನ್ನಿಧಿಗೆ ಕುಪ್ಪಳಿಸಿತು:

"ಯಮಧರ್ಮರಾಜಾ, ಒಂದೇ ಒಂದು ವರ್ಷ ಮಾತ್ರ ನನಗೆ ಅವಕಾಶ ಕೊಡು. ಅಷ್ಟರೊಳಗೆ ನಾನು ಎಲ್ಲವನ್ನೂ ಮುಗಿಸಿಕೊಳ್ಳುತ್ತೇನೆ. ನಾನು ನನ್ನ ದೈವವನ್ನು ಸ್ತುತಿಸಲೂ ಸಮಯ ಸಿಕ್ಕಿದ ಹಾಗೆ ಆಗುತ್ತದೆ."

ಊಹೂಂ, ಯಾರಿಂದಲೂ ಸಮರ್ಪಕವಾಗಿ ಉತ್ತರವಿಲ್ಲ.

"ಯಮ ಬಂದೇ ಬಿಟ್ಟ. ಬಂದವನು ಬರಿಗೈಯಲ್ಲಿ ಹಿಂದಿರುಗಿ ಹೋಗಲಾರ. ಅಯ್ಯೋ, ನನಗೆ ಬದಲಾಗಿ ಯಾರಾದರೂ ಅವನೊಂದಿಗೆ ಹೋಗಲು ಸಿದ್ಧವಾದರೆ . . . ಹೌದು, ಬರಿಗೈಯಲ್ಲಿ ಅವನನ್ನು ಕಳಿಸಲಾರೆ. ಅವನ ಕುಟುಂಬಕ್ಕೆ ಎರಡು ಲಕ್ಷ ರೂಪಾಯಿಗಳನ್ನಾದರೂ ಧಾರಾಳವಾಗಿ ಕೊಟ್ಟುಬಿಡುತ್ತೇನೆ."

ಹೀಗೆ ಅವರ ಮನಸ್ಸು ಹುಚ್ಚು ಹುಚ್ಚಾಗಿ ಚಿಂತನೆಮಾಡಿತು.

ಮೊದಲಿಯಾರ್ ಕಣ್ಣುಗಳನ್ನು ತೆರೆದರು, ಎದುರಿಗೆ ಭಾವಮೈದುನ, ತಮ್ಮ ಹೆಂಡತಿ ಮಕ್ಕಳು ಎಲ್ಲರೂ ಶೋಕತಪ್ತರಾಗಿ ತಮ್ಮನ್ನು ಸುತ್ತುವರಿದಿರುವುದನ್ನು ಅವರು ಗಮನಿಸಿದರು. ಭಾವಮೈದುನನನ್ನು ಕುರಿತು, ನೋಡಿ ಏನೋ ತುಟಿ ಅಲುಗಿಸಿದರು. ದನಿ ಹೊರಬರಲಿಲ್ಲ. ಕಂದಸಾಮಿ ಬಾಗಿದವರೇ ತಮ್ಮ ಕಿವಿಯನ್ನು ಭಾವನ ಮುಖದ ಬಳಿ ಕೊಂಡೊಯ್ದರು.

ಅರುಣಾಚಲ ಮೊದಲಿಯಾರ್ "ನನ್ನ ಚೆಕ್ಕುಪುಸ್ತಕವನ್ನು ತರಲು ಹೇಳಿ" ಎಂದರು. ಮರುಕ್ಷಣದಲ್ಲಿಯೇ ಕಣ್ಣುಗಳನ್ನು ಮುಚ್ಚಿಬಿಟ್ಟರು.

## 4

ಐದು ನಿಮಿಷಗಳು ಕಳೆದಿರಬಹುದು. ಗ್ರಾಮದಲ್ಲಿಯೇ ಇದ್ದ ಒಬ್ಬರು ಡಾಕ್ಟರು ಬಂದು ತಮ್ಮ ನಾಡಿ ಹಿಡಿದು ನೋಡುತ್ತಿರುವುದರ ಅರಿವು ಮೊದಲಿಯಾರರಿಗೆ

ಆಯಿತು. ಡಾಕ್ಟರರ ಮುಖದಲ್ಲಿ ಏನು ರೇಖೆಗಳು ಮೂಡಿವೆ? ಜಗದೀಶ ಯಾಕೆ ಹಾಗೆ ಗಾಬರಿಯಿಂದ ರಹಸ್ಯವಾಗಿ ಏನೋ ಕೇಳುತ್ತಿದ್ದಾನಲ್ಲ!

ಡಾಕ್ಟರ್ ಸೂಜಿ ಚುಚ್ಚಿದರು. ಔಷಧಿಯ ವೇಗ ಎಡತೋಳಿನಿಂದ ಹೃದಯಕ್ಕೆ ಧಾವಿಸುತ್ತ ಇದೆ. ಅದೋ......ಅದೋ......ಹೃದಯದೊಳಗೆ ಹೊಕ್ಕಿದ್ದೂ ಆಯಿತು. ದೇಹದಾದ್ಯಂತ ಎಂತದೋ ಚಲನೆ.

ಮೊದಲಿಯಾರಿಗೆ ಈಗ ಸ್ವಲ್ಪ ಶಕ್ತಿ ಬಂದ ಹಾಗಾಯಿತು. ಡಾಕ್ಟರ್ ಮತ್ತೆ ನಾಡಿಯನ್ನು ಹಿಡಿದು ನೋಡಿದರು. ಬಳಿಕ ಹೇಳಿದರು:

"ಒಂದು ಗಂಟೆ ಹೀಗೆಯೇ ಕಳೆಯಲಿ. ನಾನು ಹೊರಗೆ ಇರುತ್ತೇನೆ. ಮತ್ತೆ ಒಂದು ಇಂಜಕ್ಷನ್ ಮಾಡಬೇಕಾಗಿದೆ."

ಕಂದಸಾಮಿ ಮೊದಲಿಯಾರ್ ಚೆಕ್ಕು ಪುಸ್ತಕವನ್ನು ಹಿಡಿದು ಬಂದು "ಡಾಕ್ಟರ್ ಚೆಕ್ಕು ಪುಸ್ತಕವನ್ನು ಭಾವ ತರಹೇಳಿದರಲ್ಲ" ಎಂದರು.

"ಮತ್ತೆ ಕೇಳಿದರೆ ನೋಡೋಣ. ಈಗತಾನೆ ಇಂಜಕ್ಷನ್ ಮಾಡಿರುವುದರಿಂದ ನಾಡಿಗೆ ಬಲ ಬಂದಿದೆ. ಈಗ ಆಲಸ್ಯ ಮಾಡುವುದು ಬೇಡ" ಎಂದವರೇ ಡಾಕ್ಟರ್ ಹೊರನಡೆದರು.

ಅರುಣಾಚಲ ಮೊದಲಿಯಾರ್ ಕಣ್ಣುಗಳನ್ನು ಮುಚ್ಚಿದ್ದಂತೆ ಇದಿಷ್ಟನ್ನೂ ಒಳ ಕಣ್ಣಿಂದಲೇ ನೋಡಿದರು.

"ಸೂಜಿ ಚುಚ್ಚಿರುವುದರಿಂದ ನಾಡಿಗೆ ಬಲಬಂದಿದೆ....ಅದು ನನಗೂ ತಿಳಿದ ಸಂಗತಿಯೇ....ಕಾಲ ನನ್ನ ಬಳಿ ಸಮೀಪಿಸಲು ಇನ್ನೂ ಒಂದು ಗಂಟೆ ಇದೆ.... ಮತ್ತೊಂದು ಸೂಜಿಮದ್ದು....ಹೀಗೆಯೇ ನಾಳೆಯವರೆಗೂ....ದೊಡ್ಡ ಡಾಕ್ಟರು ವಿಮಾನದಲ್ಲಿ ಬರುತ್ತಾರೆ....ಈ ಸೂಜಿಗಳನ್ನು ನಂಬಿದರೆ ಪ್ರಯೋಜನವಿಲ್ಲ.... ಯಮನನ್ನು ಎದುರಿಸಲು ಇವಕ್ಕೆ ಆಗುತ್ತವೆಯೇ?....ಎರಡು ಲಕ್ಷ ರೂಪಾಯಿ ಗಳು....ನನ್ನ ಬದಲು ಅವನಲ್ಲಿ ಹೋಗುವವನಿಗೆ ಚೆಕ್ಕಿನ ಒಂದೇ ಹಾಳೆ. ಅದರಲ್ಲಿ ಬರೆಯೋಣ....ಮೈದುನನಿಗೆ ಈ ಸಂಗತಿಯನ್ನು ತಿಳಿಸಿಬಿಡೋಣ...."

ಅರುಣಾಚಲ ಮೊದಲಿಯಾರರ ತುಟಿಗಳು ಪಟಪಟ ಎಂದುವು. ಕಣ್ಣುಗಳು ಮಾತ್ರ ಹಾಗೆಯೇ ಮುಚ್ಚಿಕೊಂಡಿದ್ದುವು. ದನಿ ಕೇಳಿಸಲಿಲ್ಲ. ಜಗದೀಶ ತಂದೆಯ ಬಳಿ ಬಾಗಿ ಅದೇನೆಂದು ಕೇಳಿದ. ಉಹೂಂ, ಬಳಿಕ "ಮಾವಾ, ಅದೇನೋ ಎರಡು ಲಕ್ಷ ಎನ್ನುತ್ತಿದ್ದೀರಲ್ಲ" ಎಂದ. ಮತ್ತೆ ಅವರೇನಾದರೂ ಹೇಳುತ್ತಾರೇನೋ ಎಂದು ಕಾದರು. ಇಲ್ಲ, ಈಗ ಆ ದೇಹದಲ್ಲಿ ಯಾವ ವಿಧವಾದ ಚಲನೆಯೂ ಇಲ್ಲ.

ಮೊದಲಿಯಾರರಿಗೆ ಈಗ ತಮ್ಮ ದೇಹದಲ್ಲಿ ಏನೇನೋ ವಿಚಿತ್ರಗಳು ಆಗುವ ಹಾಗೆ ಕಾಣುತ್ತ ಇದೆ.

ಒಂದು ಗಂಟೆ ಬಿಟ್ಟು ಒಂದು, ಹೀಗೆ ಎರಡು ಸಲ, ತಮಗೆ ಇಂಜಕ್ಷನ್ ಮಾಡಿರುವುದರ ಅರಿವು ಮೊದಲಿಯಾರರಿಗೆ ಆಯಿತು. ಒಂದೊಂದು ಸಲವೂ ಔಷಧ ದೇಹವನ್ನೆಲ್ಲ ವ್ಯಾಪಿಸುತ್ತಿದೆ ಎನ್ನುವ ಭಾವನೆ. ಆದರೆ ಅವರು ಮಾತ್ರ ಅವರ ಅಧೀನದಲ್ಲಿ ಇಲ್ಲ.

ಎರಡನೆಯ ಸಲ ಇಂಜಕ್ಷನ್ ಮಾಡಿದ ಮೇಲೆ "ಇನ್ನು ಮುಂದೆ ಪರವಾಯಿಲ್ಲ. ಒಂದು ಹತೋಟಿಗೆ ಬರುತ್ತ ಇದೆ. ಆದರೂ ನಾನು ಇಲ್ಲಿಯೇ ಇರುತ್ತೇನೆ." ಎಂದು ಹೇಳುತ್ತಿರುವ ಡಾಕ್ಟರ ಮಾತುಗಳೂ ಮೊದಲಿಯಾರರ ಕಿವಿಗೆ ಸ್ವಲ್ಪಸ್ವಲ್ಪವಾಗಿ ಬೀಳುತ್ತ ಇವೆ.

ಬಳಿಕ ಆ ಕೊಟಡಿಯಲ್ಲಿ ಯಾವ ವಿಧವಾದ ಶಬ್ದವೂ ಇಲ್ಲ. ಒಂದೆರಡು ಸಲ ಯಾರೋ ಅತ್ತಿಂದಿತ್ತ ಇತ್ತಿಂದತ್ತ ನಡಮಾಡಿದ ಹಾಗೆ. ಗುಸುಗುಸು ಮಾತು. 'ನೀವು ಹೋಗಿ ಮಲಗಿಕೊಳ್ಳಿ—ನಾನಿದ್ದೇನೆ' ಹೀಗೆ.

ಅನಂತರ ನಿಶ್ಶಬ್ಧ. ಹಾಗೆ ಎಷ್ಟು ಹೊತ್ತು ಕಳೆಯಿತೋ ತಿಳಿಯದು. ಆಗ ಅಲ್ಲಿನ ಮೌನವನ್ನು ಭೇದಿಸುವಂತೆ "ಅಯ್ಯಯ್ಯೋ, ಬಂದುಬಿಟ್ಟನಲ್ಲ" ಎನ್ನುವ ಕೂಗು ಕೇಳಿಸಿತು, ಬೇರೆ ಕೆಲವು ಶಬ್ದಗಳೂ ಮೊದಲಿಯಾರರ ಕಿವಿಗೆ ಬಿದ್ದುವು.

"ಬಂದೇಬಿಟ್ಟ. ಬೇರೆ ಯಾರು? ಅವನೇ. ನನಗೆ ಬದಲಾಗಿ ಬೇರೆ ವ್ಯಕ್ತಿ ಸಿಗಲಿಲ್ಲವೋ? ಕಂದಸಾಮಿ ಬಳಿ ಹೇಳಿದನೋ? ಎರಡು ಲಕ್ಷ ಖಂಡಿತ ಕೊಡುತ್ತಾನೆ. ಬೇರೆಯವನು ಸಿಗಲಿಲ್ಲವೋ ಏನೋ? ಹಾಗಾದರೂ ಮೇಲೂ ಆತ ನಿರೀಕ್ಷಿಸಿದರೆ ಧಾರಾಳವಾಗಿ ಕೊಡೋಣ. ಕೊಟ್ಟುಬಿಡಿ ಎಂದು ನಾನು ಹೇಳಲಿಲ್ಲವಲ್ಲ. ಅದೋ, ಅದು ಏನು ಶಬ್ದ? ಕಾಲನ ಕಾಲಗೆಜ್ಜೆಯ ಕುಣಿತವೋ? ಧಿಮಿತಕವೋ? ವೈದ್ಯಲಿಂಗಾ, ಮಾವನನ್ನು ಕೂಗೋ. ಆಳು ಸಿಕ್ಕಿದನೋ? ಎರಡು ಲಕ್ಷಕ್ಕೆ ಚೆಕ್ಕು ಬರೆದು ಕೊಡುತ್ತೇನೆ ಎಂದು ಹೇಳಿದಿರೋ ಇಲ್ಲವೋ? ಡಾಕ್ಟರಿಗೆ ನನ್ನ ನಾಡಿ ಸಿಕ್ಕಿದೆಯೋ ಹೇಗೆ? ಒಂದೇ ವರ್ಷ ಸಾಕು. ಬೇರೆಯವನನ್ನು ನಾನು ಖಂಡಿತಾಗಿಯೂ ಒಪ್ಪಿಸುತ್ತೇನೆ. ಖಂಡಿತವಾಗಿಯೂ ಮೋಸಮಾಡದೆ ಅವನ ಕುಟುಂಬಕ್ಕೆ ಚೆಕ್ಕನ್ನು ಕೊಟ್ಟುಬಿಡುತ್ತೇನೆ."

ಮೊದಲಿಯಾರರ ಮನಸ್ಸು ಕಾವೇರಿ ಪ್ರವಾಹದ ಸುಳಿಯಂತೆ ಸುತ್ತಲಾರಂಭಿಸಿತು. ಮತ್ತೆ ಮತ್ತೆ ಎರಡು ಲಕ್ಷ, ಬೇರೆಯವನು, ಒಂದು ವರ್ಷ—ಹೀಗೆ ಅವರ ಬಾಯಿ ಗುಣುಗುಣಿಸಿತು.

## 5

ಬಹು ದೂರದಲ್ಲಿ ಎಲ್ಲಿಯೋ ವಿಕಟ ಶಬ್ದ. ಮನಸ್ಸು ತಾನು ಯೋಚಿಸುವುದನ್ನೂ ಬಿಟ್ಟು ಆ ಗದ್ದಲವನ್ನು ಆಲಿಸಿತು. ಬೀದಿಯಲ್ಲಿ ಯಾರೋ ಓಡಿಹೋದರು.

ಏನೋ ಕೂಗನ್ನು ಹಾಕಿದರು. ತಮ್ಮ ಮನೆಯಲ್ಲಿಯೂ ಹಲವರ ಓಡಾಟ. ತಾವಿದ್ದ ಕೊಟಡಿಯಲ್ಲಿಯೂ ಗುಸಗುಸ. ಆದರೆ ಏನೂ ತಿಳಿಯುವ ಹಾಗಿಲ್ಲ. ಕಣ್ಣುಗಳನ್ನು ತೆರೆಯುವ ಪ್ರಯತ್ನ. ಉಹೂಂ, ದೇಹ ತಾವು ಹೇಳಿದ ಮಾತನ್ನು ಸುತಾರಾಂ ಕೇಳುತ್ತ ಇಲ್ಲ. ಈ ಶಬ್ದಗಳೆಲ್ಲ ತಾವು ಪ್ರಾಣವನ್ನು ಬಿಡುತ್ತಿರುವುದರ ಮುನ್ಸೂಚನೆ ಗಳೋ ಎಂದೂ ಮೊದಲಿಯಾರರು ಭಾವಿಸತೊಡಗಿದರು.

ಬೀದಿಯಲ್ಲಿ ಈಗ ಯಾರೋ ಮಾತನಾಡುವ ಶಬ್ದ ಕೇಳಿಸಿತು. ಆ ಮಾತುಗಳು ಈಗ ಮೊದಲಿಯಾರರ ಕಿವಿಗೆ ಬೀಳುತ್ತ ಇದೆ.

"ಮುನಿರತ್ನ ನಾಯುಡು ಮನೆಗೆ ಕಳ್ಳರ ಪ್ರವೇಶ ಆಗಿದೆ. ನಾಯುಡು ಊರಲ್ಲಿ ಇಲ್ಲ. ಮನೆಯಲ್ಲಿ ಇದ್ದವರು ಅವರ ಹೆಂಡತಿ ಮತ್ತು ಮಕ್ಕಳು. ಕಳ್ಳರು ಒಳಗೆ ಪ್ರವೇಶಿಸಿ ಆಭರಣಗಳ ಪೆಟ್ಟಿಗೆಯನ್ನು ತೆಗೆದುಕೊಳ್ಳುವಾಗ ಅವರ ಪತ್ನಿಗೆ ಎಚ್ಚರ ವಾಗಿ, 'ಅಯ್ಯೋ ಕಳ್ಳಾ, ಕಳ್ಳಾ' ಎಂದು ಕೂಗಿಕೊಂಡಿದ್ದಾಳೆ."

ಆ ಚೋರರಲ್ಲಿ ಒಬ್ಬ ಕತ್ತಿಯನ್ನು ಮುಂದೆ ನೀಡಿ ಬಾಯನ್ನು ಮುಚ್ಚಿಸಿದ. ಮನೆಯ ಒಳಬಾಗಿಲ ಅಗಳಿ ಹಾಕಿದ್ದುದರಿಂದ ಆಗ ಏನೂ ಮಾಡಲೂ ಸಾಧ್ಯ ವಿರಲಿಲ್ಲ.

ಇದೇನೋ ಶಬ್ದವಾಯಿತೆಂದು ತೆಂಕಲ ಬೀದಿಯಿಂದ ಕೆಲವರು ಧಾವಿಸಿ ಬಂದರು. ನಾಯುಡು ಅಕ್ಕನ ಮನೆ ಇವರ ಮನೆಯ ಹಿಂಭಾಗದ ರಸ್ತೆಯಲ್ಲಿ ಇದೆಯಷ್ಟೆ. ಅವರ ಮಗ ವೆಂಕಟಸಾಮಿ ಆ ಮನೆಯ ಹಿಂಭಾಗಕ್ಕೆ ಓಡಿಬಂದ.

ಆಗಷ್ಟೆ ಚಾಕುವನ್ನು ತೋರಿಸಿದ್ದವನು ಅದನ್ನು ಹಾಗೆಯೇ ಹಿಡಿದು ಹಿಂಭಾಗದ ಅವರ ಮನೆಯ ಗೋಡೆಯಿಂದ ಕೆಳಗೆ ಹಾರಿದ್ದ. ವೆಂಕಟಸಾಮಿ ಬಾಚಿ, ಬಳಸಿ, ಅವನನ್ನು ತಬ್ಬಿಕೊಂಡ. ಇಬ್ಬರೂ ತಿಮಿರಾಡಿದರು. ಆಗ ಆತ ಕೂಗಿಕೊಂಡ. ಮತ್ತೆ ಕೆಲವರು ಅಲ್ಲಿಗೆ ಓಡಿಬಂದರು. ಯಾವಾಗ ಜನರ ಗುಂಪು ಬರತೊಡಗಿತೋ ಆಗ, ಆ ಚೋರ, ಚಾಕುವನ್ನು ವೆಂಕಟಸಾಮಿಯ ಎದೆಗೆ ನೆಟ್ಟು ಓಡಿಹೋದ. ಸಹಾಯಕ್ಕೆ ಬಂದವರು ಕಳ್ಳನನ್ನು ಹಿಡಿಯಲು ಧಾವಿಸಿದರು. ಆದರೆ ಅವನು ಇವರ ಕೈಗೆ ಸಿಗಲಿಲ್ಲ.

ಕತ್ತಿ ವೆಂಕಟಸಾಮಿಯ ಎದೆಯನ್ನು ಬಲವಾಗಿ ಸೀಳಿಹಾಕಿದೆ. ರಕ್ತ ಮಡುಗಟ್ಟಿ ಹೋಯಿತು. ಪಾಪ, ಹುಡುಗ ತುಂಬಾ ಅಪಾಯ ಸ್ಥಿತಿಯಲ್ಲಿ ಇದ್ದಾನೆ ಎಂದು ಹೇಳುತ್ತಿದ್ದಾರೆ.

ಮತ್ತೆ ಯಾರೋ ಕೇಳಿದರು:

"ಡಾಕ್ಟರ್, ನೀವು ಹುಡುಗನನ್ನು ನೋಡಿದಿರಾ? ಅವನು ಬದುಕಿಕೊಳ್ಳು ತ್ತಾನೆಯೇ?"

"ನಾನು ಹೋಗುವುದಕ್ಕೆ ಮೊದಲೇ ಅವನು ತೀರಿಕೊಂಡ. ಕತ್ತಿ ಅವನ ಎದೆಯನ್ನು ಇಬ್ಭಾಗಮಾಡಿದೆ."

ಮತ್ತೊಬ್ಬರು, "ಸತ್ತೇ ಹೋದನೊ? ಅಯ್ಯೋ ಪಾಪವೇ, ಕಳೆದ ತಿಂಗಳು ತಾನೆ ಅವನಿಗೆ ಮದುವೆಯಾಗಿತ್ತು. ತುಂಬಾ ಒಳ್ಳೆಯ ಹುಡುಗ. ಧೈರ್ಯವಂತ, ಗುಣಶಾಲಿ. 'ಪೋಲೀಸ್ ಇಲಾಖೆಗೆ ಸೇರಲು ಕೆಲಸಕ್ಕೆ ಅರ್ಜಿ ಹಾಕುತ್ತೇನೆ ಎಂದಿದ್ದ' ಆ ಇಲಾಖೆಗೆ ಅವನು ಹೇಳಿ ಮಾಡಿಸಿದಂತೆ ಇದ್ದ" ಎಂದರು.

ಮೊದಲಿಯಾರರ ದೇಹದಲ್ಲಿ ಹೊಸಶಕ್ತಿ ಬಂದ ಹಾಗಾಯಿತು. ಅವರ ಚಿಂತನೆ ಈಗ ಬೇರೆ ಕಡೆಗೆ ಸಾಗಿತು.. 'ಅಬ್ಬಾ, ನಾಯಿ ಊಳೆ ಹಾಕಿದ್ದು ನನಗಾಗಿ ಅಲ್ಲ. ಯಮ ಬಂದದ್ದು ನಿಜ. ಆದರೆ ಅವನು ಮುನಿರತ್ನಂ ನಾಯುಡು ಮನೆಯ ಹಿಂಭಾಗ ಬಂದು ನಿಂತಿದ್ದಾನೆ. ನಾಯಿ ಅಲ್ಲಿ ಅವನನ್ನು ನೋಡಿ ಊಳೆಯಿಟ್ಟಿದೆ. ಊಹೂಂ, ಕಾಲ ನನ್ನನ್ನು ಕುರಿತು ಈಗ ಚಿಂತಿಸಲು ಸಾಧ್ಯವೇ ಇಲ್ಲ" ಎಂದು ಅವರ ಮನಸ್ಸು ಹೇಳಿತು.

ಕಣ್ಣುಗಳನ್ನು ತೆರೆಯಲು ಮೊದಲಿಯಾರ್ ಪ್ರಯತ್ನಿಸಿದರು. ಏನಾಶ್ಚರ್ಯ! ಈಗ ಕಣ್ಣುಗಳನ್ನು ತೆರೆಯಲು ಸಾಧ್ಯವಾಗಿದೆ. ಕೈಗಳನ್ನು ಮೆಲ್ಲಗೆ ಮೇಲೆತ್ತಲೂ ಆಗುತ್ತಿದೆ "ವೈದ್ಯಾ...." ಎಂದು ಅವರು ಕೂಗಿಕೊಂಡರು. ದನಿಯಲ್ಲಿ ಸ್ಪಷ್ಟತೆಯಿದೆ. ಅವರ ಇಬ್ಬರು ಮಕ್ಕಳೂ ವೈದ್ಯನನೂ ಬಳಿಯಲ್ಲಿಯೇ ಇದ್ದಾರೆ.

ಜಗದೀಶ "ತುಂಬ ಬೆವೆತು ಹೋಗಿದೆ" ಎನ್ನುತ್ತ ತಂದೆಯ ಹಣೆ, ಗಲ್ಲ, ಎಲ್ಲವನ್ನೂ ಒತ್ತತೊಡಗಿದ.

ಮೊದಲಿಯಾರ್ ವೈದ್ಯನನ ಕಡೆ ತಿರುಗಿ "ಚೆಕ್ಕಿನ ಹಾಳೆಯನ್ನು ಹರಿದುಹಾಕು" ಎಂದರು.

ಆತ "ಇನ್ನೂ ಅದರಲ್ಲಿ ಏನೂ ಬರೆಯಲಿಲ್ಲವಲ್ಲ. ತೆಗೆದುಕೊಂಡು ಬಾ ಎಂದಷ್ಟೆ ಹೇಳಿದಿರಿ" ಎಂದ.

"ಏನೂ ಬರೆಯಲೇ ಇಲ್ಲವೊ? ಹಾಗಾದರೆ ಅದನ್ನು ತೆಗೆದುಕೊಂಡು ಹೋಗಿ ಬೀರುವಿನಲ್ಲಿ ಇಟ್ಟುಬಿಡಿ" ಎಂದರು ಮೊದಲಿಯಾರ್.

ಹೌದು. ಅರುಣಾಚಲ ಮೊದಲಿಯಾರ್ ಯಾವೊತ್ತೂ ನಷ್ಟ ಏರ್ಪಡುವ ವ್ಯಾಪಾರಕ್ಕೆ ಕೈಹಾಕಿದ್ದೇ ಇಲ್ಲ.

## ಪ್ರಜ್ಞೆಯ ಹೊರಗೆ

"ಅದೋ ನೋಡು. ಆ ಹುಡುಗಿಯನ್ನು" ಎಂದ ಶೇಖರ.

"ಹುಡುಗಿಯರನ್ನು. . . ." ಎನ್ನುತ್ತ ಮುಗುಳು ನಗೆಯೊಂದಿಗೆ ಅವನೊಂದಿಗೆ ನಡೆದ. ಅವನ ಸ್ನೇಹಿತ ಕಿಟ್ಟು.

ಅವರಿಬ್ಬರೂ ಮಣಲರಾಶಿಯನ್ನು ದಾಟಿ ಸಮುದ್ರ ದಂಡೆಗೆ ಸಮೀಪಿಸುತ್ತಿದ್ದರು. ಅಂದು ದಂಡೆಯಲ್ಲಿ ಅಷ್ಟು ಗುಂಪು ಇದ್ದ ಹಾಗೆ ಕಾಣಲಿಲ್ಲ.

ಸ್ವಲ್ಪ ದೂರದಲ್ಲಿ, ಅಲೆಗಳು ತಮ್ಮನ್ನು ಸ್ಪರ್ಶಿಸುತ್ತಿವೆಯೋ ಎನ್ನುವಲ್ಲಿ, ಮೂವರು ಹುಡುಗಿಯರು ಕುಳಿತು ಇವರ ಕಡೆ ನೋಡುತ್ತ ಮಾತಾಡುತ್ತಿದ್ದರು.

"ನನಗೂ ಹುಡುಗಿಯರನ್ನು ನೋಡುವ ಅಭ್ಯಾಸವಿಲ್ಲ" ಎಂದು ಅವರನ್ನು ನೋಡಿ ಕೊಂಡೇ ಕಿಟ್ಟುವಿನೊಂದಿಗೆ ಹೆಜ್ಜೆ ಹಾಕಿದ ಶೇಖರ. "ನೋಡು, ಆ ಹುಡುಗಿಯನ್ನೇ ನಾನು ಹೇಳಿದ್ದು" ಎಂದು ಮತ್ತೆ ಹೇಳಿದ.

ಆ ಮೂವರು ಹುಡುಗಿಯರಲ್ಲಿ ಶೇಖರ ಹೇಳಿದ್ದು ಯಾರು ಎಂದು ಕಿಟ್ಟುವಿನಿಂದ ತಿಳಿದುಕೊಳ್ಳಲು ಸಾಧ್ಯವಾಗಲಿಲ್ಲ. ಗ್ರಾಮಜೀವನದಲ್ಲಿ ಬೇಸರ ಬಂದು, ನಾಲ್ಕು ದಿನಗಳು ಪಟ್ಟಣದಲ್ಲಿ ಇದ್ದುಹೋಗೋಣ ಎಂದು ಬಂದಿರುವ ಶೇಖರನ ವರ್ತನೆ, ಅವನ ಬಾಲ್ಯಸ್ನೇಹಿತನಾದ ಕಿಟ್ಟುವಿಗೆ ಕೂಡ ಅರ್ಥವಾಗಲಿಲ್ಲ. ಕೆಲವು ದಿನಗಳಿಂದ ಶೇಖರನ ನಡವಳಿಕೆಯಲ್ಲಿ ಏನೋ ಬದಲಾವಣೆ ಆಗುತ್ತ ಇದೆ.

"ಯಾರನ್ನು ಹೇಳುತ್ತ ಇದ್ದೀಯ? ಬಾಯಿಂದ ತಪ್ಪಿಸಿಕೊಂಡು ಹೊರಗೆ ಇಣುಕು ತ್ತಿರುವ ಹಲ್ಲುಗಳ ಆ ಹುಡುಗಿಯನ್ನೊ? ಎರಡು ಜಡೆ ತೂಗಿ ತೂನೆದಾಡುತ್ತಿರು ವವಳನ್ನೊ?" ಎಂದು ಹೇಳಿ ನಿಲ್ಲಿಸಿದ ಕಿಟ್ಟು.

ಅವನ ಮಾತಿನಲ್ಲಿ ಪರಿಹಾಸ್ಯ ಇದ್ದಿತೆ ಹೊರತು ನಿಜವಾಗಿ ಅವರನ್ನು ನೋಡಿ ಅವನು ಹಾಗೆ ಹೇಳಿದ್ದಲ್ಲ. ಮತ್ತೊಂದು ಹುಡುಗಿಯನ್ನು ವರ್ಣಿಸಲು ಇವನ ಕಲ್ಪನೆ ಗರಿಗೆದರಲಿಲ್ಲವೋ ಏನೋ? ಮಾತು ಅಲ್ಲಿಗೇ ನಿಂತಿತು.

"ಸರಿ ಕಿಟ್ಟು, ನೀನು ಹೇಳಿದ ಹುಡುಗಿಯರನ್ನು ನಾನು ನೋಡಿದೆ. ಆದರೆ ನಾನು ಅವರನ್ನು ನೋಡಿ ಈ ಮಾತು ಹೇಳಿದ್ದಲ್ಲ. ಅವರಿಬ್ಬರ ಮಧ್ಯದಲ್ಲಿ ಕುಳಿತಿ ದ್ದಾಳಲ್ಲ ನೋಡು, ಅವಳನ್ನು ನೋಡಿದರೆ ನಿನಗೇನನ್ನಿಸುತ್ತದೆ ಹೇಳು. . . .ನಗರ ದವರು ನೋಡುವ ರೀತಿಯಲ್ಲಿ ಅಲ್ಲದಿದ್ದರೂ ಪಂಡಿತರು ಹೇಳುತ್ತಾರಲ್ಲ ಆ ರೀತಿ ನೋಡು" ಎಂದ ಶೇಖರ.

"ಅದು ನನ್ನಿಂದ ಸಾಧ್ಯವೇ ಇಲ್ಲ. ನಾನು ಶಾಸ್ತ್ರೀಯವಾಗಿ ಓದಿ ತಮಿಳನ್ನು ಅಭ್ಯಾಸಮಾಡಲೇ ಇಲ್ಲ."

"ಈ ರೀತಿಯಲ್ಲಾದರೂ ನೀನು ಹೇಳಿದ್ದು ಸರಿ. ಇಲ್ಲದಿದ್ದರೆ ಮಾತಿನಲ್ಲೋ ಬರಹದಲ್ಲೋ ನೀನು ಬರಿಯ ಚಾಪೆಯನ್ನು ಸುತ್ತುತ್ತ ಇದ್ದೆ ಅಷ್ಟೆ. ಸದ್ಯ ಹಾಗೆ ಮಾಡದೆ ಹೋದೆಯಲ್ಲ. ನಾನು ಏನೋ ಹೇಳುತ್ತ ಇದ್ದರೆ, ನೀನು ಮತ್ತೇನೋ ಹೇಳುತ್ತ ನನ್ನ ಗಮನವನ್ನು ಬೇರೆ ಕಡೆಗೆ ತಿರುಗಿಸಲು ಪ್ರಯತ್ನಿಸಿದ್ದೀಯ. ಇರಲಿ, ಆ ಹುಡುಗಿಯನ್ನು ನೋಡು. ನಿನಗೆ ಏನು ತೋಚುತ್ತ ಇದೆ. ನಿನ್ನ ಉಪಮೆ, ವ್ಯಾಖ್ಯಾನ ಅವಳಿಗೆ ಹೊಂದಿಕೊಳ್ಳುತ್ತ ಇದೆ. ಅಲ್ಲವೆ?" ಎಂದ ಶೇಖರ.

ಆ ಹುಡುಗಿಯನ್ನು ತಲೆಯಿಂದ ಕಾಲಿನ ವರೆಗೆ ನೋಡಿದ ಮೇಲೆ ಕಿಟ್ಟುವಿಗೆ ಅವಳಲ್ಲಿ ಕಂಡದ್ದು ಅವಳ ಹಾವಭಾವ, ರೂಪ, ಆ ವಶೀಕರಣಶಕ್ತಿ. ಸೌಂದರ್ಯವೇ ಮಡುಗಟ್ಟಿದ ಹಾಗೆ ಅವಳು ಕಡಲಕರೆಯಲ್ಲಿ ಕುಳಿತಿದ್ದಳು. ನೋಡಿದವರ ಮನಸ್ಸು ಸೂರೆಗೊಳ್ಳುವ ರೀತಿ.

ಇಂಥ ಸೌಂದರ್ಯವೂ ಜಗತ್ತಿನಲ್ಲಿ ಇದೆಯೋ ಎಂದು ಯೋಚಿಸಿದ ಕಿಟ್ಟು. ಅವನ ಭುಜದ ಮೇಲೆ ಕೈಹಾಕಿ ಹೆಜ್ಜೆಯಿಡುತ್ತ ಶೇಖರ ಹೇಳಿದ:

"ಇವಳಷ್ಟು ರೂಪವತಿ ಜಗತ್ತಿನಲ್ಲಿ ಇದ್ದಾಳೆಯೇ ಎಂದು ನಿನಗೆ ಆಶ್ಚರ್ಯವಾಗಿ ಹಾಗೆಯೇ ನಿಂತುಬಿಟ್ಟಿದ್ದೀಯ ಅಲ್ಲವೆ? ಇದು ಒಂದು ಸಮಯ ಕಲ್ಪನೆಯಾಗಿರ ಬಹುದು ಎಂದೇ ನೀನು ಭಾವಿಸಬಹುದು. ಕಲ್ಪನೆ ಪುಡುಕುತ್ತ ಕಣ್ಣುಗಳಲ್ಲಿ ಬಂದು ನಿಲ್ಲಬಹುದು. ಕವಿ ಹಾಡಬಹುದು....ಯಾವ ಆಶ್ಚರ್ಯವೂ ದಿಗ್ಭ್ರಮೆಯೂ ಇಂಥ ಸಮಯಗಳಲ್ಲಿಯೇ ಆಗುವುದು ಸಹಜ....ನನಗೆ ಇವನ್ನೆಲ್ಲ ಸರಿಯಾಗಿ ಹೇಳು ವುದಕ್ಕೆ ಬರುವುದಿಲ್ಲ. ಅದಕ್ಕೆ ಈಗ ಅವಕಾಶವೂ ಇಲ್ಲ." ಎಂದವನೇ ಆತ ಸ್ವಲ್ಪ ಹೊತ್ತು ಮೌನವಾದ. ಬಳಿಕ "ಹೀಗೆ ನೀನು ಕಲ್ಪನೆಯನ್ನು ಹರಿಯಬಿಟ್ಟರೆ ನಿನ್ನ ಪ್ರತಿಯೊಂದು ನರನರಗಳಲ್ಲಿಯೂ ಆಕೆ ಹಾದುಹೋಗುತ್ತಾಳೆ" ಎಂದು ಹೇಳಿ ಮಾತನ್ನು ನಿಲ್ಲಿಸಿದ.

"ಶೇಖರ, ನಿನ್ನ ಮನೋವೇಗವೂ ಭಾವಾವೇಶವೂ ನನಗೆ ತಿಳಿದಿದೆ. ಕಲ್ಪನೆಗಳ ಆವೇಶಕ್ಕೆ ಒಳಗಾಗುವ ನೀನು ಎಲ್ಲಿ ಹೋಗಿ ಸೇರುತ್ತೀಯೋ ನನಗೆ ಅರ್ಥವಾಗುವು ದಿಲ್ಲ. ಆದರೆ ನನಗೆ...." ಎಂದವನೆ ಕಿಟ್ಟು ಮಾತನ್ನು ನಿಲ್ಲಿಸಿದ. ಅವನ ದನಿಯಲ್ಲಿ ಚಿಂತೆ ಬಹಳವಾಗಿ ಇತ್ತು.

"ಕಿಟ್ಟು, ನೀನು ಹೇಳುವುದು ಒಂದು ದೃಷ್ಟಿಯಲ್ಲಿ ಸರಿ ಎಂದು ನನಗೆ ತೋರುತ್ತಾ ಇದೆ. ಕೆಲವು ದಿನಗಳಿಂದ ನನಗೆ ಏನೂ ಅರ್ಥವಾಗುತ್ತಿಲ್ಲ. ಸುಶೀಲ ನಿನಗೆ ಚೆನ್ನಾಗಿ ಪರಿಚಯವಷ್ಟೆ. ಅವಳನ್ನು ಮದುವೆಯಾಗುವುದೇ ಒಂದು ಭಾಗ್ಯ ಎಂದು ಒಂದು ಕಾಲದಲ್ಲಿ ನಾನು ಭಾವಿಸಿದ್ದೆ. ಈವಾಗ ಅವಳನ್ನು ನೋಡಿದರೆ ಬೇರೆ ಯೋಚನೆ ನನಗೆ ಆಗುತ್ತ ಇದೆ. ಸ್ವಲ್ಪ ದಿನಗಳು ಅವಳಲ್ಲಿ ನಾನು ಉಲ್ಲಾಸವಾಗಿ

ಇರುತ್ತೇನೆ....ಮತ್ತೆ ಏನೋ ಭಯ ನನ್ನ ಹೃದಯವನ್ನು ಆಕ್ರಮಿಸಿಕೊಳ್ಳುತ್ತದೆ ....ಭಯ ಎನ್ನುವುದು ಸರಿಯಲ್ಲವೇನೋ, ಮನಸ್ಸು ಒಂದು ವಿಧವಾದ ದಿಗಿಲಿಂದ ತುಂಬಿಹೋಗುತ್ತದೆ. ಆ ದಿಗಿಲಿನಲ್ಲಿ, ಎಂಥದೋ ಶಕ್ತಿಯನ್ನು ಸಹ ಕೆಲವು ವೇಳೆ ಕಾಣುತ್ತೇನೆ. ಈ ಬೆದರುಗೊಂಬೆ ಸಮೀಪವಾಗಿಯೂ ಇರುತ್ತದೆ: ದೂರವಾಗಿಯೂ ಓಡಿಹೋಗುತ್ತದೆ, ಇದು, ಈವಾಗ, ನನ್ನ ಹೆಂಡತಿ ಸುಶೀಲೆಯಿಂದ ನನ್ನ ಮೇಲೆ ಆಗಿರುವ ಪರಿಣಾಮ....

ಮನೆಕೆಲಸಗಳಲ್ಲಿ ನನಗೆ ಕೆಲವು ಸಮಯ ಆಲಸಿಕೆಯೂ ನಿರುತ್ಸಾಹವೂ ಉಂಟಾಗು ತ್ತದೆ. ಸ್ಥಳ ಬದಲಾವಣೆಯಿಂದ ಮನಸ್ಸಿಗೆ ಸ್ವಲ್ಪ ಶಾಂತಿ ಸಿಕ್ಕೀತು ಎಂದು ನಾನು ಇಲ್ಲಿಗೆ ಬಂದೆ....ಇಲ್ಲಿ, ಈ ಹುಡುಗಿಯನ್ನು ನೋಡಿದ ಮೇಲೆ, ನನ್ನ ಹೆಂಡತಿಯ ರೂಪ ಇವಳಲ್ಲಿ ಎದ್ದು ಕಾಣುತ್ತಿದೆ...."

ಒಂದೇ ವೇಗದಲ್ಲಿ ನಡೆಯುವವನು ಹತ್ತು ಸಲ ಎಡವುವಂತೆ, ಅಂಥ ಧಾಟಿಯ ಲ್ಲಿತ್ತು ಶೇಖರನ ಮಾತು. ಆದರೂ ಆದಷ್ಟು ನಿಧಾನವಾಗಿಯೇ ಅವನು ಮಾತನಾಡಿದ. ನಗುನಗುತ್ತ ಕಿಟ್ಟುವನ್ನು ನೋಡಿ "ಏನೋ ಹರಟುತ್ತಾನೆ ಎಂದು ಭಾವಿಸಿಕೊಳ್ಳಬೇಡ. ಅದೋ, ಅವರಿಬ್ಬರ ನಡುವೆ ಕುಳಿತಿದ್ದಾಳಲ್ಲ, ಅವಳನ್ನು ನೋಡಿಯೇ ನಾನು ಹೇಳು ತ್ತಿದ್ದೇನೆ. ಸ್ವಲ್ಪ ದಿನಗಳಿಂದ ಸುಶೀಲೆಯನ್ನು ನೋಡಿದರೆ, ಏನೋ ಒಂದು ವಿಧವಾಗಿ ಆಗುತ್ತದೆ ಎಂದೆನಲ್ಲವೆ? ಆ ಭಾವನೆ ಇವಳನ್ನು ನೋಡಿದರೂ ಆಗುತ್ತ ಇದೆ. ಅದು ಏನು ಎಂದು ಮಾತ್ರ ಹೇಳಲು ಸಾಧ್ಯವಿಲ್ಲ. ಅದಕ್ಕಾಗಿಯೇ ನಿನ್ನ ಕೂಡ ಹೇಳುತ್ತ ಇದ್ದೇನೆ. ನಿನಗೂ ಈಗೇನಾದರೂ ಹೊಳೆದಿರಬಹುದು......ನಿನಗಲ್ಲದ ಬೇರೆ ಯಾರೊಂದಿಗಾದರೂ ಹೀಗೆ ಹೇಳಿದರೆ ಅವರು ನನ್ನನ್ನು ತುಚ್ಛವಾಗಿ ಕಾಣ ಬಹುದು.

ಮತ್ತೆ ಅವಳನ್ನು ನೋಡು. ಸಂದೇಹವಿಲ್ಲದೆ ಅವಳು ತುಂಬಾ ರೂಪವತಿ. ಅವಳು ಮದುವೆಯಾಗದ ಹುಡುಗಿ. ನೋಡಿದರೇ ತಿಳಿಯುತ್ತದೆ. ಅವಳು ದೊಡ್ಡ ವಳೂ ಆಗಿದ್ದಾಳೆ.

ದೊಡ್ಡವಳು ಎನ್ನುವುದು ಹೆಣ್ಣಿನ ಜೀವನದಲ್ಲಿ ಒಂದು ಮುಖ್ಯ ವಿಶೇಷ ಅಲ್ಲವೆ? ಹೆಣ್ಣು ಯಾವಾಗಲೂ ಮತ್ತೊಬ್ಬನ ಮನೆಗೆ ಹೋಗುವವಳೇ. ಬ್ರಹ್ಮಾಂಡವಾದ ಈ ಜಗತ್ತಿನ ಒಂದು ಸುಂದರ ಚಿತ್ರವಾಗಿ ಅರಳುವ ಹೆಣ್ಣನ್ನು, ಮದುವೆ ಎನ್ನುವ ನಿಬಂಧನೆಯ ಮೇಲೆ ಗಂಡು, ಅವಳನ್ನು ಬಂಧನಗೊಳಿಸಿ ಸುಖವನ್ನು ಅಪೇಕ್ಷಿಸುತ್ತಾನೆ. ಅವಳಲ್ಲಿ ತಾಯ್ತನವನ್ನು ಕಾಣುವುದೋ ಭಯಪಡುವುದೋ......ಏನು ಕಿಟ್ಟು, ನೀನು ಯಾವಾಗಲಾದರೂ ನಿನ್ನ ಹೆಂಡತಿಯನ್ನು ನೋಡಿ ಭಯಪಟ್ಟಿದ್ದೀಯಾ?" ಎಂದು ನಗುತ್ತ ಕೇಳಿದ ಶೇಖರ.

ಇವರುಗಳು ಮಾತಾಡಿಕೊಂಡೇ ಆ ಹುಡುಗಿಯರ ಸಮೀಪ ಬಂದುಬಿಟ್ಟರು. ತಮ್ಮ ಮಾತು ಅವರಿಗೇನಾದರೂ ಕೇಳಿಸಿತೋ ಎಂದು ಶಂಕಿಸಿ ತಕ್ಷಣ ನಿಲ್ಲಿಸಿಕೊಂಡರು. ಹರಟೆ ಹೊಡೆಯುತ್ತಿದ್ದ ಆ ಹುಡುಗಿಯರು ಸಹ ಇವರನ್ನು ನೋಡಿ ತಾವೂ ಮೌನವಾದರು. ಆದರೆ ಅವರಿಗೂ ಶಂಕೆ. ತಮ್ಮ ಮಾತನ್ನು ಇವರು ಕೇಳಿಸಿಕೊಂಡರೋ ಎಂದು. ಆದುದರಿಂದ ಅವರು ಒಬ್ಬರ ಮುಖವನ್ನು ಮತ್ತೊಬ್ಬರು ನೋಡಿಕೊಂಡು ಮುಗುಳುನಗೆ ಸೂಸಿದರು.

ಹೀಗೆ ಅವರಿಗೆ – ಇವರಿಗೆ ಏಕಕಾಲದಲ್ಲಿ ಶಂಕೆ ತಲದೋರಲು ಒಂದು ಬಗೆಯ ಗುಸುಗುಸು ವಾತಾವರಣ ಅಲ್ಲಿ ಏರ್ಪಟ್ಟಿತು.

* * * * *

ಮಾರನೆಯ ದಿನ ಶೇಖರ ಒಂದು ಹೋಟಲಿಗೆ ಉಪಹಾರಕ್ಕೆಂದು ಹೋದ. ಆ ಹೋಟಲಿನ ಮುಂದುಗಡೆ ಅವನು ಅದೇ ಹುಡುಗಿಯನ್ನು ಅಕಸ್ಮಾತ್ತಾಗಿ ಸಂಧಿಸಿದ. ಆಶ್ಚರ್ಯದಿಂದ ಇಬ್ಬರೂ ಪರಸ್ಪರ ನೋಡಿಕೊಂಡರು. ಇಬ್ಬರ ಮುಖದಲ್ಲಿಯೂ ಮಂದಹಾಸ ಮಿನುಗಿತು.

"ಉಳಿದವರು?" ಎಂದು ಶೇಖರ ನಗುತ್ತಲೆ ಅವಳನ್ನು ಕೇಳಿದ.

ಆಕೆ "ಯಾರು?" ಎಂದು ಮರುಪ್ರಶ್ನೆ ಹಾಕಿ "ಇದು ಸಂಜೆಯ ಸಮಯವಲ್ಲ. ಸಮುದ್ರ ದಂಡೆಯೂ ಅಲ್ಲ, ಅವರೊಂದಿಗೆ ಕೂಡಿ ಬರಲು..." ಎಂದಳು.

"ಸರಿ. ಅಭ್ಯಂತರ ಇಲ್ಲದಿದ್ದರೆ ಸ್ವಲ್ಪ ಕಾಫಿ ತೆಗೆದುಕೊಳ್ಳಬಹುದಲ್ಲ."

"ಈಗ ಬೇಕಾಗಿಲ್ಲ. ಮುಂದೆ ನೋಡೋಣ."

"ಓಹೋ" ಎಂದು ಶೇಖರ ಹೇಳುವುದರೊಳಗೆ. ಆ ಹುಡುಗಿ ತಲೆಬಾಗಿಸಿದಂತೆ ಅವಸರ ಅವಸರವಾಗಿ ಹೊರಟುಹೋದಳು. ಅವಳು ಹೋದ ಮೇಲೆಯೂ ಶೇಖರ ನಿಂತಲ್ಲಿಯೇ ನಿಂತ. ಮಧುರ ಸ್ವಪ್ನವನ್ನು ಕಂಡ ಹಾಗೆ ಅವನ ಮನಸ್ಸಿಗೆ ಭಾಸವಾಯಿತು.

ಅಪೊತ್ತು ಸಂಜೆ ಶೇಖರ ಮಾತ್ರ ಒಬ್ಬನೆ ಸಮುದ್ರ ದಂಡೆಗೆ ಹೋಗಬೇಕಾಯಿತು. ನಿನ್ನೆ ಕುಳಿತಿದ್ದ ಆ ಸ್ಥಳದಿಂದ ಇನ್ನೂ ಸ್ವಲ್ಪ ಮೇಲೆ ಆ ಹುಡುಗಿಯರು ಕುಳಿತಿದ್ದರು. ಇವೊತ್ತೂ ಅವರು ಬಂದಿದ್ದರು.

ಶೇಖರ ಅವರನ್ನು ಸಮೀಪಿಸಿದವನೆ, "ಬಹಳ ಹೊತ್ತು ಕಾಯುತ್ತ...." ಎಂದು ಆರಂಭಿಸಿದವನು, ಥಟ್ಟನೆ ಮಾತನ್ನು ಬದಲಿಸಿ "ಬಂದು ಬಹಳ ಸಮಯವಾಯಿತೋ?" ಎಂದ.

ಆ ಹುಡುಗಿಯರು ಗಾಬರಿಗೊಂಡರು. ಆದರೆ ಆಕೆ "ಹೌದು, ಸ್ವಲ್ಪ ಸಮಯವಾಗಿದೆ" ಎಂದಳು.

ಈತ ಅವರಿಗೆ ಸಮೀಪವಾಗಿಯೇ ಹೋಗಿ ಕುಳಿತ. "ಮಧ್ಯಾಹ್ನ ಸಿಟಿಯಲ್ಲಿ ಪರಿಚಯವಾಯಿತು" ಎಂದು ಆಕೆ ತನ್ನ ಗೆಳತಿಯರಿಗೆ ಶೇಖರನ ಪರಿಚಯ ಮಾಡಿ ಕೊಟ್ಟಳು. ಆ ಹುಡುಗಿಯರೋ ಇವನನ್ನೂ ಅವಳನ್ನೂ ಹೀಗೆ ಹಾಗೆ ನೋಡ ತೊಡಗಿದರು.

ಭಾನು, ಸುಶೀಲ, ಸುಮನೆ—ಈ ಮೂರು ಹೆಣ್ಣು ಮಕ್ಕಳು ಒಂದು ಗೌರವ ಕುಟುಂಬದಲ್ಲಿ ಜನಿಸಿದ ಸೋದರಿಯರು. ಇವರ ವಿದ್ಯಾಭ್ಯಾಸ ಮುಗಿದ ಮೇಲೆ ಮತ್ತೇನೂ ಮಾಡಲೂ ಕೆಲಸವಿಲ್ಲದಿರಲು, ಸಂಜೆ ವಿಹಾರಕ್ಕೆಂದು ಸಮುದ್ರ ದಂಡೆಗೆ ಹೋಗಿ ಬರುತ್ತಿದ್ದರು.

ಶೇಖರ ಈಗ ಇವರೊಂದಿಗೆ ಮಾತಿಗೆ ಸೇರಿಕೊಂಡಿದ್ದರಿಂದ ಅಲ್ಲಿ ಮತ್ತೂ ಕಳೆ ಯೇರಿತು. ಆತನ ಮಾತುಗಳು ಕೇಳುವುದಕ್ಕೆ ಸ್ವಾರಸ್ಯವಾಗಿರುತ್ತಿದ್ದುವು. ಅವನ ಒಳ್ಳೆಯ ಗುಣವೂ ಇವರಿಗೆ ತುಂಬಾ ಹಿಡಿಸಿತು. ಅವನ ಮೇಲೆ ಪ್ರೀತಿ ಉಂಟಾಯಿತು. ಬಹಳ ದಿನಗಳಿಂದ ಪರಿಚಯ ಇದ್ದಂತೆ ಪರಸ್ಪರ ಅವರು ನಡೆದುಕೊಂಡರು. ಆದರೆ ಅವರು ಯಾರೂ ತಮ್ಮ ತಮ್ಮ ಹೆಸರುಗಳನ್ನು ಹೇಳಿ ಕೇಳಿ ತಿಳಿದುಕೊಂಡಿರಲಿಲ್ಲ.

ಒಂದು ದಿನ ಶೇಖರ ತುಂಬಾ ಉದ್ವೇಗದಿಂದ ಇರುವವನಂತೆ ಕಂಡ. ಮಾತಿನ ಭರದಲ್ಲಿ "ಏನು ಸುಶೀಲಾ . . . ." ಎಂದವನೆ ಹಾಗೆಯೇ ನಿಲ್ಲಿಸಿಕೊಂಡ. ಹುಡುಗಿಯರು ಒಬ್ಬರ ಮುಖವನ್ನು ಮತ್ತೊಬ್ಬರು ನೋಡಿಕೊಂಡರು. ಅವರಿಗೆ ಆಶ್ಚರ್ಯವಾಯಿತು.

ಆ ಹುಡುಗಿಯರಲ್ಲಿ ಒಬ್ಬಳಾದ ಭಾನು, "ನಿಮ್ಮ ಹೆಸರು ಏನೊ?" ಎಂದಳು. ಶೇಖರ ಅವಳತ್ತ ತಿರುಗಿ, "ನನ್ನ ಹೆಸರು ಶೇಖರ" ಎಂದ. ಬಳಿಕ "ಅವರ ಹೆಸರು" ಎಂದ. "ಈಗ ತಾನೇ ನೀವು ಅವಳನ್ನು ಸುಶೀಲ ಎಂದಿರಿ. ಮತ್ತೇ ನನ್ನನ್ನೇ ಕೇಳು ತ್ತಿದ್ದೀರಲ್ಲಾ !" ಎಂದಳು ಭಾನು. "ಇಲ್ಲ, ಇಲ್ಲ, ನಾನು ಯಾರನ್ನೋ ಕುರಿತು ಹೇಳಿದೆ" ಎಂದು ಪೆಚ್ಚು ಮುಖ ಹಾಕಿಕೊಂಡ ಶೇಖರ.

ಸ್ವಲ್ಪ ಹೊತ್ತು ಕಳೆದ ಮೇಲೆ ಆಕೆ, "ನಿಮಗೆ ಉಯ್ಯಾಲೆಯಾಡುವ ಅಭ್ಯಾಸ ವಿದೆಯೊ? ಬಾಲ್ಯದಲ್ಲಿ ನೀವು ಆಟವಾಡಿ ಬೆಳೆದಿದ್ದೀರಿ ಎಂದು ಕಾಣುತ್ತದೆ. ವೇಗ ವಾಗಿ ಹಾಗೆಯೇ ಸಮೀಪಿಸಿ ತೂಗಾಟವಾಡುವ ಉಯ್ಯಾಲೆಯಾಟ, ಅದನ್ನು ಹರಿಯ ಬಿಡುವವರಿಗೆ, ಕುಳಿತಿದ್ದವರು ಬಂದೂ ಹೋಗಿಯೂ ಇರುತ್ತಾರೆ. ನಿಮ್ಮ ಈಗಿನ ಮಾತೂ ಈ ಆಟದಂತೆಯೇ ವಿನೋದವಾಗಿದೆ. ಒಂದು ಸಲ ಸುಶೀಲೆಯನ್ನು ಹೆಸರು ಹೇಳಿ ಕೂಗಿದಿರಿ. ಮತ್ತೊಂದು ಸಲ ಏನೆಂದು ಕೇಳುತ್ತಿದ್ದೀರಿ" ಎಂದು ನಗೆ ಯಾಡಿದಳು.

"ನನ್ನನ್ನು ಕ್ಷಮಿಸಿ. ನಿಮ್ಮಲ್ಲಿ ನಾನು ಇಷ್ಟು ಬಳಕೆಯಾಗಿ ನಡೆದುಕೊಂಡು ವರ್ತಿಸುತ್ತಿರುವುದು . . . . ನನಗೆ ಬಹಳ ಪರಿಚಯವುಳ್ಳವಳು, ತುಂಬಾ ಪ್ರಿಯಳಾಗಿರುವ

ಒಬ್ಬಳ ಹೆಸರು ಸುಶೀಲ. ಈಗ ಆ ಹೆಸರು ನಿಮ್ಮಲ್ಲಿ ಒಬ್ಬಳಿಗೆ ಇದ್ದು, ನಾನು ಆ ಹೆಸರಿನಿಂದ ಅವರನ್ನು ಸಂಬೋಧಿಸಿದ್ದು ಕೇವಲ ಆಕಸ್ಮಿಕ."

* * * * *

ಶೇಖರ ಊರು ಬಿಟ್ಟು ಬಂದು ಸುಮಾರು ಒಂದು ತಿಂಗಳು ಕಳೆದಿತ್ತು. ಬಂದ ಕೆಲವು ದಿನಗಳು ಕಿಟ್ಟುವಿನ ಮನೆಯಲ್ಲಿಯೇ ಆತ ಉಳಿದಿದ್ದು, ಬಳಿಕ ಊರಿಗೆ ಹೋಗುವುದಾಗಿ ಅವನೊಂದಿಗೆ ಹೇಳಿ ಒಂದು ಸತ್ರದಲ್ಲಿ ಬಂದು ಉಳಿದುಕೊಂಡ. ಮದರಾಸನ್ನು ಬಿಟ್ಟು ಹೋಗಲು ಅವನಿಗೆ ಮನಸ್ಸಿಲ್ಲ ಎಂದು ಕಾಣುತ್ತದೆ. ಆದರೂ ಕೆಲವು ದಿನಗಳಿಂದ ಅವನಿಗೆ ಊರಿನ ನೆನಪು ಕಾಡುತ್ತಿತ್ತು. 'ಸಾಧ್ಯವಾದರೆ ನಾನು ನಾಳೆಗೆ ಊರಿಗೆ ಹೋಗುತ್ತೇನೆ' ಎಂದು ಸಂಜೆ ಆ ಹುಡುಗಿಯರೊಡನೆ ಅವನು ಹೇಳುವುದೂ, ಮತ್ತೆ ಮಾರನೆಯ ದಿನ ಅವರೊಂದಿಗೆ ಹೋಗಿ ಹರಟುವುದೂ ಅವನ ದಿನಚರಿಯಾಯಿತು.

ಅಂದು, 'ಖಂಡಿತ ಇವೊತ್ತು ಇವನು ಊರಿಗೆ ಹೊರಟು ಹೋಗಿದ್ದಾನೆ' ಎಂದು ಆ ಹುಡುಗಿಯರು ಭಾವಿಸುವಂತೆ, ಎಂದಿಗಿಂತ ಸ್ವಲ್ಪ ಹೊತ್ತಿಗೆ ಮುಂಚೆ ಇವನು ಆ ಸ್ಥಳಕ್ಕೆ ಹೋಗಿ ಸೇರಲು ತೀರ್ಮಾನಿಸಿದ ಎಂದು ಕಾಣುತ್ತದೆ. ಇನ್ನು ಮುಂದೆ ಸಾಧ್ಯವಿಲ್ಲ, ಊರಿಗೆ ಹೋಗಲೇಬೇಕು ಎನ್ನುವ ಮನಸ್ಸು, ಆ ಹುಡುಗಿಯರೊಡನೆ ಹರಟುವುದರಲ್ಲಿ ಏರ್ಪಡುವ ಒಂದು ಬಗೆಯ ಆತ್ಮತೃಪ್ತಿ—ಈ ಡೋಲಾಯಮಾನ ಸ್ಥಿತಿಯಲ್ಲಿ ಏನುಮಾಡುವುದೆಂದು ತೋಚದೆ ಆತ ಕಂಗಾಲಾಗಿದ್ದ. ಒಂದು ವಿಧವಾದ ಹೊರ ಪ್ರಜ್ಞೆಯಲ್ಲಿದ್ದ. ನಿದ್ದೆಗೂ ಎಚ್ಚರಕ್ಕೂ ನಡುವೆ ಇರುವ ಒಂದು ರೇಖೆಯ ಹಾಗೆ. ಹೀಗೆ ಮಿಂಚುತ್ತದೆ. ಹಾಗೆ ಮುಚ್ಚಿಕೊಳ್ಳುತ್ತದೆ. ಏನೋ ಒಂದು ಬಗೆಯ ತಿಳಿವು; ಅವಸ್ಥೆ.

ಅವೊತ್ತು ಏನೋ ಒಂದು ಸ್ಥಿತಿಯಲ್ಲಿ ಹಗಲನ್ನು ಕಳೆದು, ಸಂಜೆ ಇನ್ನೂ ಸ್ವಲ್ಪ ಮುಂಚೆ ಸಮುದ್ರ ದಂಡೆಗೆ ಹೋಗಲೆಂದು ಆತ ಬಸ್‌ಸ್ಟಾಪಿನಲ್ಲಿ ನಿಂತಿದ್ದ. ಅಲ್ಲಿ ಜನ ಸಂದಣಿ ಅಧಿಕವಾಗಿತ್ತು. ಆ ಗಲಭೆಯಲ್ಲಿ ಬಸ್ಸನ್ನು ಹತ್ತಲು, ಸಾಧ್ಯವಾಗದೆ ಎರಡು ಬಸ್ಸುಗಳೂ ಹೊರಟುಹೋದುವು. ತನ್ನನ್ನು ಬಿಟ್ಟು ಆ ಬಸ್ಸುಗಳು ಚಲಿಸುವಾಗ, ಜಗತ್ತೆ ತನ್ನಿಂದ ದೂರವಾಗುತ್ತಿದೆ ಎನ್ನುವ ಭಾವನೆ ಅವನಿಗೆ. ಸಮುದ್ರ ದಂಡೆಯಲ್ಲಿ ಆ ಹುಡುಗಿಯರು ಇವೊತ್ತು ಕಾಣಸಿಗುವುದಿಲ್ಲವೇನೋ ಎನ್ನುವ ಯೋಚನೆಯಲ್ಲಿ ಆತ ಇರುವಾಗ ಮತ್ತೊಂದು ಬಸ್ಸೂ ಬಂದು ಹೊರಟುಹೋಯಿತು. ಆ ರಸ್ತೆಯ ಇಕ್ಕೆಲಗಳಲ್ಲಿರುವ ಮರಗಳು, ಅವುಗಳ ಹಿಂಭಾಗದಲ್ಲಿರುವ ಮಹಡಿ ಮನೆಗಳು, ಇವುಗಳನ್ನು ನೋಡುತ್ತ ಅವನು ಹಾಗೆಯೇ ನಿಂತ.

ತನ್ನ ಹಾಗೆಯೇ ಆ ರಸ್ತೆಯ ಮರಗಳೂ ಬೀದಿಗಳೂ ಚಲನೆಯಿಲ್ಲದೆ ನಿಂತಿರುವುದನ್ನು ಶೇಖರ ಗಮನಿಸಿದ. ಆದರೆ ಗಾಳಿ ಹಾಗೆ ಹೀಗೆ ಸುಳಿಯುವಾಗ ಆ ಮರ

ಗಳಿಂದ ಕೆಳಗೆ ಜಾರಿ ಬೀಳುವ ಹೂವುಗಳನ್ನು ನೋಡಲು ಸೊಗಸಾಗಿತ್ತು. ಅವನು ನಿಂತಿದ್ದ ಎದುರಿನ ಬಂಗಲೆಯ ನಾಯಿ ಬಗುಳುವುದೂ ಅವನಿಗೆ ಕೇಳಿಸಿತು.

ಪಡುವಲ ಕೋಡಂಚಿನಲ್ಲಿ ಸೂರ್ಯಬಿಂಬ ಜಾರಿದೆ. ಜಗತ್ತೆ ಈಗ ಕಾಷಾಯ ವಸ್ತ್ರ ಧರಿಸಿ ವೈರಾಗ್ಯ ಹಿಡಿದ ಹಾಗಿದೆ. ಘನವಾದ ವಸ್ತುವನ್ನೊ ಹೊತ್ತಂತೆ ಅವನ ಮನಸ್ಸು ಭಾರವಾಗಿದೆ. ಅವನ ಮುಖದಲ್ಲಿ ಒಂದು ಸಲ ಚಿಂತೆಯ ಛಾಯೆ, ಮತ್ತೊಂದು ಸಲ ತುಟಿಗಳ ಮೇಲೆ ಮುಗುಳ್ನಗೆಯ ಹೂ. ದೇಗುಲಗಳಲ್ಲಿ ಈ ಕಾಲದ ಭಕ್ತರು ಭಕ್ತಿ ಪರವಶರಾಗುವ ಒಂದು ಭಾವದಂತೆ ಇದೆ ಶೇಖರನ ಮನಃ ಸ್ಥಿತಿ.

ರಸ್ತೆಯಲ್ಲಿ ಮಾಮೂಲಿನಂತೆ ಕೂಗು, ಗಲಭೆ. ಕಾರುಗಳೂ ಬಸ್ಸುಗಳೂ ಓಡಾಡಿ ಕೊಂಡಿದ್ದುವು. ತಮ್ಮನ್ನು ಬಿಟ್ಟು ಹೋದುದಕ್ಕಾಗಿ ಶಪಿಸುತ್ತ ಕೆಲವರು ಪ್ರಯಾಣಿಕರು ನಡೆದು ಹೋಗುತ್ತಿದ್ದರು. ಅಲ್ಲಿನ ಮಾತುಕತೆ ಶಬ್ದ ವೇಗ ಎಲ್ಲವೂ ಏನೋ ಒಂದು ವಿಧದ ಭಾವನೆಯನ್ನು ಪ್ರಚೋದಿಸುವಂತಿತ್ತು.

ಒಂದು ಚಪಾ ಅಂಗಡಿಯವ ಎಲ್ಲರ ಗಮನವನ್ನೂ ತನ್ನತ್ತ ಸೆಳೆಯಲೆಂದೋ ಏನೋ ರಿಕಾರ್ಡ್ ಹಾಕಿದ್ದ. ಆ ಶಬ್ದ ಕಿವಿ ಕೊರೆಯುವಂತಿತ್ತು. ಶೇಖರ ಅದನ್ನೂ ಆಲಿಸಿದ. ಜಗತ್ತು ಇಂತಹ ಅರ್ಭಟಗಳಿಂದಲೇ ಮುಳುಗಿದೆ ಎಂದಿತು ಅವನ ಮನಸ್ಸು. ಲೋಕವ್ಯಾಪಾರವೆಲ್ಲವೂ ಹೀಗೆಯೇ ಏನೋ ಎಂದು ಆತ ತನ್ನೊಳಗೇ ಹೇಳಿಕೊಂಡ.

ಈಗ ಆತ ಅಲ್ಲಿಂದ ಬೇಗನೇ ಹೊರಟು ನಡೆವೇ ಸಮುದ್ರ ದಂಡೆಯನ್ನು ಹೋಗಿ ಸೇರಲು ನಿರ್ಧರಿಸಿದ,

ಆ ಹುಡುಗಿಯರು ಮಾಮೂಲಿನಂತೆ ಅದೇ ಸ್ಥಳದಲ್ಲಿ ಕುಳಿತಿದ್ದು, ಇವನು ಅವರನ್ನು ಸಮೀಪಿಸಿದಾಗ ಭಾನು ನಗುತ್ತ ಕೇಳಿದಳು:

"ಏನು ಶೇಖರ್, ಇವೊತ್ತು ತುಂಬಾ ಕೆಲಸ. . . . ಅದಲ್ಲವೆ ಊರಿಗೆ ಹೋಗಿದ್ದು ನೇರವಾಗಿ ಇಲ್ಲಿಗೆ ಬಂದಿರೋ?"

"ಅವರು ಇವೊತ್ತು ಊರಿಗೆ ಹೋಗಲಿಲ್ಲ" ಎಂದಳು ಸುಶೀಲೆ, ನಿಧಾನವಾಗಿ. ಆವಳ ಮಾತು ಉಳಿದವರಿಗೆ ಆಶ್ಚರ್ಯವನ್ನು ಉಂಟುಮಾಡುವಂತಿತ್ತು.

"ಬಾ ಎಂದು ಕಾಗದ ಬಂದರೆ ತಾನೆ ಊರಿಗೆ ಹೋಗುವುದು" ಎಂದಳು ಭಾನು.

"ನಾನು ಇಲ್ಲಿರುವುದು ನಮ್ಮ ಮನೆಯವರಿಗೆ ತಿಳಿಯದು" ಎಂದ ಶೇಖರ.

"ಓಹೋ, ಶೇಖರ್ ಕೋಪಿಸಿಕೊಂಡು ಮನೆಯನ್ನು ಬಿಟ್ಟುಬಂದಿದ್ದಾರೆ" ಎಂದು ನಗೆಯಾಡಿದಳು ಭಾನು.

"ಏನು ಸುಶೀಲ, ಭಾನು ಹೇಳುವುದು ಸುಳ್ಳಷ್ಟೆ!" ಎಂದು ಶೇಖರ ಅವಳತ್ತ ತಿರುಗಿ ಕೇಳಿದ.

"ನನಗೆ ಹೇಗೆ ತಿಳಿಯುತ್ತದೆ ಶೇಖರ್? ನಿಮ್ಮ ಮಾತು ಸರಿಯಾಗಿ ಇಲ್ಲ. ಏನೋ ಒಂದು ರೀತಿಯಲ್ಲಿ ಇದ್ದೀರಾ" ಎಂದಳು ಸುಶೀಲೆ.

ಕೆಲವು ದಿನಗಳಿಂದಲೂ ಶೇಖರನ ಮಾತಿನಲ್ಲಿದ್ದ ವ್ಯಥೆಯನ್ನು ಸುಶೀಲೆ ಕಂಡು ಹಿಡಿದಿದ್ದಳು. ಉಳಿದ ಹುಡುಗಿಯರಿಗೆ ಹೇಗೋ ಅದು ಇವಳಿಗೆ ತಿಳಿಯದು. ಅವರ ಮಾತು ಕೆಲವು ಸಮಯ ಇವಳಿಗೆ ಸರಿಹೋಗುತ್ತಿರಲಿಲ್ಲ. ಕಂಡ ಹಾಗೆ ಹರಟೆ ಹೊಡೆಯುವುದೂ ಅವಳಿಗೆ ಬೇಕಿರಲಿಲ್ಲ.

ಸುಶೀಲೆಯ ಮಾತುಗಳು ನಿಧಾನವಾಗಿಯೂ ಗಂಭೀರವಾಗಿಯೂ ಇರುತ್ತಿದ್ದುವು. ಒಂದೆರಡು ದಿನಗಳಲ್ಲಿಯೇ ಮಾತನಾಡಿಸಿದಾಗ ಶೇಖರ ಅವಳನ್ನು ಬಹುವಾಗಿ ಮೆಚ್ಚಿಕೊಂಡ. ಅವಳೊಂದಿಗೆ ತಾನು ಹೀಗೆ ವರ್ತಿಸುವುದಕ್ಕೆ ಏನು ಕಾರಣ ಎಂದು ಮಾತ್ರ ಅವನಿಂದ ತಿಳಿದುಕೊಳ್ಳಲು ಸಾಧ್ಯವಾಗಲಿಲ್ಲ. ಬೇಸರ, ಭಯ, ಪಶ್ಚಾತ್ತಾಪ—ಹೀಗೆ ಹಲವು ಭಾವಗಳ ಅವನ ಮನಸ್ಸು ಅವಳೊಂದಿಗೆ ಮಾತು ಬೆಳೆಸಿದಾಗ ತಕ್ಕಮಟ್ಟಿಗೆ ಪರಿಹಾರ ಆಗುತ್ತಿದ್ದುದೂ ಉಂಟು.

ತನ್ನ ಊರನ್ನೂ ಹೆಂಡತಿ ಮಕ್ಕಳನ್ನೂ ಬಿಟ್ಟು ಈತ ಹೀಗೆ ಇಲ್ಲಿ ಕಾಲಕಳೆಯುವುದು ಆ ಹುಡುಗಿಯರಿಗೆ ಹಿಡಿಸಲಿಲ್ಲ. ತಮ್ಮ ತಂದೆ ತಮಗಾಗಿ ವರಗಳನ್ನು ನೋಡುತ್ತಿರುವುದು ಅವರಿಗೆ ತಿಳಿದಿದೆ. ಮದುವೆಯಾಗಬೇಕಾದ ಹುಡುಗಿ, ಅಪರಿಚಿತನೊಬ್ಬನ ಬರವಿಗಾಗಿ ಕಾದು ನಿಲ್ಲುವುದು ಸರಿಯೇ. ಮದುವೆಯಾದವಳು ಮನೆಯಲ್ಲಿ ಇವನ ಬರವಿಗಾಗಿ ತಪಸ್ಸು ಮಾಡುತ್ತ ಕಾದು ನಿಂತಿರಬೇಕಲ್ಲ. ಇವರಲ್ಲಿ ಗೃಹಕಲಹ ಏನಾದರೂ ನಡೆದಿರಬಹುದೋ ಹೇಗೆ? ಈತ ತನ್ನ ಊರಿಗೆ ಹಿಂದಿರುಗದೆ ಇರುವುದು ಸರಿಯಲ್ಲ. ಏನೋ ಮಾಡಬಾರದ ಕೆಲಸ ಮಾಡಿಯೇ ಶೇಖರ ಇಲ್ಲಿದ್ದಾನೆ. ಅವನೊಂದಿಗೆ ತಾವು ಸಂಪರ್ಕ ಬೆಳೆಸಿರುವುದೂ ಸರಿಯಲ್ಲ. . . .

ಒಂದು ವೇಳೆ ಅವನು ಊರಿಗೆ ಹಿಂದಿರುಗದೆ ಇರುವುದಕ್ಕೆ ತಾವೇ ಕಾರಣವೋ ಎಂದು ಕೂಡ ಸುಶೀಲೆ ಯೋಚಿಸತೊಡಗಿದಳು. ತನ್ನೊಡನೆ ಮಾತನಾಡುವಾಗ ಚರ್ಚಿಸುವಾಗ ಒಂದು ವಿಧವಾದ ಆತ್ಮತೃಪ್ತಿಯನ್ನು ಅನುಭವಿಸಿ, ಆದರ ಪರಿಣಾಮವಾಗಿ ಈತ ತನ್ನ ನೆಲೆಗೆ ಹಿಂದಿರುಗಲು ಅಸಮರ್ಥನಾಗಿದ್ದಾನೋ ಎಂದು ಸಹ ಅವಳು ಶಂಕಿಸಿದಳು.

ಸುಶೀಲೆಗೆ ತನ್ನ ಮನಸ್ಸು ಹರಿಯುವ ದಿಕ್ಕನ್ನು ಬದಲಿಸಲು ಭಾವನೆಗಳನ್ನು ತಿಳಿದುಕೊಳ್ಳಲು ಸಾಧ್ಯವಾಗಲಿಲ್ಲ. ಅವಳ ಮನಸ್ಸು ಕೊಂಬೆಯಿಂದ ಕೊಂಬೆಗೆ ಹಾರಾಡಿತು.

ಶೇಖರ ಊರಿಗೆ ಹಿಂದಿರುಗದೇ ಇರುವುದು ತನ್ನಿಂದ. ತಾನು ಆ ವಿಧದಲ್ಲಿ ಅಪರಾಧಿನಿ. ಗಂಡನನ್ನು ಹೆಂಡತಿಯಿಂದ ಪ್ರತ್ಯೇಕಿಸುವ ಪ್ರಯತ್ನ ಪಾಪಕಾರ್ಯ

ಅಲ್ಲವೆ? ಈ ಕಾರ್ಯಕ್ಕೆ ತಾನು ಭಾಗಿಯಾಗಬೇಕಾಯಿತಲ್ಲ. ತಾನು ಯಾರು? ತಾನು, ತನ್ನ ಸ್ವಭಾವ ಎನ್ನುವುದು ಯಾವುದು? ಅವನಲ್ಲಿ ಏನೋ ಒಂದು ವಿಧದ ಬಂಧವನ್ನು ತಾವು ಏರ್ಪಡಿಸಿಕೊಂಡುದು ಹೇಗೆ? ಇದು ಸರಿಯೆ?

ಸುಶೀಲೆಗೆ ಈಗ ಏನನ್ನೂ ತಿಳಿದುಕೊಳ್ಳಲು ಸಾಧ್ಯವಾಗಲಿಲ್ಲ. ಹುಚ್ಚು ಮನಸ್ಸು, ಹುಚ್ಚು ಭಾವನೆಗಳು. . . . .

ಅಂದು ಅವನನ್ನು ಬಿಟ್ಟು ಈ ಹುಡುಗಿಯರು ಆ ಕಡೆ ತೆರಳಿದಾಗ ಭಾನುವನ್ನು ಉದ್ದೇಶಿಸಿ ಸುಶೀಲ ಕೇಳಿದಳು:

"ಭಾನು, ಶೇಖರ ಊರಿಗೆ ಹಿಂದಿರುಗದೆ ಇಲ್ಲಿರುವುದು ಸರಿಯೇ? ನಿನಗೆ ಹೇಗೆ ಕಾಣುತ್ತದೆ? , . . . ನಿನಗೆ ಎಲ್ಲ ತಿಳಿದ ಹಾಗೆ ಏನಾದರೂ ಹೇಳಬೇಡ. ಬೇರೆ ರೀತಿಯಲ್ಲಿ ಅವನು ಇಲ್ಲಿದ್ದಾನೆ ಎಂದು ಭಾವಿಸಬೇಡ. ನಮಗೆ ತಿಳಿಯದೆಯೇ ಹಲವು ಸಮಯ ಎಷ್ಟೋ ದಾರಿಗಳು ಕವಲೊಡೆಯುತ್ತವೆ. . . ಜವಾಬ್ದಾರಿ . . . ವಂಚನೆ . . . ತಪ್ಪು . . . ಈ ವಾಕ್ಯಗಳು ಏನೇನೋ ಅರ್ಥವನ್ನು ಕೊಡುತ್ತವೆ. ನನಗೆ ಇವುಗಳ ಅರ್ಥ ತಿಳಿದಿದೆ. ಆದರೆ ಏನೆಂದು ಅವುಗಳನ್ನು ಬಿಡಿಸಲು ಹೊರಟಾಗ ಅವು ಸೀಳು ದಾರಿಗಳಾಗುತ್ತವೆ . . . "

ಸ್ವಲ್ಪ ಹೊತ್ತು ಮಾತನ್ನು ನಿಲ್ಲಿಸಿ ಬಳಿಕ ಸುಶೀಲ ಮುಂದುವರಿದಳು:

"ಶೇಖರನೊಂದಿಗೆ ನಾನು ಪರಿಚಯ ಬೆಳೆಸಿಕೊಂಡಿರುವುದು ಅವನು ಗಂಡು ಎನ್ನುವ ಕಾರಣಕ್ಕಾಗಿ ಅಲ್ಲ . . . ಗಂಡಸರು . . . ಗಂಡುತನ ಎನ್ನುವುದೆಲ್ಲ ನನಗೆ ಅರ್ಥವಾಗುತ್ತದೆ. ಓಡಲು, ಹಿತ್ತಿಲ ಬಾಗಿಲನ್ನು ತೆರೆದು ಬಾಗಿಲಲ್ಲಿ ನಿಂತು ರೆಕ್ಕೆಗಳನ್ನು ಚಾಳಿಸುವ ಕೋಳಿಗಳಂತೆ ಈ ಗಂಡುಗಳು. ಅವರ ವರ್ತನೆಯೂ ಅಷ್ಟೆ. ರೆಕ್ಕೆ ಬಿದ್ದ ಕೋಳಿಗಳ ಹಾಗೆಯೇ. ಶೇಖರನನ್ನು ನಾನು ಪರಿಚಯ ಮಾಡಿಕೊಂಡು ವರ್ತಿಸುತ್ತಿರುವುದರ ಬಗೆ ಬೇರೆ. ಒಂದು ಹೆಣ್ಣು ಗಂಡಿನಲ್ಲಿ ನಿರೀಕ್ಷಿಸುವುದು ಬಯಕೆಯನ್ನೋ ಅಥವಾ ದ್ವೇಷವನ್ನೋ . . . .

"ಈತನಿಗೆ ನನ್ನ ಹೆಸರಿನವಳೇ ಹೆಂಡತಿ ಇದ್ದಾಳೆ. ಇವನಲ್ಲಿ ನಾನು ಅವಳನ್ನು ಕಾಣುತ್ತಿದ್ದೇನೆಯೋ? ಅವಳ ಹೃದಯವನ್ನು ಇವನು ಸೂರೆಗೈದಿದ್ದಾನೆಯೇ?

"ನನ್ನ ಪ್ರೀತಿಯ ಭಾನು, ನೀನು ನನ್ನನ್ನು ತುಚ್ಛವಾಗಿ ಭಾವಿಸುವುದಿಲ್ಲ ಎನ್ನುವುದು ನನಗೆ ತಿಳಿದಿವೆ. ಏನನ್ನಾದರೂ ಆಲಿಂಗಿಸಿಕೊಂಡು ಸ್ವಲ್ಪ ಹೊತ್ತು ದುಃಖಶಮನ ಮಾಡಿಕೊಳ್ಳಬೇಕು ಎಂದು ಮನಸ್ಸು ಹಾತೊರೆಯುತ್ತಿದೆ. ಈವಾಗ . . . "

ಎಂದವಳೆ ಸುಶೀಲೆ ಭಾನುವನ್ನು ಆಲಿಂಗಿಸಿಕೊಂಡುಬಿಟ್ಟಳು. ಅವಳ ಹಿಂದೆ ಬಂದ ಸುಮತಿ, ಏನೂ ಮಾತಾಡದೆ, ಎಂಥದೋ ಮೌನದಲ್ಲಿ ಮುಳುಗಿದ್ದಳು.

ಶೇಖರನ ಮಾತುಗಳು ಅವೊತ್ತು ಸರಿಯಾಗಿ ಇರಲಿಲ್ಲ. ಸುಶೀಲ ಧಾರಾಳವಾಗಿ

ಅವನೊಂದಿಗೆ ಮಾತನಾಡುತ್ತಿದ್ದಳು. ಅವನು ಊರಿಗೆ ಹಿಂದಿರುಗಲು ಈ ರೀತಿಯಾದ ಮಾತಿನಿಂದ ತಡೆಹಾಕಲು ಪ್ರಯತ್ನಿಸುತ್ತಿದ್ದಾಳೇನೋ ಎನ್ನುವ ಹಾಗೆ. ಗಂಡಿನ ಎದುರಿಗೆ ಕುಳಿತು ಪರಿಹಾಸ್ಯ ಕುಚೇಷ್ಟೆಯ ಸುರಿಮಳೆಯನ್ನೇ ಸುರಿಸಿದ್ದಳು. ಆದರೂ ಒಂದು ಗಂಡಿನೊಡನೆ ಒಂದು ಹೆಣ್ಣು, ಹೆಂಡತಿ ಎನ್ನುವ ರೀತಿಯಲ್ಲಿ ವರ್ತಿಸುವುದಕ್ಕೆ ಆಗುತ್ತದೆಯೇ? ಅದರಲ್ಲಿ ಸುಖವೋ 'ಪ್ರೇಮ' ಎನ್ನುತ್ತಾರಲ್ಲ ಅಂಥದನ್ನೋ ಹೇಗೆ ನಿರೀಕ್ಷಿಸಲು ಸಾಧ್ಯವಾದೀತು? ದ್ವೇಷಿಸುವವರನ್ನು ಪ್ರೀತಿಸುವುದು ಸಾಮಾನ್ಯವಾದ ಕಾರ್ಯವಲ್ಲ. ಅವನು ಊರಿಗೆ ಹಿಂದಿರುಗಲು ತಾನು ವಿಘ್ನವಾಗಿದ್ದೇನೋ ಎನ್ನುವ ಭಾವನೆಯೇ ಸುಶೀಲೆಯ ಮನಸ್ಸನ್ನು ಕಾಡತೊಡಗಿತು. ಮೊದಲು ಇಲ್ಲದ ಕ್ರೂರ ಸ್ವಭಾವ ಈಗ ತನ್ನಲ್ಲಿ ಮನೆಮಾಡಿಕೊಂಡಿದೆಯೋ ಎಂದು ಸಹ ಅವಳು ಶಂಕಿಸಲಾರಂಭಿಸಿದಳು.

ಇರುಳು ಸಮೀಪಿಸುತ್ತಿತ್ತು. ಮತ್ತೆ ಶೇಖರ ಇವರನ್ನು ಬಂದು ಸೇರಿಕೊಂಡ. ಕತ್ತಲಾಗುತ್ತಲೇ ಸಮುದ್ರ ದಂಡೆಯಿಂದ ಒಬ್ಬೊಬ್ಬರಾಗಿ ಹಿಂದಿರುಗಲಾರಂಭಿಸಿದರು. ಕೆಲವರು ಆಗಲೇ ಹೊರಟುಹೋಗಿದ್ದರು.

ಈ ಸೋದರಿಯರೂ ಎದ್ದು ತಮ್ಮ ಬೀದಿಗೆ ಹೋಗಿ ಸೇರಿದರು. ಆ ತಿರುವಿನಲ್ಲಿ ಹೋಗಿ, ಆ ಅಡ್ಡ ರಸ್ತೆಯನ್ನು ದಾಟಿ, ಮತ್ತೊಂದು ಸಣ್ಣ ಓಣಿಗೆ ಅವರು ಪ್ರವೇಶಿಸಬೇಕು, ಶೇಖರನನ್ನು ಬೀಳ್ಕೊಡಬೇಕು.

ಆಗ ಅವರ ಹಿಂಬದಿಯಲ್ಲಿ ಮೋಟಾರ್ ಹಾರ್ನ್ ಮಾಡಿದ ಶಬ್ದವಾಯಿತು. ಈ ಹುಡುಗಿಯರು ಹಿಂದಕ್ಕೆ ನೋಡಿ ಕಾರಿಗೆ ದಾರಿ ಮಾಡಿಕೊಟ್ಟರು. ಆದರೆ ಶೇಖರ ಹಿಂದಕ್ಕೂ ಮುಂದಕ್ಕೂ ಹೋಗದೆ ರಸ್ತೆಯ ನಡುಮಧ್ಯದಲ್ಲಿಯೇ ನಿಂತುಬಿಟ್ಟ. ಹಠಾತ್ತಾನೆ ಬ್ರೇಕ್ ಹಾಕಿ ಮೋಟಾರನ್ನು ಬದಿಗೆ ಸರಿಸಲು ಇಲ್ಲವೆ ನಿಲ್ಲಿಸಲು ಪ್ರಯತ್ನಿಸಿದರೂ ಸಹ ಸಾಧ್ಯವಾಗದೆ, ಶೇಖರನನ್ನು ಕೆಳಗೆ ಬೀಳಿಸಿ ಕಾರು ಮುಂದಕ್ಕೆ ಹೊರಟುಹೋಯಿತು.

ಕೆಳಗೆ ಬೀಳದೆ ಇರಲು ಶೇಖರ ಎಷ್ಟೇ ಪ್ರಯತ್ನಿಸಿಯೂ ಕೂಡ ಸಾಧ್ಯವಾಗದೆ ಕುಸಿದ. ಕೆಳಗೆ ಬಿದ್ದ ಅವನನ್ನು 'ಸಾವು' ಹಿಡಿದುಕೊಂಡು ಬಿಟ್ಟಿತು......

ಶೇಖರ ಬಿದ್ದೇ ಹೋದ.

ತಮ್ಮ ಕಣ್ಣೆದುರಿಗೇ ಕುಸಿದ ಶೇಖರನನ್ನು ನೋಡಿ ತನ್ನ ದೇಹವೆಲ್ಲ ನಡುಗುತ್ತಿರಲು ಭಾನು, "ಅಯ್ಯೋ, ನಮ್ಮ ಶೇಖರ......ಮಾತಾಡುವ ಹಾಗಿಲ್ಲ......" ಎಂದವಳೇ ಕೂಗಿಕೊಂಡಳು. ಅವಳ ಕಣ್ಣುಗಳು ತುಂಬಿಹೋಗಿದ್ದುವು.

ಅವಳ ಸನಿಹದಲ್ಲಿ ಬಂದು ನಿಂತ ಸುಶೀಲ, 'ನಮ್ಮ ಶೇಖರ' ಎಂದು ಗೊಣಗುತ್ತ ಭಾನುವಿನ ಭುಜವನ್ನು ಹಿಡಿದು, "ಬಾ ಭಾನು ಹೊರಡೋಣ. ಗುಂಪು ಸೇರುವುದಕ್ಕೆ

ಮೊದಲು......" ಎಂದವಳೇ ಅವಳೊಂದಿಗೆ ನಿಧಾನವಾಗಿ ಹೆಜ್ಜೆಯಿಡಲಾರಂಭಿಸಿದಳು.

ಶೇಖರ ಮರಣ ಹೊಂದಿದ್ದಾನೆ ಎಂದೇ ಸುಶಿಲ ತೀರ್ಮಾನಿಸಿಕೊಂಡಳು. 'ಅನಾಥನನ್ನಾಗಿ ಇವನನ್ನು ನಾವು ಹೀಗೆ ಬಿಟ್ಟುಹೋಗುತ್ತಿದ್ದೇವಲ್ಲ' ಎನ್ನುವ ಭಾನುವಿನ ಮಾತು, ಹೊರಗೆ ಬಾರದೆ, ಅವಳು ತನ್ನ ಮುಖವನ್ನು ಸುಶೀಲೆಯ ಎದೆಯಲ್ಲಿ ಮುಚ್ಚಿಕೊಂಡು ಬಿಕ್ಕುತ್ತ ಮುನ್ನಡೆದಳು. ಸುಮತಿಯೋ ಇವರೀರ್ವರನ್ನೂ ಯಾಂತ್ರಿಕ ವಾಗಿ ಹಿಂಬಾಲಿಸಿದಳು.

ಒಂದೇ ಕ್ಷಣದಲ್ಲಿ ತಾವು ನಿಂತ ಆ ರಸ್ತೆ ಮತ್ತೆ ಶೂನ್ಯದಿಂದ ತುಂಬಿಹೋದಂತೆ ಸುಶೀಲೆಗೆ ಭಾಸವಾಯಿತು. ಚಲಿಸುವ ಬೊಂಬೆಯಂತೆ ಆಕೆ ಹೆಜ್ಜೆಯನ್ನು ಎತ್ತಿಡು ತ್ತಿದ್ದಳು. ಗಂಡನಿಗೂ ಹೆಂಡತಿಗೂ ಮಧ್ಯೆ ತಾವು ಗೋಡೆಯ ಹಾಗೆ ನಿಂತಿದ್ದು ಈಗ 'ಮರಣ' ಅತ್ತ ಅವನನ್ನು ಸೆಳೆದುಕೊಂಡಿತ್ತು.

ಪತಿಯ ಆಗಮನವನ್ನು ನಿರೀಕ್ಷಿಸಿ ಅವನಿಗೆ ತೃಪ್ತಿಯನ್ನು ನೀಡುವ ಪತ್ನಿಗೆ, ಮಧ್ಯೆ ತಾವಿದ್ದುದನ್ನು ಗಮನಿಸಿಯೋ ಏನೋ 'ಮರಣ' ಅವನಿಗೆ ಸ್ವಾಗತ ನೀಡಿತು. ಶೇಖರನ ಮರಣ ಎಷ್ಟು ಅನ್ಯಾಯವಾಗಿ ಮುಗಿದುಹೋಯಿತು.

ಸುಶೀಲ ಹಲಬಗೆಯ ಚಿಂತನೆಯಲ್ಲಿ ಮುಂದೆ ಮುಂದೆ ಹೆಜ್ಜೆ ಹಾಕಿದಳು.

* * * * *

ಕೆಲವು ದಿನಗಳಿಂದ ಈ ಸೋದರಿಯರು ವಾಯುವಿಹಾರಕ್ಕೆಂದು ಸಮುದ್ರದಂಡೆಗೆ ಹೋಗುತ್ತ ಇಲ್ಲ. ತಮ್ಮ ಮಹಡಿ ಮನೆಯಲ್ಲಿ ಕಿಟಿಕಿಯ ಬಳಿ ನಿಂತು ಸುಶೀಲ ರಸ್ತೆಯ ಅಂಚನ್ನೇ ದಿಟ್ಟಿಸುತ್ತಾಳೆ. ಚಿಂತೆಯ ಭಾರದಿಂದ ಅವಳು ಕುಗ್ಗಿಹೋಗಿ ದ್ದಾಳೆ. ತನ್ನ ಹೆಸರನ್ನು ಹಿಡಿದು ಸಂಬೋಧಿಸುವ ಒಂದು ರೂಪ ರಸ್ತೆಯಲ್ಲಿ ಹಾಗೆಯೇ ತೇಲುತ್ತಿದೆ ಎನ್ನುವ ಭಾವನೆ ಅವಳಿಗೆ.

'ಸುಶೀಲ' ಎಂದು ಮತ್ತೆ ತನ್ನ ಹೆಸರು ಹಿಡಿದು ಕೂಗುವ ಒಂದು ರೂಪ ಯಾರಾಗಿರಲು ಸಾಧ್ಯ? ಇರುಳಲ್ಲಿ, ದೇಹವನ್ನು ಬಿಟ್ಟ ನೆಳಲು, ಬೆಳಕನ್ನು ಕಂಡೊಡನೆ ಮತ್ತೆ ಸೇರಿಕೊಳ್ಳುತ್ತದೇನು......? 'ಸುಶೀಲ' ಎಂದು ಅವನು ಆವೊತ್ತು ಅವಳನ್ನು ಸಂಬೋಧಿಸಿದ್ದು, ಅವನ ಮನಸ್ಸಿನಲ್ಲಿ ತನ್ನ ಹೆಂಡತಿಯನ್ನಲ್ಲದೆ ಮತ್ತೆ ಯಾರನ್ನು?

ಗ್ರಾಮದಲ್ಲಿ ಹಗಲೂ ಇರುಳೂ ತಮ್ಮ ಕೆಲಸಗಳನ್ನು ಮಾಡದೆ ಇರಲು ಸಾಧ್ಯವಿಲ್ಲ. ಬೆಳಗಿನ ಜಾವ ಇನ್ನೂ ಕತ್ತಲಾಗಿರುವಾಗಲೇ ಎದ್ದು ಬಾಗಿಲ ಮುಂದೆ ಗುಡಿಸಿ ನೀರು ಚಿಮುಕಿಸಿ ರಂಗೋಲೆ ಇದಿದ್ದರೆ ಆಗುವುದೇ ಇಲ್ಲ. ರಾತ್ರಿ ನಿದ್ದೆಗೆಟ್ಟರೆ ಮಾತ್ರ ರಂಗೋಲೆಯ ಸಾಲುಗಳು ತಪ್ಪಿಹೋಗುತ್ತವೇನು......ಬೆಳಕನ್ನು ಕಾಣುವ ಮೂಡಣ ಬಾನಿನಲ್ಲಿ, ಬಹಳ ದೂರವಾಗಿ ನಿರೀಕ್ಷಿಸಿದರೂ, ಕಂಡದ್ದು ಮಾತ್ರ ಏನೂ ಇಲ್ಲ. ರಾತ್ರಿಯಾಗುತ್ತಲೇ ಹೊರಗೆ ಮಾತ್ರವಲ್ಲ, ಮನಸ್ಸಿಗೂ ಇರುಳು ಕವಿಯುತ್ತದೆ.

ಪತಿಯನ್ನು ಇನ್ನೂ ನೋಡಲು ಸಾಧ್ಯವಾಗಿಲ್ಲ.

ಹಗಲು ಕಳೆಯುತ್ತದೆ. ಸಂಜೆ ಬರುತ್ತದೆ. ಮಗು ತೊಟ್ಟಿಲಿನಲ್ಲಿ ನಿದ್ದೆಹೋಗುವಾಗ ಮಾತ್ರ ಹಗಲಿನ ಬೆಳಕು ಹೆಚ್ಚುತ್ತದೆ. ಆದರೆ ಮತ್ತೆ ಇರುಳು ಅವಳನ್ನೂ ಅಡ್ಡಕಟ್ಟುತ್ತ ಸಂಜೆಯ ಸೂರ್ಯ ಅಸ್ತಮಿಸುತ್ತಾನೆ.

ಇರುಳು ಕವಿಯುತ್ತಲೇ ಮನೆಯಲ್ಲಿ ದೀಪವನ್ನು ಬೆಳಗಿ ಹೊರಗೂ ಹಣತೆಯನ್ನಿಟ್ಟು ಪಡಸಾಲೆಯ ಕಂಭವನ್ನು ಹಿಡಿದು ಅವಳು ನೆರಳಿನಂತೆ ನಿಲ್ಲುತ್ತಾಳೆ. ಪಶ್ಚಿಮದಲ್ಲಿ ಸೂರ್ಯ ಮುಳುಗಿದ ದಿಕ್ಕಿನಿಂದ ಇನ್ನೂ ಕೆಳಗೆ ನೋಡಲು ಪ್ರಯತ್ನಿಸುತ್ತಾಳೆ. ಆದರೆ ಯಾವುದನ್ನೂ ಕಾಣಲು ಅವಳಿಂದ ಸಾಧ್ಯವಾಗುವುದಿಲ್ಲ. ಮೆಟ್ಟಿಲುಗಳಿಂದ ಕೆಳಗೆ ಇಳಿದು ಅಲ್ಲಿಂದ ದೂರವಾಗಿರುವ ದೇಗುಲಕ್ಕೆ ಇಲ್ಲಿಂದಲೇ ಕೈಮುಗಿದು ಮನೆಗೆ ಹಿಂದಿರುಗುತ್ತಾಳೆ.

ರಾತ್ರಿ ದೀರ್ಘವಾಗುತ್ತದೆ. ನಿದ್ದೆಯಾದರೂ ಬಂದರೆ ಒಂದು ಸುಖಸ್ವಪ್ನವನ್ನಾದರೂ ಕಾಣಬಹುದು. ಆದರೆ ಹಾಳು ನಿದ್ದೆ ಬರಬೇಕಲ್ಲ.

ಮಹಡಿ ಮನೆಯ ಮೇಲೆ ನಿಂತು ಪಶ್ಚಿಮ ದಿಕ್ಕಿನ ರಸ್ತೆಯನ್ನೇ ದಿಟ್ಟಿಸುತ್ತಾಳೆ ಕುಮಾರಿ ಸುಶೀಲ. ಶೇಖರನ ಪತ್ನಿ ಸುಶೀಲೆಯನ್ನೂ ಅವಳ ಒಳಕಣ್ಣು ಈಗ ಕಾಣುತ್ತ ಇದೆಯೋ ಏನೋ?

ತನ್ನ ಪತಿಯ ಆಗಮನವನ್ನು ನಿರೀಕ್ಷಿಸಿ ಕಿಟಕಿಯಲ್ಲಿ ತಲೆಹಾಕಿ ನಿಂತಿರುತ್ತಾಳೆ ಆ ಸುಶೀಲ.

ಹಾಗಾದರೆ ಮದುವೆಯಾಗದ ಈ ಸುಶೀಲ ನೋಡುತ್ತ ಇರುವುದು ಅವಳನ್ನೇ ಇರಬೇಕು!

# ಉಂಗುರ

ನನ್ನ ಮೈದುನ ಪರಶುವಿನ ಮದುವೆಗೆ ನಾನು ಹೋಗಲಿಲ್ಲ. ಇದರಿಂದ ನನ್ನ ಪತ್ನಿ ಮರಕತಂಗೆ ಅಸಮಾಧಾನ. ಆದರೆ ಏನು ಮಾಡುವುದು? ನನಗೆ ಆ ಹಳ್ಳಿಯನ್ನು ಕಂಡರೇ ಹಿಡಿಸುವುದಿಲ್ಲ. ಅಲ್ಲಿರುವ ವಿಚಿತ್ರವಾದ ಆ ಹಳ್ಳಿಯ ಜನರನ್ನು ನೋಡಿದರೆ ನನಗೆ ಬೇಸರ. ಅವರೆಲ್ಲ ಹುಡುಗಾಟಿಕೆಯ ಮಕ್ಕಳ ಹಾಗೆಯೇ ನನಗೆ ಕಾಣುತ್ತಾರೆ.

ಇದಕ್ಕೆ ಸಾಕ್ಷಿ ನನ್ನ ಮೈದುನನೇ. ಯಾರ ಬಳಿ ಹೇಗೆ ಮರ್ಯಾದೆಯಾಗಿ ಮಾತಾಡಬೇಕು ಎನ್ನುವುದೂ ಅವನಿಗೆ ತಿಳಿಯದು. ಕೀಳ್ತರದ ರಸಿಕತನ.

ನನ್ನ ತಂದೆ ಅಲ್ಲಿಂದ ಒಂದು ಹೆಣ್ಣನ್ನು ತಂದು ನನಗೆ ವಿವಾಹಮಾಡಿದ್ದರು. ಹಾಗಾಗಿ ಮರಕತಳನ್ನು ನಾನು ಕೈಹಿಡಿದಿದ್ದೆ. ಇದು ಆಶ್ಚರ್ಯಕರವಾದ ಒಂದು ಸಂಗತಿಯೇ ಸರಿ. ವಿಧಿ ಹೇಗೋ ನಮ್ಮ ಕಣ್ಣಿಗೆ ಮಂಕನ್ನು ತೂರಿಯೇ ಬಿಡುತ್ತದೆ.

ನನ್ನ ಮೈದನ ಒಳ್ಳೆ ಧಡಿಯ. ಎದೆ ಸೀಳಿದರೆ ಮೂರಕ್ಷರಗಳ ಜ್ಞಾನವಿಲ್ಲ. ಏಳನೆಯ ತರಗತಿಯ ವರೆಗೆ ಓದಿದೆ ಎಂತಲೊ ಏನೋ ಹೇಳುತ್ತಾನೆ. ಹಳ್ಳಿಗೆ ತಕ್ಕ ಆಳು. ಅವನಿಗೆ ಈಗ ಗಿಣಿಯ ಹಾಗೆ ಸಿಕ್ಕಿದ್ದಾಳೆ ಅಂಬುಜ. ತುಂಬಾ ಬುದ್ಧಿವಂತೆಯಾದ ಹುಡುಗಿ. ಮುಚ್ಚುಮರೆಯೇಕೆ? ಇದರಿಂದ ನನಗೆ ಅಸೂಯೆಯೇ ಆಗಿದೆ.

ಪರಶುವಿನ ಮದುವೆಯಾದ ಮೇಲೆ ಒಂದು ವರ್ಷ ಕಳೆದು, ನಾನು ಆ ಹಳ್ಳಿಗೆ ಹೋಗುವ ಸಂದರ್ಭ ಒದಗಿಬಂದಿತು. ನಾನು ಅಲ್ಲಿಗೆ ಹೋಗುತ್ತೇನೆ ಎಂದು ಯಾರೂ ನಿರೀಕ್ಷಿಸದಿದ್ದಾಗ ಅನಿರೀಕ್ಷಿತ ಭೇಟಿ.

ನಾನು ಮನೆಯೊಳಗೆ ಪ್ರವೇಶಿಸಿದಾಗ ಹಜಾರದ ಒಂದು ಗೋಡೆಯ ಬದಿಯಲ್ಲಿ ಕುಳಿತು, ಹಲಸಿನ ಹಣ್ಣನ್ನು ಪಾಲುಮಾಡಿ ತೊಳೆಗಳನ್ನು ಬಿಡಿಸುತ್ತಿದ್ದ ಪರಶು, ಕೈಗಳಿಗೆ ಎಣ್ಣೆ ಬಳಿದುಕೊಂಡು, ಅಂಟಿನೊಂದಿಗೆ ಅವನು ಸೆಣಸಾಡುತ್ತಿದ್ದಾಗ. ನಾನು ಅಲ್ಲಿಗೆ ಪ್ರವೇಶಿಸುತ್ತಲೇ ಆತ ದಿಗ್ಭ್ರಮೆಗೊಂಡ.

ಒಡನೇ ಪರಶು ಚಾಕುವನ್ನು ಕೆಳಕ್ಕೆ ಬಿಸುಟು. "ಅಮ್ಮಾ, ಅಮ್ಮಾ, ಯಾರು ಬಂದಿದ್ದಾರೆ ನೋಡು" ಎಂದು ಕೂಗಿಕೊಂಡ.

ಆಗ, ಅಲ್ಲಿ ಚಿನ್ನದ ಗೊಂಬೆಯಂಥ ಒಂದು ಹುಡುಗಿ ಕಂಭಕ್ಕೆ ಒರಗಿ ನಿಂತಿರುವುದನ್ನು ನಾನು ಗಮನಿಸಿದೆ.

ಪರಶು ಈಗ ನಗೆಯಾಡುತ್ತ "ಮದುವೆಗಂತೂ ಬರಲಿಲ್ಲ. ಈಗಲಾದರೂ ಬರಲು ಸಾಧ್ಯವಾಯಿತಲ್ಲ" ಎಂದ. ಬಳಿಕ ಆ ಹುಡುಗಿಯತ್ತ ತಿರುಗಿ, "ಅಂಬುಜಾ, ನಾಚಿಕೆ ಯಾಕೆ? ಇವರು ನಮ್ಮ ಮನೆಯ ಅಳಿಯಂದಿರು. ನಾಚಿಕೆಯನ್ನು ಬಿಟ್ಟು ಬಿಡು. ಏನೋ ಕತೆ ಬರೆದಿದ್ದೇನೆ ಎಂದೆಯಲ್ಲ. ಇವರಿಗೆ ತೋರಿಸು. ಇವರು

ಪತ್ರಿಕೆಯಲ್ಲಿ ಕೆಲಸಮಾಡುವವರು; ಕತೆ ಕಾದಂಬರಿ ಬರೆಯುವವರು. ಬಿಡಬೇಡ." ಎಂದ.

ಯಾವ ದೇವಶಿಲ್ಪಿ ಇವಳನ್ನು ಕಡೆದನೋ? ಆ ಜಾಗಕ್ಕಂತೂ ಖಂಡಿತ ಅವಳು ತಕ್ಕವಳಲ್ಲ. ಅವಳನ್ನು ನೋಡಿದಾಗ ನನಗೆ ಏನೋ ಒಂದು ವಿಧವಾದ ಪರಿತಾಪ ಉಂಟಾಯಿತು.

ಆಗ ನನ್ನ ಅತ್ತೆಯ ಪ್ರತ್ಯಕ್ಷ.

"ಬಂದಿರಾ? ದೊಡ್ಡ ಮನಸ್ಸುಮಾಡಿ ಈಗಲಾದರೂ ಬಂದಿರಲ್ಲ. ತುಂಬಾ ಸಂತೋಷ. ಮರಕತಂ ಮಕ್ಕಳು ಎಲ್ಲ ಚೆನ್ನಾಗಿದ್ದಾರಷ್ಟೆ? ನೀವು ಮದುವೆಗೆ ಬಾರದಿದ್ದುದು ದೊಡ್ಡ ಲೋಪ. ಬಂದಿದ್ದರೆ ನಮಗೆಲ್ಲ ತುಂಬಾ ಗೌರವ ಸಿಗುತ್ತಿತ್ತು.

ನಾನು ತಲೆಯನ್ನು ಬಾಗಿಸಿ "ಏನೋ ಆಗ ತುಂಬಾ ಕೆಲಸವಿತ್ತು. ಬರಲು ಸಾಧ್ಯವಾಗಲಿಲ್ಲ" ಎಂದೆ.

ಆಗ ಒಂದಷ್ಟು ಹಲಸಿನ ತೊಳೆಗಳನ್ನು ತಟ್ಟೆಯಲ್ಲಿ ಹಾಕಿಕೊಂಡು ಪರಶು ನನ್ನ ಬಳಿ ಬಂದ.

"ಏನೋ ಇದು? ಅವರು ಕೈಕಾಲು ಕೂಡ ತೊಳೆದುಕೊಂಡಿಲ್ಲ. ಆ ಮೇಲೆ ಕೊಡುವೆಯಂತೆ" ಎಂದರು ಅತ್ತೆ.

ಅಂಬುಜ ಈಗ ಬಾವಿಯ ಬಳಿಗೆ ಓಡಿದಳು. ಟವಲನ್ನೂ ಸಾಬೂನನ್ನೂ ಆಕೆ ಅಲ್ಲಿಟ್ಟು ಹಿಂದಿರುಗುವ ವೇಳೆಗೆ ನಾನು ಅಲ್ಲಿಗೆ ಧಾವಿಸಿದ್ದೆ. ಆಗ ಅವಳು ಲಜ್ಜೆಯಿಂದ ನನ್ನನ್ನು ನೋಡಿಯೂ ನೋಡದವಳ ಹಾಗೆ, "ಸೋಪು, ಟವಲ್ಲು ಇಟ್ಟಿದ್ದೇನೆ" ಎಂದಳು. ಅವಳನ್ನು ನೋಡುತ್ತಲೇ ಇರಬೇಕು ಎಂದಿತು ಮನಸ್ಸು. ಆದರೆ ಅಂಬುಜ ವಿವಾಹಿತ ಹುಡುಗಿ. ಮೇಲೂ ನನ್ನ ಭಾವಮೈದುನನ ಹೆಂಡತಿ.

ಮರಕತಂ ನಮ್ಮ ಬಳಿ ಬಂದು ಎರಡು ಮೂರು ವರ್ಷಗಳು ಕಳೆದಿದ್ದರೂ ಅವಳು ತವರಿಗೆ ಹೋಗಿರಲಿಲ್ಲ. ಕಾರಣ ನಾನು ಅನುಮತಿ ನೀಡಿರಲಿಲ್ಲ.

ಇದರಿಂದ ಒಳ್ಳೆಯದೇ ಆಯಿತು.

ಹಳ್ಳಿಯ ಹುಡುಗಿಯಾಗಿ ಬಂದ ನನ್ನ ಹೆಂಡತಿ ಈಗ ಓದುಬರಹ ಚೆನ್ನಾಗಿ ಕಲಿತಿದ್ದಳು. ನನ್ನ ಕೆಲಸಗಳಲ್ಲಿ ಆಕೆ ಸಹಾಯಕಳಾಗಿಯೂ ಇದ್ದಳು. ಅವ್ಯವಸ್ಥೆಯ ನನ್ನ ಬರವಣಿಗೆಯನ್ನು ಪ್ರತಿಮಾಡುವುದು, ಪರಿಶೀಲನೆಗೆ ಬಂದ ಕತೆಗಳನ್ನು ಓದಿ ಸಾರಾಂಶಗಳನ್ನು ಬರೆಯುವುದು, ಹೀಗೆ ಹಲವು ದಾರಿಗಳಲ್ಲಿ ಅವಳನ್ನು ಕೊಂಡೊಯ್ದು ನಾನು 'ನಾಗರಿಕ'ಳನ್ನಾಗಿ ಮಾಡಿದ್ದೆ.

ಪರಶುವಿನ ಮದುವೆಗೆ ಹೋಗಲು ಆಗ ಕಾಗದವೂ ಆಹ್ವಾನ ಪತ್ರಿಕೆಯೂ ಬಂದಿತ್ತು. ಎಲ್ಲರೂ ಹತ್ತು ದಿನಗಳ ಮುಂಚೆ ಬಂದು ಮದುವೆಯನ್ನು ನಡೆಸಿಕೊಡಬೇಕು ಎನ್ನುವ ಪ್ರಾರ್ಥನೆಯೂ ಇತ್ತು.

ಮದುವೆಯನ್ನು ಕುರಿತು ಮರಕತಂ ಕೂಡ ನಾನು ಏನೂ ಮಾತಾಡಲಿಲ್ಲ. 'ಪರಶುವಿಗೆ ತಕ್ಕ ಹಾಗೆ ಒಬ್ಬ ಒರಟು ಹಳ್ಳಿ ಹುಡುಗಿ ಅವನಿಗೆ ಸಿಗುತ್ತಾಳೆ. ಇದರಲ್ಲಿ ವಿಶೇಷವಾದದ್ದು ಏನೂ ಇಲ್ಲ' ಎಂದು ನನ್ನೊಳಗೇ ನಾನು ಹೇಳಿಕೊಂಡೆ.

ಒಂದು ರಾತ್ರಿ ಬಹಳ ಹೊತ್ತಿನ ವರೆಗೆ ನಾನು ವರಾಂಡದಲ್ಲಿ ಬರೆಯುತ್ತ ಕುಳಿತಿದ್ದೆ. ಬಳಿಕ ಕೊಟಡಿಗೆ ಹೋಗಿ ಮಲಗಿದಾಗ, ಕಣ್ಣುಗಳಲ್ಲಿ ನೀರು ತುಂಬಿಕೊಂಡು ಮರಕತಂ ಹಿತವಾಗಿ ನನ್ನ ಕೆನ್ನೆಯನ್ನು ನೇವರಿಸುತ್ತಿದ್ದಳು.

"ಏನು ಮರಕತಂ?" ಎಂದೆ.

ಅವಳು ನನ್ನ ಕೈಯನ್ನು ಭದ್ರವಾಗಿ ಹಿಡಿದು ಬಿಕ್ಕತೊಡಗಿದಳು.

"ಯಾಕೆ ಹೀಗೆ ಅಳ್ತಾ ಇದ್ದೀಯಾ?"

"ಒಂದೂ ಇಲ್ಲ."

"ಏನು ಅಂತ ಹೇಳಬಾರದೆ? ನಿನ್ನ ಅಣ್ಣನ ಮದುವೆಗೆ ನೀನು ಹೋಗಬೇಕು ಅಂತ ಅಲ್ಲವೆ?"

ಅವಳು ಉತ್ತರ ಕೊಡಲಿಲ್ಲ. ಮೇಲೂ ಮೇಲೂ ಬಿಕ್ಕಿ ಬಿಕ್ಕಿ ಅತ್ತಳು.

"ಹುಚ್ಚಿ, ಹೋಗಿದ್ದು ಬಾ. ಮಕ್ಕಳನ್ನೂ ಕರೆದುಕೊಂಡು ಹೋಗು. ನಿನ್ನ ಅಣ್ಣನ ಮದುವೆ. ನೀನೇ ನಾದಿನಿ. ನೀನಿಲ್ಲದಿದ್ದರೆ ಹೇಗೆ? ಖರ್ಚಿಗೆ ನೂರು ರೂಪಾಯಿಗಳನ್ನು ಕೊಡುತ್ತೇನೆ. ನಾನು ಮಾತ್ರ ಬರಲು ಸಾಧ್ಯವಿಲ್ಲ—ತುಂಬ ಕೆಲಸ ಇದೆ. ಜಾಂ ಜಾಂ ಅಂತ ನೀನು ಹೋಗಿದ್ದು ಬಾ."

"ಆದರೆ ನೀವು ಬರುವುದಿಲ್ಲವೋ? ಬಂದರೆ ಹೆಣ್ಣಿನ ಮನೆಯರಿಗೆ ತುಂಬಾ ಗೌರವವಾಗಿ ಇರುತ್ತದೆ."

"ನಾನು ಬರಲು ಸಾಧ್ಯವಿಲ್ಲ. ನೀನು ಹೋಗಿ ಬಾ."

ಪಾಪ, ನಾನಿಲ್ಲದೆಯೇ ಮರಕತಂ ಮಕ್ಕಳೊಂದಿಗೆ ಮದುವೆಗೆ ಹೋಗಿದ್ದು ಬಂದಿದ್ದಾಳೆ.

"ಮದುವೆ ಹೇಗೆ ನಡೆಯಿತು, ಮರಕತಂ? ಹುಡುಗಿ ಸುಮಾರಾಗಿದ್ದಾಳೋ?" ಎಂದು ಮದುವೆ ಮುಗಿಸಿ ಹಿಂದಿರುಗಿ ಬಂದ ಮೇಲೆ ನಾನು ಅವಳನ್ನು ಕೇಳಿದೆ.

"ನೀವಂತೂ ಬರಲಿಲ್ಲ, ಅಮ್ಮನ ಕೊರಗೇ ಕೊರಗು. ಅಷ್ಟು ಚೆಲುವಾದ ಹುಡುಗಿಯನ್ನು ನಾನು ನೋಡಿಯೇ ಇಲ್ಲ. ಎಸ್. ಎಸ್. ಎಲ್. ಸಿ. ವರೆಗೆ ಓದಿದ್ದಾಳೆ. ಪರಶು ಪುಣ್ಯಮಾಡಿದ್ದ" ಎಂದಳು ಮರಕತಂ.

"ನಿಜವಾಗಿಯೂ? ತುಂಬಾ ರೂಪವತಿಯೋ? ಓದಿದವಳು?"

"ಅಂಬುಜ ರೂಪವತಿ ಮಾತ್ರವಲ್ಲ, ಸಂಸಾರಕ್ಕೆ ಹೇಳಿ ಮಾಡಿಸಿದ ಹಾಗೆ ಅಚ್ಚುಕಟ್ಟಾದ ಹೆಣ್ಣು."

"ಹಾಗಾದರೆ ಒಂದು ಸಲ ನಾನು ಅಲ್ಲಿಗೆ ಹೋಗಿ ನೋಡಿ ಬರಲೇಬೇಕು."

ಹೋಗೋಣ, ಹೋಗೋಣ ಎಂದು ಒಂದು ವರ್ಷ ಕಳೆದುಹೋಯಿತು. ದಿಢೀರೆಂದು ಒಂದು ದಿನ ನಾನು ಅಲ್ಲಿಗೆ ಹೋದಾಗ ಮರಕತಂ ಹೇಳಿದ್ದು ಸರಿಯೆನಿಸಿತು.

ನಿಜ. ಅಂಬುಜ ಒಂದು ರೂಪಿನ ಖನಿಯೇ ಸರಿ. ಅವಳದು ಮನಸ್ಸನ್ನು ಸೂರೆಗೊಳ್ಳುವ ರೂಪ. ಆದರೆ ಪರಶು ಅವಳಿಗೆ ತಕ್ಕ ವರ ಖಂಡಿತ ಅಲ್ಲ.

ನನ್ನೊಂದಿಗೆ ಪರಶು ಆಗ ಹೇಳಿದ:

"ಅಳಿಯಂದಿರೆ, ಸಂಕೋಚಪಡಬೇಡಿ. ನಾನು ಸ್ವಲ್ಪ ಹೊರಗೆ ಹೋಗಿದ್ದು ಬರಬೇಕಾಗಿದೆ. ಬರಲು ನಿಧಾನವಾಗುತ್ತದೆ. ನನಗಾಗಿ ಕಾಯಬೇಡಿ. ಅಂಬುಜನ ಕೂಡ ಧಾರಾಳವಾಗಿ ಮಾತಾಡಿ. ಅವಳು ಏನೋ ಕತೆ ಬರೆದಿದ್ದಾಳಂತೆ. ಇವೊತ್ತು ಅವಳದೆ ಅಡಿಗೆ. ಔತಣದ ಅಡಿಗೆ, ತುಂಬಾ ಜೋರಾಗಿರುತ್ತೆ" ಎಂದವನೇ ಆತ ಹೊರನಡೆದ.

ಸ್ನಾನ ಮುಗಿದ ಬಳಿಕ ವರಾಂಡಾದಲ್ಲಿದ್ದ ಉಯ್ಯಾಲೆಯ ಮೇಲೆ ನಾನು ಮಲಗಿದೆ. ಆಗ ಹತ್ತು ಗಂಟೆ.

ಅಂಬುಜ ವಯ್ಯಾರವಾಗಿ ಆಗ ಅಡಿಗೆಯ ಮನೆಯಿಂದ ಹೊರಗೆ ಬಂದು, "ಎಲೆ ಹಾಕಿದೆ, ಊಟಕ್ಕೆ ಬನ್ನಿ" ಎಂದಳು.

ಗೋಡೆಯಲ್ಲಿ ತೂಗಹಾಕಿದ್ದ ಒಂದು ಕ್ಯಾಲೆಂಡರನ್ನು ನೋಡುತ್ತ, "ಇನ್ನೂ ಸ್ವಲ್ಪ ಹೊತ್ತು ಕಳೆಯಲಿ" ಎಂದೆ.

ಅಂಬುಜ ನನ್ನ ಬಳಿಯಲ್ಲಿಯೇ ನಿಂತಿರುವ ಹಾಗೆ ನನಗೆ ಭಾವನೆ. ತಿರುಗಿ ನೋಡಿದರೆ ಹೌದು, ಅದೇ ಜಾಗದಲ್ಲಿಯೇ ನಿಂತಿದ್ದಾಳೆ. ಮನೆಯಲ್ಲಿ ಯಾವ ವಿಧವಾದ ಶಬ್ದವೂ ಇಲ್ಲ. ಸನಿಹದಲ್ಲಿ ಎಲ್ಲಿಯೋ ಮರದ ಮೇಲೆ ಕುಳಿತಿರುವ ಹಕ್ಕಿ 'ಕುವಾ ಕುವಾ' ಎಂದು ಕೂಗಿಕೊಳ್ಳುತ್ತಿರುವ ಶಬ್ದ ಕೇಳಿಬರುತ್ತಿದೆ.

ನಾನು ಈಗ ಅಂಬುಜಳನ್ನು ದಿಟ್ಟಿಸಿ ನೋಡಿದೆ. ಬಳಿಕ ಮೆಲ್ಲಗೆ, "ನೀನು ಕತೆ ಬರೆಯುತ್ತೀಯ ಎಂದು ಪರಶು ಹೇಳಿದ. ನಿನಗೆ ಸಾಹಿತ್ಯದಲ್ಲಿಯೂ ಅಭಿರುಚಿ ಇದೆಯೋ?" ಎಂದು ಕೇಳಿದೆ.

ಮುಖದಲ್ಲಿ ಸಂತೋಷವೂ ನಾಚಿಕೆಯೂ ಗೆಲುವೂ ಬೆರೆತ ಒಂದು ಭಾವದಲ್ಲಿ ಅಂಬುಜ ಹೇಳಿದಳು:

"ಹೌದು, ನಿಮ್ಮ ಕತೆಗಳನ್ನೂ ಕಾದಂಬರಿಗಳನ್ನೂ ಒಂದನ್ನೂ ಬಿಡದಂತೆ ನಾನು ಓದಿದ್ದೇನೆ. ಮದುವೆಯಲ್ಲಿ ಅಕ್ಕ ನಿಮ್ಮ ಕುರಿತು ತುಂಬಾ ಹೇಳಿದ್ದಾರೆ. ಶಾಲೆಯಲ್ಲಿ ಬಹುಮಾನವಾಗಿ ನನಗೆ ನಿಮ್ಮ ಪುಸ್ತಕಗಳೇ ದೊರಕಿತ್ತು. ಕತೆಗಳನ್ನು ಬರೆಯಬೇಕೆಂದು ನನಗೆ ಬಹಳ ದಿನಗಳಿಂದಲೂ ಆಸೆ. ಈಗ ಎರಡನ್ನು ಮಾತ್ರ ಬರೆದಿದ್ದೇನೆ. ಆದರೆ ಅವು ಹೇಗಿವೆಯೋ ಏನೋ? ತೋರಿಸಲು ನಾಚಿಕೆಯಾಗುತ್ತದೆ."

"ನಾಚಿಕೆಯೇನು ಬಂತು? ತೆಗೆದುಕೊಂಡು ಬಾ."

ಅಂಬುಜ ಜಿಂಕೆಯಂತೆ ಕೊಟಡಿಗೆ ಧಾವಿಸಿ, ಸ್ವಲ್ಪ ನಿಮಿಷಗಳು ಮಾತ್ರ ಕಳೆದು, ಒಂದು ಕಂತೆ ಕಾಗದದ ಸುರುಳಿಯನ್ನು ಹಿಡಿದು ಹೊರಬಂದಳು. ನನ್ನ ಕೈಯಲ್ಲಿ ಕೊಡುವಾಗ ಅವಳ ಬೆರಳುಗಳು ನನ್ನ ಬೆರಳುಗಳನ್ನು ಮಿಂಚಾಗಿ ಸ್ಪರ್ಶಿಸಿದುವು. ಆಗ ನನ್ನ ದೇಹ ಪೂರಾ ಮಿಂಚಾಯಿತು. ನಾನು ಮನಸ್ಸನ್ನು ದೃಢಪಡಿಸಿಕೊಂಡೆ.

ಅಂಬುಜ ಮದುವೆಯಾದ ಹುಡುಗಿ. ನನ್ನ ಭಾವಮೈದುನನ ಹೆಂಡತಿ.

ಕತೆಗಳನ್ನು ಓದಿದೆ. ಚೆನ್ನಾಗಿಯೇ ಇದ್ದುವು.

"ಭೇಷ್, ನಿನ್ನ ತಮಿಳು ಅದ್ಭುತವಾಗಿಯೇ ಇದೆ. ನಾನು ಏನೋ ಪ್ರೇಮದ ಕತೆ ಬರೆದಿರುತ್ತೀಯ ಎಂದು ಭಾವಿಸಿಕೊಂಡಿದ್ದೆ. ಈ ಕಾಲದ ವಿದ್ಯಾರ್ಥಿಗಳು ಬರೆಯುತ್ತಾರಲ್ಲ, ಅಂಥ ಬರಹ. ಗ್ರಾಮ ಜೀವನದ ಒಂದು ಕುಟುಂಬ ಕತೆಗೆ ಜೀವ ತುಂಬಿದ್ದೀಯ" ಎಂದೆ.

ಅಂಬುಜ ನಾಚಿಕೆಯಿಂದ ತಲೆಯನ್ನು ಬಗ್ಗಿಸಿದಳು. ಬಳಿಕ ತಲೆಯನ್ನು ಮೇಲೆತ್ತಿ ನನ್ನನ್ನು ದಿಟ್ಟಿಸಿ, "ಇವು ಪತ್ರಿಕೆಯಲ್ಲಿ ಪ್ರಕಟವಾಗಲು ಅರ್ಹತೆ ಇದೆಯೋ?" ಎಂದಳು. ಆಗ ಅವಳ ದಂತಪಂಕ್ತಿ ಮೊಲ್ಲೆಯ ಹೂವಿನ ಹಾಗೆ ಬೆಳಗುತ್ತಿರುವುದನ್ನು ನಾನು ಕಂಡೆ.

ಈಗ ನನ್ನ ಅತ್ತೆ ಅಲ್ಲಿಗೆ ಪ್ರವೇಶಿಸಿ, "ಇದೇನು ಅಂಬುಜ? ಊಟಕ್ಕೆ ಇನ್ನೂ ಹೊತ್ತಾಗಲಿಲ್ಲವೆ?" ಎಂದರು.

"ಎಲ್ಲ ಸಿದ್ಧಪಡಿಸಿದ್ದೇನೆ ಅತ್ತೆ" ಎನ್ನುತ್ತ ಅಂಬುಜ ಒಳನಡೆದಳು.

"ನೀವು ಊಟ ಮಾಡಿ ಹೋಗಿ. ಪರಶು ಬರಲು ತುಂಬಾ ನಿಧಾನವಾಗುತ್ತದೆ" ಎಂದರು ಅತ್ತೆ.

ಅಂಬುಜಳೇ ನನಗೆ ಊಟಕ್ಕೆ ಬಡಿಸಿದಳು. ಅತ್ತೆ ಎದುರಿಗೆ ನಿಂತಪರೇ "ಅದನ್ನು ಹಾಕು, ಇದನ್ನು ಹಾಕು" ಎಂದು ಆಜ್ಞೆಮಾಡಿಕೊಂಡಿದ್ದರು.

ಆವೊತ್ತು ಸಂಜೆಯೇ ನಾನು ನಗರಕ್ಕೆ ಹಿಂದಿರುಗಬೇಕಾಗಿದ್ದಿತು. ಮೊದಲು ದ್ವೇಷಿಸುತ್ತಿದ್ದ ಆ ಹಳ್ಳಿಯಲ್ಲಿ ಇನ್ನೂ ಎರಡು ದಿನಗಳಾದರೂ ಇರಬೇಕು ಎಂದು ಮನಸ್ಸು ಹಾತೊರೆಯಿತು. ವಿಧಿಯಿಲ್ಲದೆ ಆ ಊರನ್ನು ಬಿಟ್ಟೆ.

ಆವೊತ್ತು ಅಂಬುಜಳನ್ನು ನೋಡಿದ ಮೇಲೆ, ಮೂರು ವರ್ಷಗಳು ಕಳೆದು, ಈಗ ಮತ್ತೆ ಅವಳನ್ನು ಸಂಧಿಸಿದ್ದೇನೆ. ಈ ಅವಧಿಯಲ್ಲಿ ಎಂತಹ ಬದಲಾವಣೆ!

ಪರಶು ವಿಷಮ ಶೀತಜ್ವರಕ್ಕೆ ಈಡಾಗಿ ತೀರಿಕೊಂಡಿದ್ದಾನೆ. ಒರಟಾದರೂ ಶುದ್ಧ ಹೃದಯದ ಆತ ಅಲ್ಪ ಆಯುಷ್ಯವನ್ನು ಪಡೆದಿದ್ದಾನೆ. ಅಂಬುಜಳಿಗೆ ಅಂಥಾ ರೂಪ ಕೊಟ್ಟ ದೇವರು ಸುಖವನ್ನು ಮಾತ್ರ ಅವಳಿಂದ ಕಸಿದುಕೊಂಡಿದ್ದಾನೆ. ಭಾರವಾದ ಹೊರೆಯನ್ನು ವಿಧಿ ಅವಳ ತಲೆಯ ಮೇಲೆ ಹೊರಿಸಿದೆ.

ಅಣ್ಣ ಹಠಾತ್ತನೆ ಕಾಲವಾಗಲು ಮರಕತಂ ತತ್ತಳಿಸಿ ಹೋಗಿದ್ದಾಳೆ. ತಾಯಿಯನ್ನೂ ಅತ್ತಿಗೆಯನ್ನೂ ಸಂತೈಸಲು ಅವಳು ಗ್ರಾಮಕ್ಕೆ ತೆರಳಿದ್ದಾಳೆ. ಈ ಸಲ ನಿಜವಾದ ಕಾರಣದಿಂದಲೇ ನಾನು ಅಲ್ಲಿಗೆ ಹೋಗಲು ಸಾಧ್ಯವಾಗಲಿಲ್ಲ.

ಮರಕತಂ ಊರಿಂದ ಹಿಂದಿರುಗಿ ಬಂದ ಮೇಲೆ, ಬಿಡುವು ಮಾಡಿಕೊಂಡು ನಾನು ಅಲ್ಲಿಗೆ ಹೋದೆ. ಆ ಮನೆಯೊಳಗೆ ಪ್ರವೇಶಿಸಿದಾಗ ನಾನು ಕಂಡ ದೃಶ್ಯ ನನ್ನನ್ನು ದಿಗ್ಭ್ರಮೆಗೊಳಿಸಿತು.

ಅಂಬುಜ ನಡುಮನೆಯಲ್ಲಿ ನಿಂತಿದ್ದಳು. ಅವಳ ಹಣೆಯಲ್ಲಿ ಕುಂಕುಮವಿಲ್ಲ. ಅವಳ ಕೆನ್ನೆಗಳು ಬತ್ತಿದ್ದುವು. ನನ್ನನ್ನು ಕಂಡೊಡನೆ ಅವಳು ಬಿಕ್ಕಿ ಬಿಕ್ಕಿ ಅತ್ತಳು. ನನ್ನ ಕಣ್ಣುಗಳೂ ಈಗ ತುಂಬಿಹೋಗಿದ್ದುವು.

"ಎಂಥ ಕೆಲಸವಾಯಿತು ! ಹೀಗಾಗುತ್ತದೆಂದು ನಾವು ಕನಸಿನಲ್ಲಿಯೂ ನಿರೀಕ್ಷಿಸಿರಲಿಲ್ಲ" ಎಂದೆ.

ಅಂಬುಜ ಮತ್ತೆ ನನ್ನೆದುರು ನಿಲ್ಲಲಿಲ್ಲ. ಒಳಗೆ ನಡೆದುಬಿಟ್ಟಳು. ಅವಳು ಬಿಕ್ಕುತ್ತಿರುವ ಶಬ್ದ ಮೇಲೂ ನನಗೆ ಕೇಳಿಸುತ್ತಿತ್ತು.

"ಪರಶು ನಮಗೆ ಮೋಸಮಾಡಿ ನಡೆದು ಬಿಟ್ಟ. ಚಿನ್ನದ ಬೊಂಬೆಯ ಹಾಗಿರುವ ಅಂಬುಜಳನ್ನು ನಿರ್ಗತಿಕಳನ್ನಾಗಿ ಮಾಡಿದ. ಏನು ಹಾಳು ಜ್ವರವೊ? ಎಲ್ಲಿಂದ ಬಂದಿತೊ? ನಾವು ಪರದೇಶಿಯಾಗಿ ಹೋದೆವು" ಎಂದು ಪ್ರಲಾಪಿಸುತ್ತ ಅತ್ತೆ ಓ ಎಂದು ಅಳತೊಡಗಿದರು.

ಇವರಿಗೆಲ್ಲ ಏನು ಸಮಾಧಾನ ಹೇಳುವುದೆಂದು ನನಗೆ ತಿಳಿಯಲಿಲ್ಲ. ಹಳೆಯ ಅಂಬುಜಳ ನೆನಪೇ ನನ್ನ ಮನಸ್ಸನ್ನು ಕಾಡುತ್ತಿತ್ತು.

ನಾನು ಅವೊತ್ತು ಸಂಜೆ ನಾಲ್ಕೂವರೆ ಗಂಟೆಯ ರೈಲಿಗೆ ನಗರಕ್ಕೆ ಹಿಂದಿರುಗಲು ಹೊರಟೆ. ಹೊರಡುವಾಗ ನೆರೆಮನೆಯ ಹುಡುಗಿ ಓಡಿಬಂದವಳೆ, "ಮಾವಾ, ಅಂಬುಜಕ್ಕ ನಿಮ್ಮನ್ನು ಸ್ವಲ್ಪ ಹೊತ್ತು ಇರಹೇಳಿದ್ದಾರೆ" ಎಂದಳು.

"ಅವಳು ಎಲ್ಲಿ?" ಎಂದೆ.

ಕೊಟಡಿಯಲ್ಲಿ ಇದ್ದಾರೆ" ಎಂದಳು ಆ ಹುಡುಗಿ.

ನಾನು ಕೊಟಡಿಗೆ ಪ್ರವೇಶಿಸಿದೆ. ಅಂಬುಜ ಬಾಗಿಲೋರದಲ್ಲಿ ತಲೆಬಾಗಿಸಿ ನಿಂತಿದ್ದವಳೆ ಕಣ್ಣುಗಳಲ್ಲಿ ನೀರು ಮಡುಗಟ್ಟಿರಲು, "ಮನೆಯಲ್ಲಿ ತುಂಬಾ ತಾಪತ್ರಯ ಆಗಿದೆ. ನಿಮಗೆ ಹೇಳುವುದಕ್ಕೆ ನಾಚಿಕೆ ಆಗುತ್ತದೆ, ನನಗೆ ಈಗ ನೂರು ರೂಪಾಯಿಗಳು ಬೇಕಾಗಿವೆ. ಈ ಉಂಗುರವನ್ನು ಎಲ್ಲಿಯಾದರೂ ಅಡವಿಟ್ಟು ಕಳಿಸಿಕೊಡಿ" ಎಂದಳು.

ಹಾಗೆ ಹೇಳುತ್ತ ಅವಳು ತನ್ನ ಬೆರಳಿಂದ ಉಂಗುರವನ್ನು ಕಳಚುತ್ತಿರುವಾಗ ನಾನು ಹೇಳಿದೆ:

"ಉಂಗುರ ಯಾತಕ್ಕೆ ಅಂಬುಜ? ನೀನು ಕೇಳಿದ ಹಣದಲ್ಲಿ ಐವತ್ತನ್ನು ಈಗ ಕೊಡುತ್ತೇನೆ. ಉಳಿದದ್ದನ್ನು ನಾಳೆ-ನಾಡಿದ್ದರಲ್ಲಿಯೇ ಮನಿಯಾರ್ಡರ್ ಮಾಡುತ್ತೇನೆ" ಎಂದು ನನ್ನಲ್ಲಿದ್ದ ಐವತ್ತು ರೂಪಾಯಿಗಳನ್ನು ಅವಳಿಗೆ ಕೊಟ್ಟೆ.

"ಇಲ್ಲ, ಈ ಉಂಗುರ ನಿಮ್ಮ ಕೈಯಲ್ಲಿ ಇರಲಿ" ಎಂದವಳೇ ಆಕೆ ಅದನ್ನು ಕಳಚಿ ನನ್ನ ಕೈಗೆ ಹಾಕಿದಳು. ಅದನ್ನು ನಾನು ಜೇಬಿಗೆ ಸೇರಿಸಿದೆ. ಮತ್ತೆ ಅವಳು ಅಲ್ಲಿ ನಿಲ್ಲಲಿಲ್ಲ, ಇನ್ನೇನಾದರೂ ಹೇಳಲು ಬರುತ್ತಾಳೋ ಎಂದು ಕಾದೆ. ಉಹೂಂ, ಬರಲಿಲ್ಲ.

ನನಗೆ ಆವೊತ್ತು ಸಂಜೆ ನಾಲ್ಕೂವರೆ ಗಂಟೆಯ ಗಾಡಿ ತಪ್ಪಿಹೋಯಿತು. ಇನ್ನು ಮುಂದೆ ಆರೂವರೆಗೆ. ಅತ್ತೆ. "ನಾಳೆ ಬೆಳಗ್ಗೆ ಗಾಡಿಗೆ ಹೋದರಾಯಿತು" ಎಂದರು.

"ಇಲ್ಲ, ಇವೊತ್ತು ನಾನು ಊರು ಹೋಗಿ ಸೇರಲೇಬೇಕಾಗಿದೆ" ಎಂದೆ.

"ಅಂಬುಜ ಹೇಳಿರಬಹುದು. ತುಂಬಾ ಕಷ್ಟಕಾಲ. ಸುಧಾರಿಸುವುದಕ್ಕೆ ಆಗು ತ್ತಿಲ್ಲ" ಎಂದರು ಅತ್ತೆ.

"ಯಾಕೆ ಯೋಚನೆ ಮಾಡುತ್ತೀರಿ? ನಾವೆಲ್ಲ ಇಲ್ಲವೆ?" ಎಂದೆ.

ರೈಲ್ವೇ ನಿಲ್ದಾಣಕ್ಕೆ ಬಂದು ಸೇರಿದೆ. ಹಲವು ವಿಧವಾದ ಭಾವನೆಗಳು ನನ್ನ ಸುತ್ತ ಗರಿಗೆದರಿ ಹಾರಾಡಿದುವು.

ಅಂಬುಜ ನನ್ನ ಕೈಗೆ ಹಾಕಿದ ಉಂಗುರವನ್ನು ಕಿರುಬೆರಳಿಗೆ ಹೇಳಿಮಾಡಿಸಿದ ಹಾಗಿತ್ತು, ಅದು ಅರ್ಧ ಸವರನ್ ಉಂಗುರ. ಆದರೆ ಅದರ ಬೆಲೆ ಮಾತ್ರ ನನಗೆ ಅಪಾರವಾಗಿ ಕಂಡಿತು. ಹರಳುಗಳಿಲ್ಲ, ಆ ಉಂಗುರಕ್ಕೆ. ಆದರೆ ನೀಲಚೌಕದ ನಡುವೆ 'ಅ' ಎನ್ನುವ ಅಕ್ಷರ ಅದು ನನ್ನ ಹೃದಯಕ್ಕೇ ನಟ್ಟಹಾಗಿತ್ತು.

ಊರಿಗೆ ಬಂದು ಸೇರಿದೊಡನೆ, ಐವತ್ತಕ್ಕೆ ಬದಲಾಗಿ ನೂರು ರೂಪಾಯಿಗಳನ್ನು ಅಂಬುಜಳ ಹೆಸರಿಗೆ ಮನಿಯಾರ್ಡರ್ ಮಾಡಿದೆ. ಈಗ ಅವಳು ಕೇಳಿದರೆ ಸಾವಿರ ರೂಪಾಯಿಗಳನ್ನಾದರೂ ತೆರಲು ನಾನು ಸಿದ್ಧನಿದ್ದೆ.

ಒಂದು ತಿಂಗಳು ಕಳೆದ ಬಳಿಕ ಅಂಬುಜಳಿಂದ ನನಗೆ ಕಾಗದ ಬಂದಿತು:

"ನಮಸ್ಕಾರಗಳು,

ಸಮಯದಲ್ಲಿ ತುಂಬಾ ಉಪಕಾರ ಮಾಡಿದಿರಿ. ಶೀಘ್ರದಲ್ಲಿಯೇ ನಮ್ಮ ಅರ್ಧ ಎಕರೆ ಭೂಮಿ ವಿಕ್ರಯವಾಗುತ್ತದೆ. ಹಣ ನಮ್ಮ ಕೈಸೇರಿದ ತಕ್ಷಣ ನಿಮಗೆ ಹಿಂದಿರುಗಿಸುತ್ತೇವೆ.

ಇಂತು ಭಾಗ್ಯಹೀನೆ ಅಂಬುಜ."

ಹೌದು. ಆ ಉಂಗುರದ ಬಗ್ಗೆ ಆಕೆ ಚಕಾರವನ್ನೂ ಎತ್ತಿರಲಿಲ್ಲ.

ಅದನ್ನು ನಾನು ಏನು ಮಾಡುವುದು? ನಾನೇ ಅದನ್ನು ಹಾಕಿಕೊಳ್ಳಲೆ? ಹಿಂದಿರು ಗಿಸಲೆ? ಅವಳನ್ನು ಮತ್ತೆ ಹೋಗಿ ನೋಡುವುದು ಸರಿಯೆ? ಇದು ಯಾವುದೂ ಅರ್ಥವಾಗದೆ ನಾನು ತೀವ್ರ ತೊಳಲಾಟದಲ್ಲಿ ಇದ್ದೇನೆ.

# ಅವು ಒಳ್ಳೆಯ ಮೃಗಗಳಲ್ಲ

ರಣಗುಡುವ ಬಿಸಿಲು. ಟಾರುರಸ್ತೆ ಜ್ವಾಲೆಯನ್ನು ಬೀಸುತ್ತಿದೆಯೇನೋ ಎನ್ನುವಂತೆ ಧಗದಗಿಸುತ್ತಿದೆ. ರಸ್ತೆಯ ಬದಿಯಲ್ಲಿದ್ದ ಒಂದು ದೊಡ್ಡ ಹುಣಿಸೆಯ ಮರ ಮೌನವಾಗಿ ನಿಂತಿದೆ. ಅದರ ನೆರಳೂ ಸುಡುತ್ತ ಇದೆ. ಇನ್ನು ಈ ಮರವನ್ನು ಬಿಟ್ಟರೆ ದಣಿವಾರಿಸಿಕೊಳ್ಳಲು ಆ ರಸ್ತೆಯಲ್ಲಿ ಬೇರೆ ಮರಗಳಿಲ್ಲ. ಆದುದರಿಂದಲೇ ಕೇರಳೀಯರು ಮಂದೆಯನ್ನು ಮರದಡಿಯಲ್ಲಿ ಕೊಂಡು ಬಂದು ನಿಲ್ಲಿಸಿ ತಾವೂ ಕುಳಿತೋ ಮರದ ಬುಡಕ್ಕೆ ತಲೆಕೊಟ್ಟೋ ವಿಶ್ರಮಿಸಿಕೊಳ್ಳುತ್ತಿದ್ದಾರೆ.

ಈಟಿಕೊಂಬು ಆಯಾಸದಿಂದ ಮಲಗಿಕೊಂಡಿದೆ. ಅದರ ಕಣ್ಣುಗಳಲ್ಲಿ ಹರಿದು ಬಂದ ನೀರು ಇನ್ನೂ ನಿಂತಿಲ್ಲ. ಅದರ ದೇಹವೆಲ್ಲ ಗಡಗಡನೆ ನಡುಗುತ್ತ ಇದೆ.

ವಯಸ್ಸಾದ ಒಂದು ಎತ್ತಿನ ಹೆಸರು ಈಟಿಕೊಂಬು. ಅದರ ಎರಡು ಕೊಂಬುಗಳೂ ಈಟಿಯ ಹಾಗೆ ಇದ್ದುದರಿಂದ ಜಮೀನ್ದಾರರು ಅದಕ್ಕೆ ಆ ಹೆಸರನ್ನು ಇಟ್ಟಿದ್ದರು. ಬಾಲ್ಯದಿಂದಲೂ ಪರಿಚಯವಾಗಿರುವ ಆ ಸ್ಥಳಕ್ಕೆ ಅದು ಈಗ ಬರುತ್ತಲೆ "ಹೆಗ್ಮಾ..." ಬಂದು ಒಂದು ಸಲ ಕೂಗನ್ನು ಹಾಕಿ ಮಲಗಿಬಿಟ್ಟಿತು. ಅದರ ಜೊತೆಯ ಎತ್ತು, ಏಣಿ ಕಾಲಿನವನು ಎಲ್ಲಿಂದಲೋ ಈ ಶಬ್ದವನ್ನು ಕೇಳಿ, ಆ ಬೇಲಿಯನ್ನು ಹಾರಿ, ಇದರ ಸಮೀಪ ಬಂದು ನಿಂತಿದೆ. ಈಟಿಕೊಂಬಿನವನ ಹಣೆ, ದೇಹ ಎಲ್ಲವನ್ನೂ ಮೃದುವಾಗಿ ತನ್ನ ನಾಲಗೆಯಿಂದ ನೆಕ್ಕತೊಡಗಿದೆ.

ಸುತ್ತಮುತ್ತ ಇಪ್ಪತ್ತು ಮೂವತ್ತು ಮಂದಿ ದನಗಳು, ಕೆಚ್ಚಲು ಬತ್ತಿದ ಹಸುಗಳು. ತಾವು ಎಲ್ಲಿಗೆ ಹೋಗುತ್ತಿರುವುದು ಎನ್ನುವುದು ತಿಳಿಯದೆ, ಆ ಮಾನವರ ಬಾರು ಕೋಲಿನ ಸೆಳೆತಕ್ಕೆ ಹೆದರಿ ಹೆಜ್ಜೆಹಾಕಿ ಬಂದಾಗ, ದಾರಿಯಲ್ಲಿ ಸಿಕ್ಕಿದ ತರಗೆಲೆಗಳನ್ನು ಬಾಯಾಡಿಸಿ, ಈಗ ಮೆಲುಕುಹಾಕತೊಡಗಿದ್ದುವು. 'ಮನುಷ್ಯನಿಗೆ ಒಂದು ಗೇಣು, ದನಕ್ಕೆ ದೇಹವೆಲ್ಲ ಹೊಟ್ಟೆ,' ಎನ್ನುತ್ತಾರೆ. ಆದುದರಿಂದ ಏನನ್ನಾದರೂ ಅವು ಬಾಯಾಡಿಸಬೇಕಲ್ಲ.

"ಮಿತ್ರಾ ನೋಡು, ನಾವು ಜತೆಯಾಗಿ ಆ ತೋಟದಲ್ಲಿ ಕೆಲಸಮಾಡಿದುದನ್ನು ನೆನಸಿಕೊಂಡರೆ ರೋಮಾಂಚನವಾಗುತ್ತದೆ. ಕಬ್ಬಿನ ಗದ್ದೆಗೆ ಯಾತದಿಂದ ನೀರನ್ನು ಎಳೆಯುವಾಗ ನೀನು ಆಯಾಸದಿಂದ ಹಾಗೆಯೇ ನಿಂತದ್ದೂ, ಜಮೀನ್ದಾರರ ಮನೆಯ ಆಳು ಬಾಲನುಲಿಸಿ ನಿನ್ನನ್ನು ಓಡಿಸಿದ್ದೂ ನಿನಗೆ ನೆನಪಿದೆಯೆ?"—ಎಂದು ಕೇಳಿತು ಈಟಿಕೊಂಬು. ಬಳಲಿಕೆಯಲ್ಲಿಯೂ ಅದಕ್ಕೆ ಹಳೆಯ ನೆನಪಿನ ಹುರುಪು.

"ಅದನ್ನೆಲ್ಲ ಈಗ ಯಾಕೆ ನೆನಪಿಗೆ ತಂದುಕೊಳ್ಳುತ್ತೀಯ? ನಾನು ಮತ್ತೆ ನಿನ್ನನ್ನು

ನೋಡುತ್ತಿರುವುದರಿಂದ ನನಗೆ ತುಂಬಾ ಸಂತಸ ಆಗುತ್ತ ಇದೆ. ಈ ಸಮಯದಲ್ಲಿ ನೀನು ಹಳೆಯ ಪ್ರಸ್ತಾಪ ಎತ್ತಬೇಡ" ಎಂದಿತು ಏಣಿಕಾಲಿನ ಎತ್ತು.

"ಹೌದು. ನೀನು ಹೇಗೆ ಈಗ ನನ್ನನ್ನು ಕಂಡುಹಿಡಿದು ಇಲ್ಲಿಗೆ ಬಂದೆ?"

"ಇಲ್ಲಿಗೆ ಸಮೀಪವಾಗಿ ನಮ್ಮ ಜಮೀನ್ದಾರರ ತೋಟ ಇದೆಯಲ್ಲವೆ? ನಿನ್ನ ಶೋಕದನಿ ನನ್ನ ಕಿವಿಗೆ ಬಿದ್ದಿತು. ಬಾರದೆ ಇರುತ್ತೇನೆಯೇ? ಒಂದೇ ನೆಗೆತಕ್ಕೆ ಬೇಲಿಯನ್ನು ಹಾರಿ ಧಾವಿಸಿ ಬಂದೆ."

ಕಂದಪ್ಪನ್ ಪದೂರು ಎನ್ನುವ ಗ್ರಾಮದ ರಸ್ತೆಯ ಬದಿಯಲ್ಲಿ ಈ ಎತ್ತುಗಳು ಬೇರ್ಪಟ್ಟು, ಮತ್ತೆ ಸಂಧಿಸಿ, ಅನಿರೀಕ್ಷಿತವಾಗಿ ತಾವು ಹೀಗೆ ಸಂಧಿಸಿದುದರ ಸಂತಸ ದೊಂದಿಗೆ ಮೌನಭಾಷೆಯಲ್ಲಿ ಮಾತಾಡಿಕೊಂಡು ನಿಂತುವು.

ಈರೋಡಿಗೆ ಸುಮಾರು ಒಂಬತ್ತು ಮೈಲಿಗಳ ದೂರದಲ್ಲಿ ಕಂದಪ್ಪನ್ ಪದೂರ್ ಗ್ರಾಮ ಇದೆ. ಆ ಊರಿನ ಜಮೀನ್ದಾರರೊಬ್ಬರು ಪ್ರತಿ ಗುರುವಾರ ಈರೋಡಿನಲ್ಲಿ ನೆರೆಯುವ ಸಂತೆಯಲ್ಲಿ, ಒಂದು ದಿನ ಮೊದಲೇ, ಈಟಿಕೊಂಬಿನವನನ್ನು ಮಾರಾಟ ಮಾಡಿದ್ದರು. ಈವಾಗ ಅದು, ಆ ಊರಿನ ಬಳಿಯ ಹೆದ್ದಾರಿಯಲ್ಲಿ ಕೇರಳಕ್ಕೆ ಸಾಗುವ ದನದ ಮಂದೆಯ ಕೂಡ ಸೇರಿಹೋಗಿದೆ. ಆ ಕೇರಳೀಯರು ವಿಶ್ರಾಂತಿಗಾಗಿ ಮಂದೆ ಯನ್ನು ಆ ಹುಣಿಸೆಯ ಮರದಡಿಗೆ ತಂದು ನಿಲ್ಲಿಸಿದುದು ಕೇವಲ ಆಕಸ್ಮಿಕ.

ಈಟಿಕೊಂಬಿನ ದನ ದೇಹವನ್ನು ನೆಕ್ಕಿದ ಮೇಲೆ ಒಂದು ವಿಧವಾದ ತೃಪ್ತಿಯ ಭಾವದೊಂದಿಗೆ ಏಣಿಕಾಲು ಮಲಗಿಕೊಂಡಿತು.

"ಅಬ್ಬಬ್ಬಾ, ಇನ್ನು ಎಷ್ಟು ದೂರ ಇವರು ನಮ್ಮನ್ನು ಹೀಗೆ ಸಾಗಿಸುತ್ತಾರೋ? ಎಲ್ಲಿಯವರೆಗೆ ಹೀಗೆ ನಾವು ನಡೆಯಬೇಕಾಗಿದೆಯೊ? ಈ ಬಾರುಕೋಲಿನ ಏಟು ತುಂಬಾ ವೇದನೆ ಕೊಡುತ್ತಿದೆ. ಅದರಲ್ಲೂ ನನಗೇ ಜಾಸ್ತಿ."

"ಹೌದು, ನಿನ್ನ ಕಾಲು ಕುಂಟು. ಹೊಡೆತವನ್ನು ತಪ್ಪಿಸಿಕೊಳ್ಳಲು ನೀನು ಹೇಗೆ ಮುಂದೆ ಓಡಲು ಸಾಧ್ಯವಿದೆ?"

ಹೀಗೆ ಹೇಳುವಾಗ ಏಣಿಕಾಲಿನವನ ಕಣ್ಣಿನಲ್ಲಿ ತುಂಬ ನೀರು.

ಆ ಜೋಡಿ ಎತ್ತುಗಳು ಹಲವು ವರ್ಷಗಳ ವರೆಗೆ ಹಗಲೂ ಇರುಳೂ ಜಮೀನ್ದಾರ ರಲ್ಲಿ ದುಡಿದಿದ್ದುವು. ಹೇಗೋ ಈಟಿಕೊಂಬಿನವನ ಎಡಗಾಲಲ್ಲಿ ಒಂದು ಮೊಳೆ ನಟ್ಟಿತು. ಮೊದಲು ಗಮನಿಸದೆ ಆನಂತರ ಚಿಕಿತ್ಸೆ ನಡೆಸಿದುದರಿಂದ, ಅದರ ಕಾಲು ಗುಣವಾಗದೆ ಕುಂಟಾಯಿತು. ಅದನ್ನು ಈಗ ಜಮೀನ್ದಾರರ ಮನೆಯವರು ಮಲೆಯಾಳದಿಂದ ಬಂದ ಕಟುಕರಿಗೆ ಈರೋಡಿನ ಸಂತೆಯಲ್ಲಿ, ನೂರು ರೂಪಾಯಿಗಳಿಗೆ ವಿಕ್ರಯಿಸಿಬಿಟ್ಟರು.

ಹೀಗೆ ಕಂದಪ್ಪನ್ ಪುದೂರು ಗ್ರಾಮದ ಬಳಿಯಲ್ಲಿ, ಕೇರಳಕ್ಕೆ ಹೋಗುವ ಹೆದ್ದಾರಿ ಯಲ್ಲಿ ಅವು ಮತ್ತೆ ಸಂಧಿಸುವ ಅವಕಾಶವಾಯಿತು.

"ಕಳೆದ ವರ್ಷ ಜಮೀನ್ದಾರರು ನಾಲ್ಕು ಎಕರೆಗೆ ಅರಸಿನ ಹಾಕಿದರು. ನಿನಗೆ ನೆನಪಿದೆಯೋ?" ಎಂದು ಏಣಕಾಲಿನವನು ಕೇಳಿತು. ಈ ತರಹ ಮಾತು ಬೇಡ ಎಂದು ಸ್ವಲ್ಪ ಹೊತ್ತಿಗೆ ಮುಂಚೆ ಅದೇ ಹೇಳಿದ್ದು. ಆದರೆ ಆ ಎತ್ತುಗಳಿಗೆ ಮಾತಾಡಲು ಬೇರೆ ಏನು ಸಾಮಗ್ರಿ ಇದೆ?

"ಅಷ್ಟರೊಳಗೆ ಮರೆತುಹೋಗುತ್ತದೇನು? ಅರಸಿನಕ್ಕೆ ನೂರು ನೀರು ಎನ್ನುತ್ತಾರೆ. ನಾವಲ್ಲವೋ ಎಲ್ಲವನ್ನೂ ಎರೆದವರು."

"ಎಷ್ಟು ಬಂಡಿ ಗೊಬ್ಬರವನ್ನು ತಂದು ಸುರಿದಿದ್ದೇವೆ, ಪೈರು ಸಮೃದ್ಧಿಯಾಗಿ ಬೆಳೆಯಲೆಂದು."

"ಆ ವರ್ಷ ಅರಸಿನಕ್ಕೆ ಒಳ್ಳೆಯ ಬೆಲೆ. ಜಮೀನ್ದಾರರಿಗೆ ತುಂಬಾ ವರಮಾನ."

ಈಟಿಕೊಂಬು ಹೀಗೆ ಹೇಳುವಾಗ ತನ್ನೆಲ್ಲ ಸಂಕಟವನ್ನೂ ಮರೆತಂತಿತ್ತು.

"ನೀನು ನೂರು ನೀರನ್ನು ಹಾಯಿಸಿದೆ. ಜಮೀನ್ದಾರರಿಗೆ............" ಎಂದು ಈಟಿಕೊಂಬಿನವನು ಹೇಳುವಾಗ ಏಣಕಾಲಿನವನು ಮಧ್ಯೆ ಪ್ರವೇಶಿಸಿದ:

"ನೀನೂ ನನ್ನ ಜತೆ ಸೇರಿ ಕೆಲಸ ಮಾಡಲಿಲ್ಲವೋ? ಜಮೀನ್ದಾರರ ಕಿಸೆಯಲ್ಲಿ ನೂರು ನೂರು ರೂಪಾಯಿಗಳು ತುಂಬಲು ನೀನೂ ಕಾರಣ."

ಈವಾಗ ನಿದ್ದೆ ಮಾಡುತ್ತಿದ್ದ ಆ ಕಾವಲರಲ್ಲಿ ಇಬ್ಬರು ಎಚ್ಚೆತ್ತುಕೊಂಡರು. ಒಡನೇ ಅವರಿಬ್ಬರೂ ಬೀಡಿಯನ್ನು ಹತ್ತಿಸಿದರು. ಮಾತಿಗೆ ಪ್ರಾರಂಭವಾಯಿತು.

"ಆ ಆಳನ್ನು ನೋಡಿದೆಯೋ? ಮುಂದಿನ ವರ್ಷ ಮಾರಾಟಮಾಡುತ್ತೇನೆ ಎಂದ."

"ಯಾವ ಆಳು?"

"ಅವನೇ ಸಂತೆಗೆ ಬಂದಿದ್ದನಲ್ಲ. ಒಂಟಿ ಎತ್ತಿನ ಗಾಡಿಯವನು. ಇನ್ನೂ ಒಂದು ವರ್ಷ ದುಡಿಸಿಕೊಂಡು ಆ ಮೇಲೆ ಕೊಡುತ್ತೇನೆ......"

"ಐವತ್ತು ರೂಪಾಯಿ ಅದಕ್ಕೆ ಸರಿಯಾದ ಬೆಲೆತಾನೆ?"

"ಅವನು? ಪಕ್ಕಾ ಅಸಾಮಿ. ಇಪ್ಪತ್ತೈದೇ ಮುಂದಿನ ವರ್ಷ ಸಿಕ್ಕಿದರೆ ಸಾಕಂತೆ."

"ಹುಂ. ಒಂದು ವರ್ಷದೊಳಗೆ ಐದು ನೂರು ರೂಪಾಯಿಯಾದರೂ ಗಾಡಿಬಾಡಿಗೆಯಲ್ಲಿ ಸಂಪಾದಿಸಿಬಿಡಬಹುದು ಅಂತ."

"ಲೆಕ್ಕ ತಿಳಿದವನು. ಎತ್ತು ಪೂರ್ಣ ಚಕ್ಕಳ ಆಗುವ ವರೆಗೆ ಗದ್ದೆಯಲ್ಲಿ ಕೆಲಸ ಮಾಡಿದ್ದು ಆಗಿದೆ. ಆ ಮೇಲೆ ಎಷ್ಟು ಸಿಕ್ಕಿದರೆ ಏನಂತೆ? ಆದರೆ ಸ್ವಲ್ಪ ಸಿಕ್ಕಿದರೂ ಅವನು ಬಿಡುವುದಿಲ್ಲ."

ಜೀವಕಾರುಣ್ಯವಿಲ್ಲದೆ ಕಸಾಯಿಮನೆಗೆ ಕೊಂಡೊಯ್ಯುತ್ತಿರುವವರ ಮಾತುಕತೆಗಳ ಅರ್ಥ ಪಾಪ ಆ ಜೋಡೆತ್ತುಗಳಿಗೆ ಹೇಗೆ ಅರಿವಾಗಬೇಕು?

ಹೌದು. ಕೆಲವು ಸಮಯ ಮಾನವರು ತಮ್ಮ ತಮ್ಮೊಳಗೇ ಮಾತಾಡಿಕೊಳ್ಳು

ವುದೇ ಅರ್ಥವಾಗುವುದಿಲ್ಲ. ಒಬ್ಬನ ಮಾತು ಇನ್ನೊಬ್ಬನಿಗೆ ಹಿಡಿಸದು; ರುಚಿಸದು. ಹಿಡಿಸಿದ್ದರೆ ಉತ್ತರ, ವ್ಯಾಖ್ಯಾನ, ವಿಮರ್ಶೆ—ಇಂಥವೆಲ್ಲ ಎಲ್ಲಿರಬೇಕಿತ್ತು? ಮಾನವನೇ ಹೀಗಿರುವಾಗ ಇನ್ನು ದನಗಳ ಪಾಡೇನು? ಏನೋ ಪಾಪ, ಅವು ತಮ್ಮ ತಮ್ಮ ಕಷ್ಟ ಸುಖಗಳನ್ನು ಹೇಳಿಕೊಳ್ಳುತ್ತಿದ್ದುವು:

ಅವರು ಮಾತಾಡುತ್ತಿದ್ದುದು ಈಟಿಕೊಂಬಿನವನಿಗೂ, ಏಣಿಕಾಲಿನವನಿಗೂ ಏನೂ ಅರ್ಥವಾಗಲಿಲ್ಲ. ಅವು ಒಂದನ್ನೊಂದು ನೋಡಿಕೊಂಡುವು. ಮತ್ತೆ ತಮ್ಮ ಮಾತನ್ನು ಮುಂದುವರಿಸಿದುವು;

"ಹೌದು. ಆವಾಗ ಮೂರು ವರ್ಷ ಸೇರಿದ ಹಾಗೆ, ಪ್ರತಿ ದಿನವೂ ಹತ್ತು ಮೈಲಿಗಳು ಆಸ್ಪತ್ರೆಗೆ ಜೀರೆ ಹೋಗಿಬರುತ್ತಿದ್ದೆವು. ಒಂದು ದಿನವೂ ತಪ್ಪಲಿಲ್ಲ."

"ಹಗಲೆಲ್ಲ ಗದ್ದೆಯ ಕೆಲಸ. ರಾತ್ರಿ ನೊಗವನ್ನು ಹೊತ್ತು ಹತ್ತು ಮೈಲು ಓಡಬೇಕಿತ್ತು. ಬರುವಾಗಲೂ ಹಾಗೆಯೇ. ಒಂದೇ ಓಟ."

"ಜಮೀನ್ದಾರರು ಕಾಲು ಮುರಿದ ತಮ್ಮ ತಂದೆಯನ್ನು ಚೆನ್ನಾಗಿ ನೋಡಿಕೊಂಡರು. ಹೀಗೆ ಮಾಡಿದರೂ ಅವರು ಎದ್ದು ನಡೆಯಲು ಸಾಧ್ಯವಿಲ್ಲದೆ ಹೋಯಿತು. ಅವರ ಅಸ್ತಿಯನ್ನು ಕಾವೇರಿಗೆ ಬಿಡಲು ನಾವೇ ಹೋಗಿದ್ದೆವು. ಪಾಪ, ಜಮೀನ್ದಾರರು ಬಿಕ್ಕಿ ಬಿಕ್ಕಿ ಅತ್ತರು."

ಹೀಗೆ ಇವುಗಳು ಮಾತನಾಡುತ್ತಿದ್ದಾಗ ಕೆಮ್ಮುತ್ತ ಕೆಮ್ಮುತ್ತ ಜಮೀನ್ದಾರರು ಅಲ್ಲಿಗೆ ಬಂದರು. ಆ ಏಣಿಕಾಲಿನವನನ್ನು ಮತ್ತೊಂದು ಎತ್ತಿನ ಕೂಡ ಜೋಡಿ ಹಾಕಿ ಗದ್ದೆ ಉಳುವುದಕ್ಕೆ ಹಾಕಬೇಕು ಎಂದು ಅವರು ತೀರ್ಮಾನ ಮಾಡಿಕೊಂಡಿದ್ದರು. ಆದರೆ ದೊಡ್ಡಿಯಲ್ಲಿ ಅದು ಇಲ್ಲ, ತಪ್ಪಿಸಿಕೊಂಡಿದೆ. ನೆರೆಯ ಹಳ್ಳಿಗಳಲ್ಲಿ ಎಲ್ಲಿಗಾದರೂ ಹೊರಟುಹೋಯಿತೋ ಎಂದು ನೋಡಿ ಹುಡುಕಲು ಆಳುಗಳನ್ನು ಕಳಿಸಿದ್ದಾರೆ.

ಈಗ ಅವರು ಎಲೆಅಡಕೆಯನ್ನೂ ಸಾವಧಾನವಾಗಿ ಮೆಲ್ಲುತ್ತ ಈ ಕಡೆ ಬಂದವರು ಇಲ್ಲಿ ದನದ ಮಂದೆ ಇರುವುದನ್ನು ಕಂಡು ಕಣ್ಣಾಡಿಸಿದ್ದಾರೆ.

ಹೌದು. ಏಣಿಕಾಲು ಈಗ ಅವರ ಕಣ್ಣಿಗೆ ಸಿಕ್ಕಿಬಿದ್ದಿದೆ.

"ಓಹೋ, ಆ ಕುಂಟು ಎತ್ತಿನ ಮೇಲೆ ಇದಕ್ಕೆ ಅಷ್ಟು ಪ್ರೀತಿಯೋ? ನಾನು ಎಲ್ಲೆಲ್ಲೂ ಹುಡುಕಲು ಹೇಳಿಬಂದೆ. ಅವರ ಕೆಲಸ ಹಾಳಾಯಿತು. ನಿನಗೆ ಚೆನ್ನಾಗಿ ಹೊಡೆತ ಬೇಕು" ಎಂದು ಕೂಗಿಕೊಂಡವರೇ ಆ ಬೇಲಿಯಲ್ಲಿದ್ದ ದಬ್ಬೆಯನ್ನು ಹಿಡಿದುಕೊಂಡರು. ಕೋಪದಿಂದ ಹುಣಸೇ ಮರದಡಿಗೆ ಏಣಿಕಾಲಿನವನ ಮೇಲೆ ಪ್ರಹಾರ ಮಾಡಲು ಧಾವಿಸಿಬಂದರು.

ಆ ಸಮಯದಲ್ಲಿ ಎಲ್ಲಿಂದಲೋ ಒಂದು ನಾಯಿ ಆ ಜಮೀನ್ದಾರರನ್ನು ಕಚ್ಚಲು ಹಾರು ಬಂದಿತು. ಅದನ್ನು ನೋಡಿದರೆ ಅದು ಹುಚ್ಚು ನಾಯಿಯೇ ಸರಿ ಎಂದು

ಯಾರೂ ಹೇಳಬಹುದಿತ್ತು. ಜಮೀನ್ದಾರರು ಎಷ್ಟೇ ಪ್ರಯತ್ನಿಸಿದರೂ ಅದರ ಹಿಡಿತ ದಿಂದ ತಪ್ಪಿಸಿಕೊಳ್ಳಲು ಸಾಧ್ಯವಿಲ್ಲ ಎನ್ನುವ ಸ್ಥಿತಿ ಏರ್ಪಟ್ಟಿತು.

ಈಟಿಕೊಂಬಿನವನು ಧಡಾರನೆ ಮೇಲೆದ್ದವನೇ ಈಗ ಅದರ ಮೇಲೆ ಹರಿಹಾಯ್ದು ಆ ನಾಯಿ ತನ್ನನ್ನು ಕಚ್ಚುತ್ತಿದ್ದರೂ ಲಕ್ಷಿಸದೆ, ತನ್ನ ಕೊಂಬುಗಳನ್ನು ಮುಂದಕ್ಕೆ ನೀಡಿ, ತಿವಿದು, ಅದನ್ನು ಸಾಯಿಸಿಯೇ ಬಿಟ್ಟಿತು. ಈಗ ಅದಕ್ಕೆ ಅದೆಲ್ಲಿಂದಲೋ ಅಷ್ಟು ಶಕ್ತಿ ಬಂದಿತ್ತು. ಹಾಗೆ ಹೀಗೆ ಹೋರಾಡಿದ ಮೇಲೆ ಅದು ಕಣ್ಣುಗಳನ್ನು ಅರಳಿಸಿ ದೊಡ್ಡ ದಾಗಿ ಶ್ವಾಸವನ್ನು ಬಿಡುತ್ತ ಹಾಗೆಯೇ ನಿಂತುಬಿಟ್ಟಿತು,

ಏಣಿಕಾಲಿನವನೋ, ನಾಯಿ ಕಚ್ಚಿ ರಕ್ತ ಒಸರುತ್ತಿದ್ದ ಈಟಿಕೊಂಬಿನವನ ಕಾಲನ್ನು ನೆಕ್ಕತೊಡಗಿತ್ತು. ಅದಕ್ಕೆ ಆ ಗಾಯವನ್ನು ಗುಣಪಡಿಸುತ್ತೇನೆ ಎನ್ನುವ ಭಾವನೆಯೋ ಏನೋ?

ಹುಚ್ಚುನಾಯಿ ಕಡಿದ ಜಾಗವನ್ನು ಏಣಿಕಾಲಿನವನು ನೆಕ್ಕತೊಡಗಿದುದರಿಂದ, ಇನ್ನು ಮುಂದೆ ಅದಕ್ಕೂ ಹುಚ್ಚೇ ತಗಲುತ್ತದೆ ಎಂದು ಜಮೀನ್ದಾರರು ತೀರ್ಮಾನಿಸಿ ಬಿಟ್ಟರು.

ಇನ್ನು ಮೇಲೆ ಅದರಿಂದ ಅವರಿಗೆ ಯಾವ ವಿಧವಾದ ಪ್ರಯೋಜನವೂ ಇಲ್ಲ.

ಈ ಹೋರಾಟದಲ್ಲಿ, ಗದ್ದಲ ಆಗುತ್ತಲೇ, ಮಲಗಿದ್ದ ಉಳಿದ ಆ ಕೇರಳೀಯರಿಗೂ ಎಚ್ಚರವಾಗಿ ಹೋಯಿತು.

"ಏನು ವ್ಯಾಪಾರಿಗಳೇ, ಈಟಿಕೊಂಬಿನವನ ಜತೆಯೂ ನಿಮಗೆ ಬೇಕೋ?" ಎಂದು ಕೇಳಿದರು ಜಮೀನ್ದಾರರು.

"ನಿನ್ನೆಯೇ ನಾವು ಕೇಳಿದೆವು. ನೀವು ಕೊಡೋದಿಲ್ಲ ಎಂದಿರಿ."

"ಈವಾಗ ಕೊಟ್ಟುಬಿಡೋಣ ಎಂದು ತೀರ್ಮಾನ ಮಾಡಿದ್ದೀನಿ. ಏನು ಬೆಲೆ ಕೊಡುತ್ತೀರಿ ಹೇಳಿ?"

"ಅಷ್ಟೆ. ನೂರು. ಬೆಲೆಯಲ್ಲಿ ವ್ಯತ್ಯಾಸವಿಲ್ಲ."

"ಸರಿ, ತನ್ನಿ" ಎಂದವರೇ ಜಮೀನ್ದಾರರು ನೂರು ರೂಪಾಯಿಗಳನ್ನು ತೆಗೆದು ಕೊಂಡು ಜೇಬಿನಲ್ಲಿ ಹಾಕಿಕೊಂಡರು.

ಆ ಜೋಡಿ ಎತ್ತುಗಳು ದನದ ಮುಂದೆಯೊಂದಿಗೆ ರಾಷ್ಟ್ರೀಯ ಹೆದ್ದಾರಿಯಲ್ಲಿ ಕೇರಳದತ್ತ ಸಾಗಿದವು. ಫಳಾರ್ ಫಳಾರ್ ಎನ್ನುವ ಬಾರುಕೋಲಿನ ಸೆಳೆತದಿಂದಾಗಿ ಅವು ಬೇಗ ಬೇಗ ಹೆಜ್ಜೆಯನ್ನು ಎತ್ತಿಟ್ಟುವು.

ಏಣಿಕಾಲಿನವನಿಗೆ ಇದೊಂದೂ ಅರ್ಥವಾಗಲೇ ಇಲ್ಲ. ಆದರೆ ತನ್ನ ಗೆಳೆಯ ಹುಚ್ಚು ನಾಯಿಯ ಹಿಡಿತದಿಂದ ತಮ್ಮ ಯಜಮಾನರನ್ನು ಪಾರುಮಾಡಿದುದು ಅದಕ್ಕೆ ಅತೀವ ಹೆಮ್ಮೆಯೆನಿಸಿತ್ತು. ಜಮೀನ್ದಾರರು ತನ್ನನ್ನೂ ಮಾರಿಹಾಕಿರುವ ವಿಚಾರ ಅದಕ್ಕೆ

ತಿಳಿಯಲೇ ಇಲ್ಲ. ಅದನ್ನು ಒಂದು ಸಮಯ ನೆನೆದುಕೊಳ್ಳಬೇಕೆಂದರೂ ಅದಕ್ಕೆ ಅವಕಾಶವಾದರೂ ಎಲ್ಲಿದೆ?

ಹಿಂದಿನಿಂದ ಫಳಾರ್ ಫಳಾರ್ ಎನ್ನುವ ಬಾರುಕೋಲಿನ ಸೆಳಿತ ತಮ್ಮನ್ನು ಮುಂದಕ್ಕೆ ಸಾಗಿಸುತ್ತಿದೆ.

"ಇವೊತ್ತು ಒಳ್ಳೆಯ ವ್ಯಾಪಾರ" ಎಂದು ಆ ಕೇರಳಿಕಿಯರು ಮಾತಾಡಿಕೊಂಡು ತುಂಬಾ ಗೆಲುವಿನಿಂದ ಇದ್ದರು.

# ಪೆಟ್ಟಿಗೆ ಗಾಡಿ

ಇದೋ, ಈ ಹುಣಿಸೆಯ ಮರದಡಿಯಲ್ಲಿ, ಅಲ್ಲೊಂದು ಇಲ್ಲೊಂದು ಭಾಗಗಳು ಕಾಣೆಯಾಗಿ ಮುರಿದು ಬಿದ್ದಿದೆಯಲ್ಲ. ಈ ಗಾಡಿಯನ್ನು ನೋಡುವಾಗ ರತ್ನಸಾಮಿಗೆ ಹಳೆಯ ನೆನಪುಗಳು ಉಕ್ಕಿ ಬರುತ್ತವೆ. ಈ ಪೆಟ್ಟಿಗೆ ಗಾಡಿ—ಹೌದು, ಇದು ಪೆಟ್ಟಿಗೆ ಗಾಡಿಯೇ ಸರಿ, ದೊಡ್ಡ ಗಾಡಿ; ಮೈನರ್ ಗಾಡಿ. ಮೈನರ್ ಎಂದರೆ ಪ್ರಾಯಕ್ಕೆ ಬಂದದ್ದು ಅಲ್ಲ ಎನ್ನುವ ಅರ್ಥವಲ್ಲ. ಸಿರಿವಂತ ಪುತ್ರರನ್ನು 'ಮೈನರ್' ಎನ್ನುತ್ತಾರೆ ಅಲ್ಲವೆ? ಅಂಥ ಮೈನರಿಗಾಗಿ ಈ ಗಾಡಿ ಒಂದು ಕಾಲದಲ್ಲಿ ತಯಾರಾಗಿತ್ತು.

ಇದನ್ನು ನೋಡುವಾಗ, ಅವಳು ಆ ಕೋಮಲ ಸುಂದರಿ—ಆ ಮುಖ, ಕಣ್ಣುಗಳು, ಕಾಂತಶಕ್ತಿ ಇವೇ ನೆನಪಿಗೆ ಬರುತ್ತವೆ. ಬರೇ ನೆನಪು ಮಾತ್ರ ಏನು? ದುಃಖ, ಸಹಿಸಲಶಕ್ಯವಾದ ದುಃಖ.

ಅಯ್ಯೋ, ಯಾಕೆ ಈ ಗಾಡಿಯ ಭಾಗಗಳು ಇನ್ನೂ ಇಲ್ಲಿಯೇ ಬಿದ್ದಿವೆ? ಪೂರ್ಣವಾಗಿ ಇವು ಯಾಕೆ ನಾಶವಾಗಲಿಲ್ಲ? ಇದನ್ನು ಮಾಡಿದವನು ಕಾಲವಾಗಿದ್ದಾನೆ. ಈ ಗಾಡಿಯ ಸ್ವಂತದವರೂ ತೀರಿಕೊಂಡಿದ್ದಾರೆ. ಅವಳೂ ಇಲ್ಲ. ಜಗತ್ತಿನಲ್ಲಿ ಹೊಳೆಯುವ ಕಳಂಕ ಬತ್ತಿಹೋಗಿ ಅಥವಾ ಒಣಗಿ ಗಾಳಿಯೊಂದಿಗೆ ತೂರಿಯೇ ಹೋಗುತ್ತದೆ. ಕಳಂಕ ಎನ್ನುವಾಗ ರತ್ನಸಾಮಿಯ ನೆನಪು ಮೂಡುತ್ತದೆ.

ಕಳಂಕ? ಛೆ, ಹಾಗೆಂದು ಒಂದು ಇದೆಯೋ?

ಇದ್ದರೆ ಅದಕ್ಕೆ ನೆಲೆ ಯಾವುದು? ಯಾವುದನ್ನೂ ಅರಿಯದ ಸ್ವಭಾವದೊಂದಿಗೆ ಮಾನವರು ಜಗತ್ತಿಗೆ ಪ್ರವೇಶಿಸುತ್ತಾರೆ. ಅವರೆಲ್ಲ ಅದೆಲ್ಲಿಂದ ಬರುತ್ತಾರೋ ಏನು ಕತೆಯೋ? ಬರುತ್ತೇವೆ ಎಂದು ಮಾತ್ರ ಹೇಳಲು ಆದೀತೇ? ಈ ಮಾನವ ನೀರಿನ ಮೇಲೆ ಹೊಳೆಯುವ ನೀರ್ಗುಳ್ಳೆಯೇನು? ಒಂದೂ ಅರ್ಥವಾಗುತ್ತಿಲ್ಲ.

ಇದೆಲ್ಲವನ್ನೂ ತಿಳಿದವರು, ತಿಳಿದವರ ಹಾಗೇ ಮಾತಾಡುವವರು, ಇವರು ಹೇಳುವುವನ್ನೂ ನಂಬುವುದಕ್ಕೆ ಆಗುತ್ತಿಲ್ಲ, ಜಗತ್ತು ಮಿಥ್ಯೆಯೇ? ಸತ್ಯವೇ? ಮಿಥ್ಯೆಯಲ್ಲಿ ಕಳಂಕ ಅಂಟುವುದಿಲ್ಲ. ಮಿಥ್ಯೆಯೇ ಕಳಂಕವಷ್ಟೆ.

ಇನ್ನು ಜಗತ್ತು ಸತ್ಯವೋ? ಸತ್ಯಕ್ಕೆ ಕಳಂಕ ಇಲ್ಲ, ನಿಜ, ಹಾಗೆ ನೋಡುವುದಕ್ಕೆ ಹೋದರೆ ಈ ನೆಲ ಮಿಥ್ಯೆಯಿಂದಲೂ ಸತ್ಯದಿಂದಲೂ ಕೂಡಿಯೇ ಆಗಿದೆ.

ಹೊರಗೆ ಪ್ರಕಟವಾಗುವುದು ಮಿಥ್ಯೆ; ಒಳಗೇ ಇದ್ದು ಬೆಳಗುವುದು ಸತ್ಯ.

ಆ ಗಾಡಿಯನ್ನು ನೋಡಿದೊಡನೆ ರತ್ನಸಾಮಿಗೆ ಹೀಗೆ ಚಿಂತೆಯೂ ಆಧ್ಯಾತ್ಮ ಚಿಂತನೆಗಳೂ ತಲೆದೋರುತ್ತವೆ. ಆ ಹುಣಿಸೆಯ ಮರವೂ ಸಹ ಈಗ ಹೂಬಿಟ್ಟು

ಚಿಗುರಾಗಿರುವ ಕಾಲ ಕಳೆದು ನರೆತ ತಲೆಯುವನಂತೆ ಬೋಳಾಗಿ ನಿಂತಿದೆ. ಇದೇ ಪ್ರಪಂಚದಲ್ಲಿ ನಡೆಯುವ ಆಶ್ಚರ್ಯ; ಅದ್ಭುತ.

ಹೌದು, ಇದೇ ಹುಣಿಸೆಯ ಮರದಿಂದ ಕೆಳಗೆ ಬೀಳುವ ಹಣ್ಣುಗಳನ್ನು ಹೆಕ್ಕಿ, ಆಕೆ ಮುಗುಳ್ನಗೆಯೊಂದಿಗೆ ಹೋಗುವುದನ್ನು ಅವನು ನೋಡಿದ್ದಾನೆ, ಕೆಲವು ಸಮಯ ಅವಳಿಗೆ ಹೆಕ್ಕಿ ಕೊಡುವುದಕ್ಕೂ ಸಹಾಯಕನಾಗಿದ್ದಾನೆ. ಆವಾಗ ಮುಂದೆ ನಡೆಯುವ ಸಂಭವಗಳು ಅವರಿಗೆ ಹೇಗೆ ತಿಳಿಯಲು ಸಾಧ್ಯ? ಒಂದು ಸಮಯ ಅವಳಿಗೆ ತಿಳಿದಿದ್ದೀತೋ? ಮುಂದೆ ಹೀಗೆಯೇ ನಡೆಯುತ್ತದೆ ಎನ್ನುವ ಚಿಂತನೆ ಅವಳ ಹೃದಯದಲ್ಲಿ ಅಲೆಹಾಯ್ದಿರಬಹುದೋ ಹೇಗೆ?

ಇಲ್ಲ, ಒಂದು ದಿನವೂ ಇದು ಸಾಧ್ಯವಿಲ್ಲ. ಇದಂತೂ ದಿಟ.

ತೋಟದಲ್ಲಿ ಮೇಯುತ್ತಿರುವ ಹಸುವಿನೊಂದಿಗೆ ಕುಣಿದಾಡುತ್ತ ಹೆಜ್ಜೆಯಿಡುವ ಎಳೆಯ ಕರುವಿನಂತೆ, ಅವಳ ಪುಟ್ಟ ಮಗಳು ಸರಸು ಯಾವೊತ್ತೂ ತಾಯಿಯೊಂದಿಗೆ ಇದ್ದು ಶೋಭಿಸುತ್ತಿದ್ದುದನ್ನು ಈಗ ಹೇಗೆ ಮರೆಯಲು ಸಾಧ್ಯ?

ಆ ಹುಡುಗಿ, ಸರಸು, ಈವಾಗ ಎಲ್ಲಿ ಹೇಗೆ ಬಾಳುವೆ ನಡೆಸುತ್ತಿದ್ದಾಳೋ? ತಿಳಿಯಲಿಲ್ಲ. ಯಾರನ್ನು ಕೇಳಿದರೂ ಉತ್ತರವಿಲ್ಲ. ನೆರೆಹೊರೆಯವರು ಅಂದು ಇದ್ದವರು ಇಂದು ಯಾರೂ ಇಲ್ಲ. ಸುಮಾರು ಮೂವತ್ತು ವರ್ಷಗಳ ಅನಂತರ ಊರಿಗೆ ಹಿಂದಿರುಗಿ ಬಂದರೆ....? ಪರಿಚಿತ ಮುಖಗಳು ಯಾರನ್ನೂ ಕಾಣೆ. ಊಹುಂ, ಇದೇ ಪ್ರಪಂಚ.

ಸುಂದರ ವಸ್ತು ನಾಶವಾಗುವುದಿಲ್ಲವೇ? ದೇವಬೊಂಬೆಯಂತೆ ಇದ್ದ ಅವಳು ಯಾಕೆ ಇಳಿದು ಹೋದಳು? ರಸ್ತೆಗೆ ಅಲಂಕಾರವೋ ಎನ್ನುವಂತಿದ್ದ ಈ ಗಾಡಿ ಯಾಕೆ ಹೀಗೆ ಛಿದ್ರವಾಗಿ ಬಿದ್ದಿದೆ? ಯಾವಾಗಲೂ ಹಸುರಾಗಿರುತ್ತಿದ್ದ ಈ ಹುಣಿಸೆಯ ಮರ ಸಹ ಹೀಗೆ ಬೋಳಾಗಿ ನಿಂತಿದೆಯಲ್ಲ! ಸೌಂದರ್ಯ ಶಾಶ್ವತವೋ? ಸುಳ್ಳು, ಸುಳ್ಳು, ಸುಳ್ಳು.

ಈ ಪೆಟ್ಟಿಗೆ ಗಾಡಿಯನ್ನು ತಯಾರು ಮಾಡಿದವನು ಸೋಮಾರಿ ಶಾಂತಪ್ಪ. ಈ ಮರದ ಕೆಳಗೇ ಈ ಗಾಡಿಯ ಕೆತ್ತನೆಯ ಕೆಲಸ. ಆ ಕಾಲದ ಕೆಲಸಗಾರರ ಈ ಕ್ರಮ ಈಗಲೂ ಇದೆಯೋ ಅಥವಾ ಬದಲಾವಣೆಯಾಗಿದೆಯೋ?

ರತ್ನಸಾಮಿಗೆ ಇವೆಲ್ಲ ತಿಳಿಯದು. ಇವೊತ್ತು ಅವನು ಅಲ್ಲಿಗೆ ಬಂದ. ಎಲ್ಲರಿಗೂ ಈಗ ಅವನು ಅನ್ಯನಂತೆ ಕಾಣುತ್ತಿದ್ದಾನೆ.

ಮೊದಲು ಈ ಊರಿನಲ್ಲಿ ಅವನು ಎಲ್ಲರಿಗೂ ಚಿರಪರಿಚಿತ. ಆ ಗ್ರಾಮದಲ್ಲಿ ಅವನನ್ನು ಮುದ್ದುಕುಮಾರ ಎಂದು ಹೇಳಿದರೂ ಹೇಳಬಹುದು. ಆಗ ಅವನು 'ರತ್ನ'. ಕೊನೆಗೆ 'ಜಾರಿದ ದೇವದೂತ'ನ ಹಾಗೆ ಅವನು ಈ ಊರನ್ನು ಬಿಟ್ಟು ತೆರಳಿದ. ಈಗ

ಎಲ್ಲಿಯಾದರೂ ಹಳೆಯ ಮುಖಗಳ ಪರಿಚಯ ಅವನಿಗೆ ಸಿಗಬಹುದೋ ಹೇಗೆ. ಇನ್ನು ಮೇಲಷ್ಟೇ ತಿಳಿಯಬೇಕು.

ಬಡಗಿ, ಕಮ್ಮಾರ, ಚಿನಿವಾರರಿಗೂ, ಮಡಿವಾಳ ಕ್ಷೌರಿಕರಿಗೂ ಆ ಕಾಲದಲ್ಲಿ ಯಾರೂ ಗ್ರಾಮದಲ್ಲಿ ಕೂಲಿ ಕೊಡುತ್ತಿರಲಿಲ್ಲ. ಕುಯಿಲಿನ ಕಾಲದಲ್ಲಿ ಅವರು ಧಾನ್ಯ ಗಳನ್ನು ಪಡೆಯುತ್ತಿದ್ದರು. ಹಬ್ಬ ಹರಿದಿನ ಇಂಥ ವಿಶೇಷ ಸಂದರ್ಭಗಳಲ್ಲಿಯೂ ಅವರಿಗೆ ವರಮಾನ ಇದ್ದಿತು. ನೊಗ, ಗಾಡಿ—ಇಂಥವನ್ನೆಲ್ಲ ತಯಾರುಮಾಡುವುದು ಬಡಗಿಗಳ ಕೆಲಸ. ಕೆಲವು ಸಂದರ್ಭಗಳಲ್ಲಿ ಅವರಿಗೆ ಪೂರಾ ಕೂಲಿಯೂ ಸಿಗುತ್ತಿತ್ತು.

ಕುಯಿಲಿನ ಕಾಲ, ಆ ಕಾಲ, ಈ ಕಾಲ ಎನ್ನದೆ ಶಾಂತಪ್ಪ ಯಾವಾಗಲೂ ಸೋಮಾರಿಯಾಗಿರುತ್ತಿದ್ದ. ಕೆಲಸ ಎಂದರೆ ಅವನಿಗೆ ಮೈಗಳ್ಳತನ. ಮನೆಗಳಿಗೆ ತನ್ನ ಭಾಗದ ಮಾಮೂಲನ್ನು ಕೇಳಲೂ ಹೋಗಲು ಅವನು ಸಿದ್ಧನಿಲ್ಲ, ಅವನ ಹೆಂಡತಿ ಮಕ್ಕಳು ಏನೋ ಭಿಕ್ಷೆ ಬೇಡುವವರ ಹಾಗೆ ವಸೂಲಿಮಾಡಿಕೊಂಡು ಬರಬೇಕು. ಗ್ರಾಮದ ಸಾರ್ವಜನಿಕ ಭೂಮಿಯಲ್ಲಿ ಅವನಿಗೂ ಸ್ವಲ್ಪ ಭಾಗ ಇದ್ದಿತು. ಈ ಎಲ್ಲ ಆದಾಯ ದಿಂದ ಅವರ ಸಂಸಾರ ಸಾಗುತ್ತಿತ್ತು.

ಶಾಂತಪ್ಪನಿಗೂ ಗುರುಮೂರ್ತಿಗೂ ಒಂದು ಸಂದರ್ಭದಲ್ಲಿ ಪೈಪೋಟಿ ನಡೆಯಿತು. ರಹಸ್ಯವೆಂದರೆ, ಶಾಂತಪ್ಪ ಕೆಲಸದ ಕಡೆ ಶ್ರದ್ಧೆ ಹರಿಸಲು ಗುರುಮೂರ್ತಿಯವರು ಹೂಡಿದ ಉಪಾಯವಿದು.

ಆ ಗ್ರಾಮದಲ್ಲಿ ಗುರುಮೂರ್ತಿ ದೊಡ್ಡ ಭೂಮಾಲಿಕರು. 'ದೊಡ್ಡ' ಎಂದರೆ ಅವರಿಗೆ ಸಾಕಷ್ಟು ಭೂಮಿಗಳಿದ್ದುವು ಎಂದರ್ಥವಲ್ಲ. ಆದರೆ ಕೊಂಕಣಚೇರಿ ಗ್ರಾಮದಲ್ಲಿ ಅವರೇ ಹೆಚ್ಚು ಭೂಮಿಯನ್ನು ಪಡೆದಿರುವವರು. ಅವರಿಗೆ ಅಲ್ಲಿ ಎರಡೂವರೆ ಎಕರೆ ಭೂಮಿ ಇದೆ. ಅಲ್ಲಿರುವವರೆಲ್ಲ ಸಾಮಾನ್ಯವಾಗಿ ಒಂದು ಎಕರೆಯವರು ಅಥವಾ ಅದೂ ಇಲ್ಲದವರು.

ಈ ಕಾರಣಕ್ಕಾಗಿ ಗುರುಮೂರ್ತಿಯವರನ್ನು ಗ್ರಾಮದದರು ಗೌರವಿಸುತ್ತಾರೆ ಎಂದರ್ಥವಲ್ಲ. ಸ್ವಭಾವದಲ್ಲಿಯೆ ಅವರು ಸಾತ್ವಿಕರು; ದೇಶಭಕ್ತರು. ಮೇಲೂ ಹೇಳಹೊರಟರೆ ವೇದಾಂತಿ ಎಂದೂ ಎನ್ನಬಹುದು. ಶಾಲೆಯಲ್ಲಿ ಹೆಚ್ಚಿಗೆ ಓದಿದವರಲ್ಲ. ಎರಡನೆಯ ತರಗತಿಯನ್ನು ಮಾತ್ರ ಮುಗಿಸಿದ್ದಾರೋ ಏನೋ! ಆದರೆ ಅವರ ಬೀರುವಿನ ತುಂಬಾ ಪುಸ್ತಕಗಳ ರಾಶಿ. ಅವು ಆಧ್ಯಾತ್ಮ ಮತ್ತು ಸ್ತೋತ್ರದ ಪುಸ್ತಕ ಗಳಾಗಿಯೇ ಇರುತ್ತಿದ್ದುವು. ಕತೆ, ಕಾದಂಬರಿಗಳು ಅವರಿಗೆ ಹಿಡಿಸುತ್ತಿರಲಿಲ್ಲ. ಸೂಕ್ಷ್ಮ ವಾದ ಕಲೆಯನ್ನು ಅಭ್ಯಾಸಮಾಡಿದ್ದರೆ ಅಂಥವು ರುಚಿಸುತ್ತಿದ್ದುವೋ ಏನೋ. ಆದರೆ ಅವೆಲ್ಲ ಈಗ ಅವರ ಪಾಲಿಗೆ ವ್ಯರ್ಥ.

ಸಿದ್ಧರು, ತಾಯುಮಾನವರು, ಪಟ್ಟಿಣತ್ತಾರ್ ಹಾಡುಗಳು, ಆಂಜನೇಯನ

ಪರಾಕ್ರಮ, ಗಣಪತಿ ಮಾಹಾತ್ಮ್ಯ, ತಿರುಪಿಳ್ಳೈಯಾಡರ್ ಪುರಾಣ—ಇಂಥ ಪುಸ್ತಕಗಳು ಅವರಲ್ಲಿ ಇದ್ದುವು. ಅವನ್ನು ಅವರು ಮತ್ತೆ ಮತ್ತೆ ಓದಿದ್ದಾರೆ. ಆದರೆ 'ಭಗವದ್ಗೀತೆ ವಚನ' ಅವರಿಗೆ ತುಂಬಾ ಪ್ರಿಯವಾದ ಪುಸ್ತಕ, ಆದರೆ ಆ ಪುಸ್ತಕವನ್ನು ಯಾರೋ ಎರವಲು ಪಡೆದು ಹೋದವರು ಹಿಂದಿರುಗಿಸಲೇ ಇಲ್ಲ. ಇದರಿಂದ ತಮಗೆ ಮುಂದೆ ದುರದೃಷ್ಟ ಕಾದಿದೆ ಎಂದೇ ಗುರುಮೂರ್ತಿ ಭಾವಿಸಿದರು.

ಕೇಳುವಾಗಲೆಲ್ಲ ಇಲ್ಲ ಇಲ್ಲ ಎಂದು ಹೇಳಿ ಕಾಲು ಅರ್ಧ ರೂಪಾಯಿಗಳನ್ನು ಶಾಂತಪ್ಪನಿಗೆ ಕೊಡುವವರೂ ಗುರುಮೂರ್ತಿಯೇ. ಹಾಗೆ ಕೊಡುವಾಗ ಅವರು ಅವನನ್ನು ಮೈಗಳ್ಳ ಎಂದು ಪರಿಹಾಸ್ಯ ಮಾಡುತ್ತಿದ್ದುದೂ ಉಂಟು.

ಗುರುಮೂರ್ತಿಯವರ ಮನೆಗೆ ಕಮಾನ ಸಹಿತ ದೇವರ ಪೆಟಾರಿಯನ್ನು ಮಾಡಿದವನೂ ಶಾಂತಪ್ಪನೇ. ಆದರೆ ಶಾಂತಪ್ಪನಿಗೆ ತಿಳಿಯದಂತೆ ಕುಟುಂಬದ ಶ್ರೇಯಸ್ಸಿಗಾಗಿ ಎಂದು ಗುರುಮೂರ್ತಿಯವರು ಆ ಪೆಟಾರಿಯ ಕೆಳಗಡೆ ನೆಲದಲ್ಲಿ ಕೆಲವು ನವರತ್ನಗಳನ್ನು ಹುದುಗಿಸಿದುದು ರತ್ನಸಾಮಿಗೆ ಮಾತ್ರ ತಿಳಿದಿದೆ.

ಯಾವ ವೃತ್ತಿಶಿಕ್ಷಣ ಶಾಲೆಯಲ್ಲಿಯೂ ಶಾಂತಪ್ಪ ತನ್ನ ವೃತ್ತಿಯನ್ನು ಕಲಿಯಲಿಲ್ಲ. ಆ ದಿನಗಳಲ್ಲಿ ಅಂಥ ಶಾಲೆಗಳು ತಾನೇ ಎಲ್ಲಿದ್ದುವು? ಅವನ ಕಣ್ಣುಗಳು ನೋಡಿದ್ದನ್ನು ಕೈಗಳು ಮಾಡಿ ಮುಗಿಸುತ್ತಿದ್ದುವು. ಹಾಗೆ ಹೇಳುವುದೂ ಸರಿಯಲ್ಲ. ಕಣ್ಣಿನಲ್ಲಿ ನೋಡಿದ ಮೇಲೆ ತನ್ನ ಕಲ್ಪನೆಯನ್ನೂ ಸೇರಿಸಿ ಅವನ ಕೈ ಚುರುಕಾಗಿ ಕೆಲಸಮಾಡುತ್ತಿತ್ತು.

"ಮೈಗಳ್ಳ ಶಾಂತಪ್ಪನಿಗೆ ಏನು ತಿಳಿದಿದೆ? ನೊಗ ಮಾಡುತ್ತಾನೆ. ಗಾಡಿಚಕ್ರ ಮಾಡುತ್ತಾನೆ. ಅದು, ಇದು—ಹೀಗೆ ಆದರೆ ಸೊಗಸಾಗಿ ಒಂದು ಪೆಟ್ಟಿಗೆ ಗಾಡಿಯನ್ನು ಮಾಡಲು ಸಾಧ್ಯವಾಗುತ್ತದೆಯೋ?" ಎಂದು ಸವಾಲು ಹಾಕಿದರು ಗುರುಮೂರ್ತಿ.

ಶಾಂತಪ್ಪ ಈ ಸವಾಲನ್ನು ಒಪ್ಪಿಕೊಂಡು ಅದನ್ನು ಎದುರಿಸಲು ಸಿದ್ಧನಾದ.

ಮರದ ಹಲಗೆಗಳನ್ನೂ ಅದರೊಂದಿಗೆ ಮೊಳೆ, ಮೇಣದ ಬತ್ತಿ, ರಟ್ಟು ಇತ್ಯಾದಿ ಸಾಮಗ್ರಿಗಳನ್ನೂ ಗುರುಮೂರ್ತಿಯೇ ತೆಗೆದುಕೊಟ್ಟರು. ಅವನ ಸಹಾಯಕ್ಕೆ ಕೆಲವು ಆಳುಗಳನ್ನೂ ನಿಯಮಿಸಿದರು. ಅವರಿಗೆಲ್ಲ ತಾವೇ ಕೂಲಿಮಾತಾಡಿದರು.

ಶಾಂತಪ್ಪ ಮಾತ್ರ ಕೂಲಿಯನ್ನು ತೆಗೆದುಕೊಳ್ಳಲಿಲ್ಲ. ಅವರ ಬಳಿ ಅವನು ಸಂಬಳಕ್ಕೆ ಕೈಯೊಡ್ಡುವುದೇ? ಅವರೂ ಅವನೂ ಸಮಸಮ ಗೆಳೆಯರ ಹಾಗೆ ಇದ್ದಾರೆ, ಈಗ ಅವರು ಕೊಡುವ ಹಣಕ್ಕಿಂತ "ಭೇಷ್ ಶಾಂತಪ್ಪ, ನನ್ನ ಸವಾಲನ್ನು ಎದುರಿಸಿ ಜಯಶೀಲನಾದೆ" ಎಂದಷ್ಟೇ ಹೇಳಿದರೆ ಸಾಕಲ್ಲ.

ಯಾವ ಸಮಯದಲ್ಲಿಯೂ ಗುರುಮೂರ್ತಿಯವರೆ ಮನೆಯಲ್ಲಿ ಶಾಂತಪ್ಪನಿಗೆ ಉಪಚಾರ ನಡೆದುಕೊಂಡೇ ಇದೆ. ಇನ್ನು ಈಗ, ಅವರ ಮುಖ್ಯವಾದ ಒಂದು ಕೆಲಸ

ಆಗುವಾಗ ಕೇಳಬೇಕೇ? ಕಾಫಿ ತಿಂಡಿ ಊಟ ಎಲ್ಲವೂ ಅವನು ಕುಳಿತು ಕೆಲಸಮಾಡುವ ಸ್ಥಳದದ್ದಿಯೇ. ಅವನಿಗೆ ಬೇರೆ ವಿಷಯಗಳ ಬಗ್ಗೆ ಲಕ್ಷ್ಯವಿಲ್ಲ. ಹಸಿದು ಕೆಲಸಮಾಡುವುದೂ ಅವನಿಗೆ ಇಷ್ಟವೇ. ವಾಸ್ತವವಾಗಿ ಬಿಸಿಬಿಸಿಯಾಗಿ ಅವನಿಗೆ ಏನೂ ರುಚಿಸುವುದೇ ಇಲ್ಲ. ಕೆಲಸ ಮುಗಿದ ಮೇಲೆ ಏನಾದರೂ ಹಿಡಿ ಬಾಯಿಗೆ ಹಾಕುವ ಅಭ್ಯಾಸ.

ಪೆಟ್ಟಿಗೆ ಗಾಡಿ ಭರದಿಂದ ತಯಾರಾಗುತ್ತ ಇತ್ತು. ಇನ್ನು ನಾಲ್ಕು ತಿಂಗಳಲ್ಲಿ ಗುರುಮೂರ್ತಿಯವರ ಬಂಧುಗಳಲ್ಲಿ ಒಬ್ಬರಿಗೆ ನೆರೆಯ ಹಳ್ಳಿಯಲ್ಲಿ ಮದುವೆ. "ಆ ಮದುವೆಗೆ ನನ್ನ ಗಾಡಿಯಲ್ಲಿಯೇ ಕುಳಿತು ಹೋಗುವಿರಂತೆ" ಎಂದ ಶಾಂತಪ್ಪ. ಹೇಳಿದ ಹಾಗೆ ಆ ಗಾಡಿಯನ್ನೂ ಅವನು ಸಿದ್ಧಗೊಳಿಸಿದ.

ಸುತ್ತಲೂ ಗಾಜಿನ ಚಚ್ಚೌಕವಾದ ಮಣಿಗಳು. ಆ ಗಾಡಿಗೆ ನೀಲವರ್ಣವನ್ನು ಬಳಿದದ್ದಾಯಿತು. ಅಷ್ಟು ಮಾತ್ರವಲ್ಲ, ಅದಕ್ಕೆ ಹಳದಿ ಕೆಂಪು ಬಣ್ಣಗಳಲ್ಲಿ ಹಲ ಬಗೆಯ ಚಿತ್ರಗಳೂ ಕೂಡ. ಅವನಿಗೆ ಬಡಗಿ ಕೆಲಸವಲ್ಲದೆ ಚಿತ್ರಕಲೆಯೂ ತಿಳಿದಿದೆ.

"ಭೇಷ್, ಪೆಟ್ಟಿಗೆ ಗಾಡಿ ತುಂಬಾ ಚೆನ್ನಾಗಿದೆ. ನೀನು ಒಳ್ಳೆಯ ಕೆಲಸಗಾರ" ಎಂದು ಹೊಗಳಿದರು ಗುರುಮೂರ್ತಿ.

ಶಾಂತಪ್ಪ ಮೀಸೆ ಬಿಟ್ಟಿರಲಿಲ್ಲ, ನಿಜ. ಆದರೆ ಆ ಜಾಗದ ಮೇಲೆ ಈಗ ಅವನು ಬೆರಳುಗಳನ್ನಾಡಿಸಿದ.

ಹೀಗೆ ಆ ಗಾಡಿ ಸಿದ್ಧವಾದಾಗ ಸರಸು ಚಿಕ್ಕ ಮಗುವೇನೂ ಅಲ್ಲ, ಅವಳಿಗೆ ಆಗ ವಯಸ್ಸು ಹನ್ನೊಂದು. ಆದರೆ ಅವಳದು ವಯಸ್ಸಿಗೆ ಮೀರಿದ ಬೆಳವಣಿಗೆ. ಆ ಮೇಲೆ ಅವಳ ತಾಯಿ ಶಿವಕಾಮಿಗೆ ಮಕ್ಕಳಾಗಲೇ ಇಲ್ಲ. ಒಂದು ಗಂಡು ಮಗುವಾದರೂ ಅವರಿಗೆ ಆಗಬೇಡವೇ? ದೇವರ ಕೀಟಲೆ. ಆಗಿದ್ದರೆ . . . . ಆಗಿದ್ದರೆ . . . . ಅಯ್ಯೋ, ಅದರ ಕಲ್ಪನೆಯೇ ರೋಮಾಂಚವಾಗುತ್ತಿದೆ.

ರತ್ನಸಾಮಿಯ ತಂದೆ ಆ ಊರಿಗೆ ಉಪಾಧ್ಯಾಯರಾಗಿ ಬಾರದೆ ಹೋಗಿದ್ದರೆ ಏನಾಗುತ್ತಿತ್ತು? ಎಷ್ಟೋ ಊರುಗಳಲ್ಲಿ ಶಾಲೆಗಳೇ ಇಲ್ಲ. ಇಲ್ಲಿ ಇಲ್ಲ ಎಂದು ಯಾರು ಅತ್ತು ಕರೆವವರು? ಇಲ್ಲಿ ಒಂದು ಶಾಲೆ ಇಲ್ಲದೇ ಇರುತ್ತಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತು?

ತನ್ನ ತಂದೆ ಉಪಾಧ್ಯಾಯರಾಗಿ ಇಲ್ಲಿಗೆ ಬಂದುದರಿಂದ ರತ್ನಸಾಮಿಯೂ ಬರಬೇಕಾಯಿತು. ಗುರುಮೂರ್ತಿಯವರೊಂದಿಗೆ ತಮ್ಮನ ಹಾಗೆ ಇದ್ದು ಸ್ನೇಹವನ್ನು ಬೆಳೆಸಬೇಕಾಯಿತು. ಅವರೋ ಮಹಾ ವೇದಾಂತಿ. ಅವರ ಮಾತುಗಳಿಗೂ ವಿಚಿತ್ರವಾದಗಳಿಗೂ ಅವನು ಸರಿಯಾಗಿ ಉತ್ತರ ನೀಡಿದರೆ ಅವರಿಗೆ ಅವರಿಂದ ತೃಪ್ತಿ. ಆಟಗಳಲ್ಲಿಯೂ ಗುರುಮೂರ್ತಿ ಹಿಂದೆ ಸರಿದವರಲ್ಲ. ಇಸ್ಪೀಟು ಆಡುತ್ತ ಅವನೂ ಅವರು ಕುಳಿತುಕೊಂಡರೆ ಅವನ ಕೈಚಳಕಕ್ಕಾಗಿ ಅವರಿಂದ ಶಹಭಾಸ್‌ಗಿರಿ. "ರತ್ನ

ತುಂಬಾ ಬುದ್ಧಿಶಾಲಿಯೋನೋ ಹೌದು, ಆದರೆ ಅದರಲ್ಲಿ ಏನೋ ಸ್ವಲ್ಪ ಎಡವಟ್ಟು" ಎನ್ನುವರು ಗುರುಮೂರ್ತಿ.

ಒರಟು ಕೆಲಸಗಳಿಗೂ ಗುರುಮೂರ್ತಿ ರತ್ನಸಾಮಿಯನ್ನು ಅಪೇಕ್ಷಿಸುವರು. ಅವರೇನು? ಅವರ ಪತ್ನಿ ಶಿವಕಾಮಿಯೂ ಹೇಳಿಕಳಿಸುವಳು. ಬಾವಿಯಲ್ಲಿ ಬಿಂದಿಗೆ ಬಿದ್ದುಹೋದರೆ ನೀರಲ್ಲಿ ಮುಳುಗಿ ಅದನ್ನು ಎತ್ತಿ ತರಬೇಕೆ? ಆ ತೆಂಗಿನ ಮರವನ್ನು ಹತ್ತಿ ನಾಲ್ಕು ತೆಂಗಿನಕಾಯನ್ನು ಕೆಳಗೆ ಬೀಳಿಸಬೇಕೆ? ಕುಣಿದಾಡುವ ಮಲೆ ಹೋರಿಗಳನ್ನು ಒಂದು ಹತೋಟಿಗೆ ತಂದು ಗಾಳಿಸವಾರಿ ಮಾಡಬೇಕೆ? ಎಲ್ಲದಕ್ಕೂ ರತ್ನಸಾಮಿ ಸಿದ್ಧ.

ಹೌದು. ಹೀಗೆ ಅವನು ಒಳ್ಳೆಯ ಗಾಡಿ ಸಾರಥಿಯಾದುದರಿಂದಲೇ ಈ ವಿಪತ್ತು ಏರ್ಪಟ್ಟಿತು.

ಗಾಡಿ ಸಿದ್ಧವಾಯಿತು. ಮದುವೆಗೆ ಹೊರಡುವ ಹಿಂದಿನ ದಿನವಲ್ಲ, ಅದರ ಹಿಂದಿನ ದಿನ. ಶಿವಕಾಮಿ ಒಂದು ಬಿಂದಿಗೆಯನ್ನು ತೆಗೆದುಕೊಂಡು ಕುಡಿಯುವ ನೀರನ್ನು ತರಲು ಬಾವಿಗೆ ಹೊರಟಳು. ಊರ ಜನರ ಸೌಕರ್ಯಕ್ಕಾಗಿ ಈವಾಗ ಆ ಬಾವಿಗೆ ಪಂಪನ್ನು ಹಾಕಿಸಿದ್ದರು. ಆದುದರಿಂದ ಆಕೆ ಹಗ್ಗವನ್ನು ತೆಗೆದುಕೊಂಡು ಹೋಗಲಿಲ್ಲ. ಆಕೆಯ ನಡುವಿನಲ್ಲಿ ಬಿಂದಿಗೆ. ಎಡಕೈ ಅದನ್ನು ಬಳಸಿದೆ. ಮೆಲ್ಲಮೆಲ್ಲಗೇ ಆಕೆ ಬಾವಿಯತ್ತ ಹೆಜ್ಜೆಹಾಕಿದಳು.

"ರತ್ನ, ನೋಡಿದೆಯಾ, ನನ್ನ ಹೆಂಡತಿಯನ್ನು! ಬಾಲಕೃಷ್ಣನನ್ನು ಹೊತ್ತ ಯಶೋದೆಯನ್ನು! ಪಾಪ, ಗಂಡು ಮಗು ಆಗಲಿಲ್ಲ ಎಂದು ಈ ಯಶೋದೆಗೆ ತುಂಬ ದುಃಖವಾಗಿದೆ" ಎಂದರು ಗುರುಮೂರ್ತಿ.

ಪತ್ನಿಯನ್ನು ಹಾಗೆ ಪರಿಹಾಸ್ಯ ಮಾಡುವುದರಲ್ಲಿ ಅವರಿಗೆ ಒಂದು ಬಗೆಯ ತೃಪ್ತಿ. ಆದರೆ ಅವಳ ಮನಸ್ಸಿನ ದುಗುಡವನ್ನು ಅವರು ಇನ್ನೂ ಸರಿಯಾಗಿ ತಿಳಿದ ಹಾಗೆ ಕಾಣಲಿಲ್ಲ, ದೇಹದಲ್ಲಿ ಕಾವೇರುತ್ತಿರುವ ಆ ಬೆಂಕಿಯನ್ನು ಪಾಪ ಅವರು ಎಲ್ಲಿ ಕಂಡು ಹಿಡಿಯಲು ಸಾಧ್ಯವಿದೆ?

"ನಿನಗೆ ಇನ್ನು ಮುಂದೆ ಗಂಡು ಮಗು ಆಗುವುದಿಲ್ಲ" ಎಂದು ಈಶ್ವರ ಅವರಿಗೆ ಕನಸಿನಲ್ಲಿ ತಿಳಿಸಿದನಂತೆ. ಶಿವಕಾಮಿಯೊಂದಿಗೆ ಇದನ್ನು ಹೇಳಿ ಸ್ಪಷ್ಟಪಡಿಸಿದ್ದು ಆಗಿದೆ ಎನ್ನುತ್ತ ನಗೆಯಾಡುತ್ತಾರೆ ಗುರುಮೂರ್ತಿ. ಏನು ದೌರ್ಭಾಗ್ಯ? ನಿರಾಸೆ ಎನ್ನುವುದು ಬೂದಿಯಾದ ಬೆಂಕಿಯಲ್ಲ ಎನ್ನುವ ಸತ್ಯ ಅವರಿಗೆ ಹೊಳೆದಿಲ್ಲ. ಅದು ಬೂದಿಮುಚ್ಚಿದ ಕೆಂಡ. ಗಾಳಿ ಬೀಸಿದರೆ ಮತ್ತೆ ಜ್ವಾಲೆ ಏಳುತ್ತದೆ. ಜ್ವಾಲೆ ಬೀಸಿಯೇ ಬೀಸಿತಲ್ಲ. ಆ ಬೆಂಕಿ ಇನ್ನೂ ಸಹ ಧಗಧಗಿಸುತ್ತಿದೆಯಲ್ಲ.

ಮದುವೆಗೆ ಹೊರಟದ್ದು ಆಯಿತು. ಬೀದಿಯಲ್ಲಿದ್ದ ಎರಡು ಮೂರು ಗಾಡಿ

ಗಳನ್ನೂ ಸಹ ಕಟ್ಟಿದರು. ಅವರು ಇವರು ಬಂಧುಗಳು ಎಲ್ಲ ಗಾಡಿಗಳಲ್ಲಿಯೂ ಕುಳಿತರು.

ರತ್ನಸಾಮಿ ಇವರಿಗೆ ನೆಂಟನಲ್ಲ, ನಿಜ. ಆದರೆ ಗುರುಮೂರ್ತಿಯವರ ಕುಟುಂಬ ದಲ್ಲಿ ಅವನೂ ಒಬ್ಬನಾಗಿ ಸೇರಿಹೋಗಿದ್ದಾನೆ. ಶಾಂತಪ್ಪ ಒಂದು ಕಣ್ಣು, ರತ್ನಸಾಮಿ ಒಂದು ಕಣ್ಣು ಗುರುಮೂರ್ತಿಯವರಿಗೆ. ಈಗ ಇವರಿಬ್ಬರೂ ಅವರೊಂದಿಗೆ ಪ್ರಯಾಣ ಬೆಳೆಸಿದರು.

ರತ್ನಸಾಮಿಯ ತಂದೆಗೆ ಮಗ ಒಬ್ಬ ಉಂಡಾಡಿ ಗುಂಡ. ನಿಷ್ಪ್ರಯೋಜಕ. "ಹೇಳಿದ ಮಾತನ್ನು ಕೇಳದ ಮಗನನ್ನು ಎರಡು ಭಾಗ ಮಾಡಿದರೂ ಚಿಂತೆಯಿಲ್ಲ" ಎಂದು ಅವರು ಅವನನ್ನು ದೂಷಿಸುತ್ತಲೇ ಇರುತ್ತಾರೆ. ಆದರೆ ಅವನ ಎದುರಿಗಲ್ಲ, ಹಿಂದೆ.

ರೂಪವೋ? ರತ್ನಸಾಮಿಯದು ನೋಡುವಂಥದೇ. ನೋಡಿ ಮೆಚ್ಚುವಂಥದೇ. ಒಳ್ಳೆಯ ಮೈಬಣ್ಣ ಆತನದು. ಮಿರಮಿರ, ಮಿರಮಿರ ಎಂದು ಮಿಂಚುವ ಕಪ್ಪುಕೂದಲ ಮೊತ್ತವನ್ನು ಬಾಚಿ ಗಂಟುಹಾಕಿಕೊಳ್ಳುತ್ತಾನೆ. ಆ ಕಡೆ, ಈ ಕಡೆ ಒಂದು ಕೂದಲೂ ಹಾರಾಡದು. ಒಂದು ಬಾಚಣಿಗೆ ಸಹ ಅವನ ಬಳಿ ಯಾವಾಗಲೂ ಇದ್ದೇ ಇರುತ್ತದೆ. ಮಲ್ಲು ಜುಬ್ಬ, ಭುಜದಿಂದ ಕೆಳಗೆ ಇಳಿಬಿಟ್ಟ ಅಂಗವಸ್ತ್ರ, ಹುಬ್ಬುಗಳ ನಡುವೆ ಶ್ರೀ ಗಂಧದ ಬೊಟ್ಟು, ಯಾವಾಗಲೂ ಎಲೆ ಅಡಕೆ ಹಾಕಿಕೊಂಡು ಹೊಗೆಸೊಪ್ಪು ಜಗಿಯುತ್ತ ಇರುತ್ತಾನೆ.

ಆತ ಹಗ್ಗ ಹಿಡಿದು ಕುಳಿತ ಎಂದರೆ ಎಂಥ ಹಟಮಾಡುವ ಹೋರಿಗಳೂ ಅಡಗು ತ್ತವೆ. ಕುದುರೆಗಳ ಹಾಗೆ ಹಾರುತ್ತವೆ.

ಹಾಗೆಂದೇ ಅಂದು ಆತ ಈ ಪೆಟ್ಟಿಗೆ ಗಾಡಿಗೆ ಸಾರಥಿಯಾಗಿ ಕುಳಿತ. ಅದು ಎಂಥ ಘೋರ ಪರಿಣಾಮವಾಯಿತು!

ಗುರುಮೂರ್ತಿ ಈ ಪೆಟ್ಟಿಗೆ ಗಾಡಿಗೆಂದೇ ಒಂದು ಜತೆ ಸುಂದರವಾದ ಹೋರಿಗಳನ್ನು ಖರೀದಿಮಾಡಿದರು. ಅವುಗಳ ಕೊಂಬಿಗೆ ಬಣ್ಣ, ಕೊರಳಿಗೆ ಗೆಜ್ಜೆಸರ ಇತ್ಯಾದಿ ಅಲಂಕಾರ ಗಳೂ ಆಯಿತು. ಆ ಎತ್ತುಗಳಿಗೆ ತಕ್ಕ ಸಾರಥಿ ರತ್ನಸಾಮಿಯೇ. ಅವನ ಬಳಿ ಬಣ್ಣ ಬಣ್ಣದ ಗೊಂಡೆಯ ಬಾರುಕೋಲುಗಳೂ ಇವೆ. ಬಾರುಕೋಲಿನ ಸೆಳೆತಕ್ಕೂ ಎತ್ತುಗಳು ಗುಡುಗುಡೂ ಎಂದು ವೇಗವಾಗಿ ಹೆಜ್ಜೆಯನ್ನು ಹಾಕದಿದ್ದರೆ ಗಬಕ್ ಎಂದು ಆತ ತನ್ನ ಚಕ್ರಿಯನ್ನು ಬಿಚ್ಚುತ್ತಾನೆ. ಇದೇನೋ ಎಂದು ಆ ಎತ್ತುಗಳು ಆಗ ಗಣಗಣಗಣ ಎಂದು ಓಡುತ್ತವೆ. ಆಗ ರತ್ನಸಾಮಿಗೆ ಖುಷಿಯೋ ಖುಷಿ.

"ರತ್ನಸಾಮೀ, ಬಾರುಕೋಲಲ್ಲಿ ಹೊಡೆದೂ ಹೊಡೆದೂ ಎತ್ತುಗಳಿಗೆ ಬಾಸುಂಡೆ ಬರಿಸಬೇಡ. ಹಾಗೇ ಬೆದರಿಸಿ ಓಡಿಸು" ಎಂದರು ಗುರುಮೂರ್ತಿ.

"ಆ ಚಿಂತೆ ನೀವು ಮಾಡಬೇಡಿ" ಎಂದು ರತ್ನಸಾಮಿ ಉತ್ತರ ಕೊಟ್ಟಿದ್ದ.

ಆ ಸುಂದರವಾದ ಪೆಟ್ಟಿಗೆ ಗಾಡಿಗೆ ರತ್ನಸಾಮಿ ಈಗ ಸಾರಥಿಯಾಗಿದ್ದನಷ್ಟೆ. ಆ ಗಾಡಿಯಲ್ಲಿ ಕುಳಿತಿದ್ದವರೆಲ್ಲ ಸುಂದರಿಯರೇ.

ಗುರುಮೂರ್ತಿಯವರಿಗೆ ಈ ಗಾಡಿಯಲ್ಲಿ ಜಾಗ ಸಾಲದೆ ಹಿಂದೆ ಮತ್ತೊಂದು ಗಾಡಿಯಲ್ಲಿ ಕುಳಿತಿದ್ದರು. ಗಾಡಿಯಲ್ಲಿ ಮುಂಭಾರ ಹಿಂಭಾರ ಸರಿಮಾಡಲು ಶಿವಕಾಮಿ ಮುಂದುಗಡೆ ಬಂದು ಕುಳಿತಿದ್ದಳು. ಪೆಟ್ಟಿಗೆ, ಹಾಸಿಗೆ ಇತ್ಯಾದಿಗಳೊಡನೆ ಇನ್ನೂ ಇಬ್ಬರು ಹೆಂಗಸರು ಆ ಗಾಡಿಯಲ್ಲಿದ್ದರು. ದಪ್ಪಗಿದ್ದ ಒಬ್ಬ ಹೆಂಗಸು ಮಧ್ಯಭಾಗದಲ್ಲಿ ಕುಳಿತಿದ್ದಳು. ಅವಳು ಶಿವಕಾಮಿಗೆ ಸಂಬಂಧವಾಗಬೇಕು, ಕೊಂಚ ಬಾಯಿಹರಟೆ.

ಗಾಡಿಯಲ್ಲಿದ್ದ ಮೂವರಲ್ಲಿ ಶಿವಕಾಮಿಯೇ ಹೆಚ್ಚು ಸುಂದರಿ. ಅವಳಿಗೆ ಸ್ವಲ್ಪ ಚಚ್ಚೌಕವಾದ ಮುಖ. ಆ ಮುಖವೋ ಗುಲಾಬಿ ಬಣ್ಣ. ಸುರುಳಿ ಸುರುಳಿಯಾದ ಕೇಶರಾಶಿ ಯಾವನೋ ಚಿತ್ರಕಾರ ಬಿಡಿಸಿದ ಚಿತ್ರದಂತೆ ಮನೋಹರವಾಗಿದೆ.

ಶಿವಕಾಮಿಗೆ ಅಂಥ ವಯಸ್ಸಾಗಿಯೂ ಇಲ್ಲ. ಇಪ್ಪತ್ತೇಳೋ ಇಪ್ಪತ್ತೆಂಟೋ. ಆಕೆ ನೀಳವಾಗಿ ಜಡೆ ಹೆಣೆದು ಹೂಗೊಂಚಲನ್ನು ಮುಡಿದಿದ್ದಳು. ಎರಡು ಹುಬ್ಬುಗಳ ನಡುವೆ ಹಸಿರು ಚುಚ್ಚಿಸಿಕೊಂಡಿದ್ದಳು. ಅದು ಮುಚ್ಚಿಕೊಳ್ಳದಂತೆ ಅದಕ್ಕೆ ಸ್ವಲ್ಪ ಮೇಲೆ ಗುಂಡಾದ ಕುಂಕುಮ ಬೊಟ್ಟು. ಜರಿಯಂಚಿನ ಕೆಂಪು ಕುಪ್ಪಸ. ಕಪ್ಪುಬಣ್ಣದ ರೇಶ್ಮೆ ಸೀರೆ. ಮೈಮೇಲೆ ತುಂಬಾ ಒಡವೆಗಳು. ಕೊರಳಿನಲ್ಲಿ ಎರಡೆಳೆ ಚಿನ್ನದ ಸರ. ಮೂಗುಬೊಟ್ಟು. ಬಳೆ ಇತ್ಯಾದಿ.

"ಬ್ರೂ ಬ್ರೂ ಬ್ರೂ ಬ್ರೂ ಹೈ" ಎನ್ನುತ್ತ ರತ್ನಸಾಮಿ ಉತ್ಸಾಹದಿಂದ ಗಾಡಿಯನ್ನು ಓಡಿಸಿದ. ಬಲಗಡೆ ಎತ್ತು ಸ್ವಲ್ಪ ನಿಧಾನವಾಗಿ ಹೆಜ್ಜೆಹಾಕುವ ಹಾಗೆ ಅವನಿಗೆ ಅನ್ನಿಸಿತು, ಅವನ್ನು ಎಡಗಡೆಗೆ ಬದಲಾಯಿಸೋಣವೇ ಎಂದೂ ಯೋಚಿಸಿದ, ಇಲ್ಲ, ಈಗ ಎಲ್ಲ ಸರಿಹೋಗಿದೆ. ಎತ್ತುಗಳೂ ಉತ್ಸಾಹದಿಂದ ಹೆಜ್ಜೆಯನ್ನು ಹಾಕುತ್ತ ಇವೆ.

ಗಾಡಿಗಳು ಸಾಗಿದುವು. ಪೆಟ್ಟಿಗೆ ಗಾಡಿಯೇ ಇವೆಲ್ಲದಕ್ಕೆ ಮುಂದೆ. ಹಿಂದಿನ ಗಾಡಿಗಳು ಇದನ್ನು ಹಿಂಬಾಲಿಸಿ ಬರಲು, ಅಂತರ ಜಾಸ್ತಿಯಾಗದಿರಲು., ರತ್ನಸಾಮಿ ಮೂಗುದಾರವನ್ನು ಬಲವಾಗಿ ತೂಯ್ದು ಸರಿಪಡಿಸಿಕೊಳ್ಳುತ್ತಿದ್ದ. ದಾರಿ ಸೊಗಸಾಗಿದೆ, ಗಾಡಿ ಚೆನ್ನಾಗಿದೆ. ಒಳಗೆ ಕುಳಿತವರಿಗೆ ಇದರಿಂದ ತುಂಬಾ ಉತ್ಸಾಹ.

ಅಂಥ ಉತ್ಸಾಹದಿಂದ ಆ ಹೆಂಗಸರು ಪಳಪಳಪಳ ಎಂದು ಏನೇನೋ ಮಾತಾಡಿಕೊಂಡಿದ್ದರು. ರತ್ನಸಾಮಿಯ ಕಿವಿಗಳಿಗೂ ಆ ಮಾತುಗಳು ಬೀಳುತ್ತ ಇವೆ.

ಆ ದಪ್ಪ ಹೆಂಗಸು ಶಿವಕಾಮಿಯನ್ನು ಏನಾದರೂ ಪರಿಹಾಸ್ಯ ಮಾಡಿಕೊಂಡೇ ಇದ್ದಳು. ಶಿವಕಾಮಿಗೆ ಒಂದೇ ಮಗುಗಿಯಲ್ಲವೇ? ಇದರಿಂದ ಅವಳು ದೊಡ್ಡ [illegible]. ಒಂದೇ ಹೂಬಿಟ್ಟಿದ್ದು ಸರಿಯಾದ ಮರ ಆಗುವುದಿಲ್ಲವಂತೆ. ಕನಿಷ್ಟಪಕ್ಷ

ಒಂದು ಗಂಡು ಒಂದು ಹೆಣ್ಣು ಇಷ್ಟಾದರೂ ಇದ್ದರೇ ಅವಳು ನಿಜವಾಗಿ ತಾಯಿ ಆಗುತ್ತಾಳಂತೆ. ಅದೂ ಹೇಗೆ:

"ಗುಲಾಬಿಯ ಹಾಗೆ ಒಂದು ಹುಡುಗಿ, ರತ್ನದ ಹಾಗೆ ಒಬ್ಬ ಮಗ."

ರತ್ನಸಾಮಿಗೆ ಈಗ ವಿಚಿತ್ರ ಭಾವ. ದಿಗ್ಭ್ರಮೆ. ಈ ಕಿಲಾಡಿ ಹೆಂಗಸು ಬೇಕೆಂದೇ ಕೈಸನ್ನೆಮಾಡಿ ಹೀಗೆ ಹೇಳುತ್ತಿದ್ದಾಳೋ? ಏನು ವಿಪರ್ಯಾಸ?

ಇದೇ ಸಮಯಕ್ಕೆ ಸರಿಯಾಗಿ ಶಿವಕಾಮಿಯ ಭುಜ ರತ್ನಸಾಮಿಯ ಭುಜದೊಂದಿಗೆ ಸ್ಪರ್ಶಿಸಿತು. ಅದು ಗಾಡಿ ಕುಲುಕಿ ಆದದ್ದೇ ಆಗಿರಬೇಕು. ಆದರೆ . . . ಆದರೆ . . . ಈಗ ಅವನ ದೇಹ ಹೇಗೆ ನಡುಗಲಾರಂಭಿಸಿತು ! ಏನೇನೋ ಭಾವನೆಗಳು ಅವನ ಸುತ್ತ ಠೀಂಕಾರವಿಟ್ಟುವು.

ಮತ್ತೆ ಮತ್ತೆ ಹಾಗೆಯೇ, ಬೇಕೆಂದೋ ಇಲ್ಲವೋ ಆಕಸ್ಮಿಕವಾಗಿಯೋ. ಹೌದು, ಅದೇ ಪ್ರಾರಂಭ.

ಸ್ವಲ್ಪ ಹೊತ್ತು ಕಳೆದ ಮೇಲೆ ಆಕೆ ಮೆಲ್ಲಮೆಲ್ಲಗೆ ಮುಂದಕ್ಕೆ ಸರಿದಳು. ಪುನಃ ಪುನಃ ಸ್ಪರ್ಶ. ಇದು ಆಕಸ್ಮಿಕ ಅಲ್ಲ. ಬೇಕೆಂದೇ.

ರತ್ನಸಾಮಿಯ ದೇಹದಲ್ಲಿ ಈಗ ಮಿಂಚು ಹರಿಯುತ್ತ ಇದೆ. ಸರಿ—ತಪ್ಪು, ದ್ರೋಹ—ನಂಬಿಕೆ. ಕೆಡುಕು—ಒಳಿತು ಎಲ್ಲವೂ ಈಗ ಹಾರಿಹೋಗುತ್ತ ಇದೆ.

ಮತ್ತೆ ನಡೆದದ್ದೆಲ್ಲವೂ ಕನಸಿನ ಹಾಗೆ, ಆಮೇಲೆ ನಾಲ್ಕಾರು ದಿನಗಳು ರತ್ನಸಾಮಿ ಈ ಭೂಮಿಯಲ್ಲಿ ಜನಿಸಿದ ಮಾನವನಾಗಿಯೇ ಇರಲಿಲ್ಲ ! ತಾನೆಲ್ಲೋ ಮುಗಿಲೊಂದಿಗೆ ಮುಗಿಲಾಗಿ ಸಂಚರಿಸುತ್ತಿರುವಂತೆ ಭಾವನೆ. ಆ ದಿನಗಳಲ್ಲಿ ಅವನ ಮನಸ್ಸಿನಲ್ಲಿ ಉಂಟಾದ ಉಲ್ಲಾಸವನ್ನು ಹೇಗೆ ವರ್ಣಿಸಲು ಸಾಧ್ಯವಿದೆ ?

ಮದುವೆ ಮುಗಿದು ಎಲ್ಲರೂ ಊರಿಗೆ ಹಿಂದಿರುಗಿ ಬಂದದ್ದು ಆಯಿತು. ಆಗ ಆತ ಗಾಳಿಗೆ ಹಾರಲು ಬಿಟ್ಟ ಗಾಳಿಪಟದಂತೆ ತೇಲುತ್ತ ತನ್ನ ಮನೆಗೆ ನಡೆದ.

ರತ್ನಸಾಮಿ ಯಾವೊತ್ತೂ ತನ್ನ ಮನೆಯಲ್ಲಿ ಮಲಗಿದ್ದೇ ಇಲ್ಲ. ಗುರುಮೂರ್ತಿಯವರ ಮನೆಯ ವರಾಂಡದಲ್ಲಿಯೇ ಮಲಗುವುದು ರೂಢಿ. ಇದು ಏಳೆಂಟು ವರ್ಷಗಳಿಂದಲೂ ನಡೆದುಬಂದ ರೀತಿ. ಆ ವರಾಂಡದ ಮೇಲುಗಡೆ ಅಟ್ಟ, ಅದರ ತುದಿಯಲ್ಲಿ ಅವನ ಹಾಸಿಗೆ ಸುತ್ತಿಟ್ಟು ಇರುತ್ತದೆ.

ಅವೊತ್ತು ಸಂಜೆ ರತ್ನಸಾಮಿ ಕಾಲುಗಳನ್ನು ಎಳೆದುಹಾಕುತ್ತ ಆ ಮನೆಯ ಸಮೀಪ ಬಂದ.

ಅವನು ದೂರದಿಂದ ಬರುತ್ತಿದ್ದಂತೆಯೇ ಹೊರಪಡಸಾಲೆಯಲ್ಲಿ ಕುಳಿತಿದ್ದ ಗುರುಮೂರ್ತಿ ದಿಟ್ಟಿಸಿ ನೋಡಿದರು. ಯಾವಾಗಲೂ ಹಸನ್ಮುಖದಿಂದ ಸ್ವಾಗತಿಸುವ ಅವರ ಮುಖ ಇಂದು ಬೀಗಿದೆ, ರತ್ನಸಾಮಿ ಹತ್ತಿರ ಬರುತ್ತ ಬರುತ್ತ ಅವರ ಮುಖ

ಕ್ರೂರವಾಗತೊಡಗಿದೆ. ತಕ್ಷಣ ಅವರು ಎದ್ದವರೇ ಒಳನಡೆದು ಆ ಅಟ್ಟದ ತುದಿ ಯಲ್ಲಿದ್ದ ಹಾಸಿಗೆಯನ್ನು ಹೊರಗೆಳೆದು ತೂಕಿ ಎಸೆದರು. ಅದು ಅಲ್ಲಿಂದ ನಾಲ್ಕು ಅಡಿ ದೂರದಲ್ಲಿದ್ದ ರಸ್ತೆಯ ನಡುಮಧ್ಯದಲ್ಲಿ ಹೋಗಿ ಬಿದ್ದಿತು.

ರತ್ನಸಾಮಿ ದಿಗ್ಭ್ರಮೆಯಿಂದ ಆ ಮನೆಯ ಮುಂಭಾಗದಲ್ಲಿರುವ ಸಂಪಿಗೆ ಮರ ದಡಿಯಲ್ಲಿ, ಸಪ್ತನಾಡಿಗಳೂ ಸ್ತಬ್ಧವಾದಂತೆ ಹಾಗೆಯೇ ನಿಂತ. ಗುರುಮೂರ್ತಿ ಪಡಸಾಲೆಯಲ್ಲಿ ಸ್ವಲ್ಪ ಹೊತ್ತು ಎಲ್ಲಿಯೋ ನೋಡುತ್ತ ನಿಂತರು. ಬಳಿಕ ಅವರು ಆ ಸ್ಥಳವನ್ನು ಬಿಟ್ಟು ಹಠಾತ್ತನೆ ನಿರ್ಗಮಿಸಿದರು.

ಈಗ ಸ್ವಲ್ಪ ಸ್ವಲ್ಪವಾಗಿ ರತ್ನಸಾಮಿಗೆ ಸ್ವಯಂಪ್ರಜ್ಞೆ ಬರುತ್ತ ಇದೆ. "ಮಾನವ ಮೃಗ ಮಾನವ ಮೃಗ ಮಾನವ ಮೃಗ" ಎಂದು ಹೇಳಿಕೊಂಡೆ ಆತ ನಡೆದ. ನಡು ರಸ್ತೆಯಲ್ಲಿ ಬಿದ್ದಿದ್ದ ಹಾಸಿಗೆಯನ್ನು ಸುರುಳಿ ಸುತ್ತಿದ. ಹಸಿವೂ ದಾಹವೂ ದೇಹಕ್ಕೆ ಏರ್ಪಡುವಂತೆ ನಿಸರ್ಗದ ಅಬ್ಬನವನ್ನೂ ಸೆಳೆತವನ್ನೂ ಯಾರೂ ತಡೆಗಟ್ಟುವುದು ಸಾಧ್ಯವೇ ಇಲ್ಲ. ಬೆಂಕಿ, ಗಾಳಿ, ಆವಿ ಇವು ಹೇಗೆ ಕೆಲವು ಸಮಯ ಅಟ್ಟಹಾಸ ಮಾಡು ತ್ತದೆಯೋ ಹಾಗೆಯೇ ಮಾನವ ಮನಸ್ಸು. ಧರ್ಮ ಕರ್ಮ ನ್ಯಾಯ ಸತ್ಯ ಇವೆಲ್ಲ ವ್ಯಾವಹಾರಿಕವಾದ ಮಾತುಗಳೇ. ಮನಸ್ಸು ದಿಕ್ಕೆಟ್ಟು ಹರಿದಾಗ ಇವು ಯಾವುವೂ ಆ ವೇಗವನ್ನು ತಡೆಹಿಡಿಯಲಾರವು.

ಸತ್ಯ ಸಂಗತಿ ಏನು? ಮದುವೆಯ ಗಲಾಟೆಯಲ್ಲಿ ಅದು ಮುಗಿದುಹೋಯಿತು. ರತ್ನಸಾಮಿಯ ಜೀವನ ಪರ್ಯಂತವೂ ನಿರಂತರವಾಗಿ ವೇದನೆಯನ್ನು ನಟ್ಟ ಅದೇ. ಆದರೆ ಅದು ತಕ್ಷಣ ಅಲ್ಲಿಯೇ ಬಹಿರಂಗವೂ ಆಗಿಹೋಯಿತು. ನಾಲ್ಕು ಜನ ಗುಸು ಗುಸು, ಪಿಸು ಪಿಸು ಎಂದು ಮಾತಾಡಿಕೊಂಡರು.

ಇಂಥ ವಿಚಾರವನ್ನು ಯಾರೂ ಗುರುಮೂರ್ತಿಯವರಿಗೆ ನೇರವಾಗಿ ತಿಳಿಸಲಿಲ್ಲ, ನಿಜ. ಆದರೆ ಹೇಗೋ ಅವರಿಗೆ ಈ ಸುದ್ದಿ ತಿಳಿದುಹೋಯಿತು. ಅಂಬು ತಮ್ಮ ಎದೆಯಲ್ಲಿ ನಟ್ಟ ಹಾಗೆ ಅವರಿಗೆ ಇದರಿಂದ ವೇದನೆ.

ಆ ಸಂದರ್ಭದಲ್ಲಿ ಗುರುಮೂರ್ತಿ ಏನು ಮಾಡಲೂ ಶಕ್ತರಿದ್ದರು. ಆದರೆ ಅವರು ಸ್ವಭಾವದಲ್ಲಿ ತುಂಬಾ ಸಾಧು. ಅಲ್ಲದೆ ವೇದಾಂತಿ. ಅವರ ಮನಸ್ಸು ತನ್ನ ಸ್ಥಿಮಿತ ವನ್ನು ಕಳೆದುಕೊಳ್ಳಲಿಲ್ಲ.

ಆದರೆ ಗುರುಮೂರ್ತಿ ಅಂದಿನಿಂದ ಬೇರೆ ಬಗೆಯಾದರು. ಹೊಸ ಮಾನವ! ರತ್ನಸಾಮಿ ಅವರ ಕಣ್ಣಿಗೆ ಬೀಳದಂತೆ ಕಳ್ಳ ತಪ್ಪಿಸಿಕೊಂಡು ಅಡ್ಡಾಡಿದ.

ಶಿವಕಾಮಿ ಆ ಮೇಲೆ ಬಹಳ ದಿನಗಳು ಬದುಕಿರಲಿಲ್ಲ. ಆದರೆ ಅವಳ ಕೊನೆಯ ದಿನಗಳಲ್ಲಿ ಆಕೆ ಪಶ್ಚಾತ್ತಾಪದಿಂದ ಬೆಂದುಹೋಗಿದ್ದಳೆಂದು ಸುದ್ದಿಯಷ್ಟೇ ತಿಳಿದದ್ದು.

ಗುರುಮೂರ್ತಿ ಪತ್ನಿಯೊಂದಿಗೆ ಒಂದು ಕೆಟ್ಟ ಮಾತೂ ಆಡಲಿಲ್ಲ. ಬೈಯಲಿಲ್ಲ.

ಹೊರನಡೆ ಎಂದು ಗರ್ಜಿಸಲಿಲ್ಲ. ತಾವರೆ ಎಲೆಯ ಮೇಲಿನ ನೀರಿನ ಹಾಗೆ ಮನೆ ಯಲ್ಲಿದ್ದೂ ಇಲ್ಲವಾಗಿ ಅವರು ನಡೆದುಕೊಂಡರು, ಅಷ್ಟೆ.

ಶಿವಕಾಮಿ? ಅವಳು ಸಾಯುವುದಕ್ಕೆ ಮೊದಲೇ, ಗುರುಮೂರ್ತಿಯವರಿಗೆ ವಿಷಯ ತಿಳಿದಾಗಲೇ, ಅವಳು ಜೀವವಿದ್ದೂ ಸತ್ತ ಹೆಣವಾಗಿದ್ದಳು. ನಡೆದಾಡುವ ಶವವೇ ಆಗ ಅವಳು ಕಾಹಿಲೆ ಬಿದ್ದು ಗುಣವಾಗದ ದಿನದಿನಕ್ಕೆ ಹೆಚ್ಚುತ್ತ ಒಂದು ದಿನ ಕಣ್ಣು ಮುಚ್ಚಿಬಿಟ್ಟಳು.

ಇವೆಲ್ಲ ನಡೆದದ್ದೂ ಒಂದು ಆಶ್ಚರ್ಯವಿಲ್ಲ. ಆದರೆ ಸ್ಮಶಾನದಲ್ಲಿ ಅವರು ಹೇಳಿದ ಮಾತು ಇನ್ನೂ ರತ್ನಸಾಮಿಯ ಹೃದಯದಲ್ಲಿ ಹಚ್ಚಹಸಿರಾಗಿ ಉಳಿದಿದೆ, ಗರಗಸವಾಗಿ ಕೊಯ್ದಿದೆ.

"ನೀನು ಇನ್ನು ಮುಂದೆ ಪವಿತ್ರಳಾಗಿ ಹೋದೆ. ನಿನ್ನ ದುರ್ವರ್ತನಕ್ಕೆ ಪ್ರಾಯಶ್ಚಿತ್ತ ವಾಗಿ ಹೋಯಿತು. ಹೋಗು, ಸುಮಂಗಲಿಯಾಗಿ ಹೋಗಿದ್ದು ಬಾ. ಆದರೆ...... ಅವನು......ಏನೂ ಅರಿಯದ ಆ ಯುವಕ......

ಇಷ್ಟನ್ನು ಹೇಳಿ ಅವರು ಮಾತನ್ನು ನಿಲ್ಲಿಸಿಕೊಂಡರಂತೆ. ಮತ್ತೇನು ಹೇಳಲು ಅವರು ಭಾವಿಸಿದ್ದರೋ? ಅದನ್ನು ತಿಳಿಯುವ ಬಗೆ ಹೇಗೆ? ಆರು ತಿಂಗಳ ಹಿಂದೆ ಋಷಿಗಳ ಹಾಗೆ ಬಾಳಿದ ಅವರೂ ತೀರಿಕೊಂಡರಂತಲ್ಲ.

ಈ ಪೆಟ್ಟಿಗೆ ಗಾಡಿ? ಇದನ್ನು ಆ ಶಾಂತಪ್ಪ ಒಬ್ಬನನ್ನು ಬಿಟ್ಟು ಬೇರೆ ಯಾರೂ ಉಪಯೋಗಿಸಕೂಡದೆಂದು ಅವರು ಹೇಳಿದರಂತೆ. ಅವನೂ ಬಹಳ ದಿನಗಳ ವರೆಗೆ ದುಃಖದಿಂದ ಬೆಂದು ಹಾಸಿಗೆ ಹಿಡಿದಿದ್ದು ಅವರ ದಾರಿಯಲ್ಲಿಯೇ ಸಾಗಿದನಂತೆ.

ಈ ಅನಾಹುತಗಳೆಲ್ಲ ನಡೆದ ಮೇಲೆ ರತ್ನಸಾಮಿ ಆ ಊರನ್ನು ಬಿಟ್ಟು ಹೊರ ನಡೆದ. ಎಲ್ಲಿಯೆಲ್ಲಿಯೋ ಸುತ್ತಾಡಿದ. ದ್ರವ್ಯವನ್ನೂ ಸಾಕಷ್ಟು ಸಂಪಾದಿಸಿದ. ಆದರೆ ಮನಸ್ಸಿನ ಭಾರ ಮಾತ್ರ ಇನಿತೂ ಕಡಮೆಯಾಗಲಿಲ್ಲ. ಎಷ್ಟೋ ಹುಡುಗಿಯರು ಅವನನ್ನು ಮದುವೆ ಮಾಡಿಕೊಳ್ಳಲು ಮುಂದೆ ಬಂದರೂ ಆತ ಒಪ್ಪಲಿಲ್ಲ.

ಹೀಗೆ ಹೊರ ಪ್ರಪಂಚದಲ್ಲಿಯೇ ಸುತ್ತಾಡುತ್ತಿದ್ದಾಗ, ಒಂದು ಸಲವಾದರೂ ಕೊಂಕಣಚೇರಿಗೆ ಬರಬೇಕು ಎನ್ನುವ ಆಸೆ. ಆದರೆ ಅದರೊಂದಿಗೇ ಭಯವೂ ಸಹ.

ಕೊನೆಗೆ ಧೈರ್ಯಮಾಡಿ ಅವನು ಬಂದೇ ಬಿಟ್ಟ. ಬಂದರೆ ಈ ದೃಶ್ಯವನ್ನು ಕಾಣುವುದೆ? ಇದನ್ನು ಅವನು ಕನಸಿನಲ್ಲಿಯೂ ನಿರೀಕ್ಷಿಸಿರಲಿಲ್ಲ.

ಜೀವನದಲ್ಲಿ ಯಾರ ಕ್ಷಮೆಯೂ ರತ್ನಸಾಮಿಗೆ ಇಲ್ಲ, ಇದಕ್ಕೆ ಪರಿಹಾರ ಎಲ್ಲಿದೆ? ಪ್ರಾಯಶ್ಚಿತ್ತ? ಮನಸ್ಸಿಗೆ ಶಾಂತಿ ಎಂಬುದು ಇಲ್ಲವೇ ಇಲ್ಲ,

ಅವನ ಹೃದಯ ಒಂದು ದೃಢಸಂಕಲ್ಪವನ್ನು ಮಾಡಿತು. ಗುರುಮೂರ್ತಿಯವರ ಮನೆ ಯಾರಿಗೆ ಸೇರಿದ್ದರೂ ಸರಿ, ಏನು ಬೆಲೆಯಾದರೂ ಕೊಳ್ಳಲು ಆತ ಈಗ ಸಿದ್ಧ

ವಾಗಿದ್ದಾನೆ. ಆ ಗಾಡಿಯನ್ನು ರಿಪೇರಿ ಮಾಡಿಕೊಂಡು ತನ್ನ ಬಳಿಯಲ್ಲಿಯೇ ಇಟ್ಟು ಕೊಳ್ಳಲೂ ಆತ ಅಪೇಕ್ಷಿಸುತ್ತಾನೆ. ಅನಂತರ?

ಆ ಮನೆಯಲ್ಲಿ ಅವರೀರ್ವರ ಚಿತ್ರಪಟಗಳನ್ನೂ ತೂಗಹಾಕಿ ಅವರಿಂದ ಕ್ಷಮೆ ಯನ್ನು ಕೋರಬಹುದೇ? ಅಯ್ಯೋ, ಹಾಗಾದರೆ ತಾನು ಒಂದು ರಾತ್ರಿಯಾದರೂ ಸುಖವಾಗಿ ನಿದ್ದೆ ಮಾಡಬಹುದು. ನಿದ್ದೆ? ಊಹೂ. ಎಲ್ಲವನ್ನೂ ಅವಳೇ ತೆಗೆದು ಕೊಂಡು ಹೊರಟು ಹೋಗಿದ್ದಾಳೆ. ಅವನಿಗೆ ಒಂದೇ ನಿದ್ದೆ. ಎಚ್ಚರವಾಗದ ದೀರ್ಘ ನಿದ್ದೆ. ಅದು ಬರಬೇಕು ಅಷ್ಟೆ.

ರತ್ನಸಾಮಿ ಹಲಬಗೆಯ ಚಿಂತೆಗಳಿಂದ ಹೆಜ್ಜೆಯನ್ನು ಹಾಕುತ್ತ ಆ ಮನೆಯತ್ತ ನಡೆದ. ಅದರ ಪಡಸಾಲೆಯಲ್ಲಿ ಕುಳಿತವನೆ ತಲೆಗೆ ಕೈಕೊಟ್ಟು ಹಾಗೆಯೇ ಮಲಗಿದ. ಹೌದು, ಇನ್ನು ಮುಂದೆ ಅವನಿಗೆ ಇಲ್ಲಿಯೇ ಹಾಸಿಗೆ. ಆದರೆ ಎಚ್ಚರ ಮಾತ್ರ ಇರುವ ಹಾಗಿಲ್ಲ. ಖಂಡಿತವಾಗಿಯೂ ಇಲ್ಲ.

## ಬೆರಳು

"ಪ್ರೀತಿಗೂ ಸೌಹಾರ್ದತೆಗೂ ಅರ್ಹರಾದ ಶ್ರೀ ಏ. ಏ. ಅಯ್ಯರ್ ಅವರಿಗೆ—

ಹಲವು ನಮಸ್ಕಾರಗಳು,

ಅಂತರಂಗವಾದ ಪ್ರೇಮದಿಂದಲೂ ಗೌರವದಿಂದಲೂ ಹೀಗೆ ನಾನು ಸಂಬೋಧಿಸು ತ್ತಿದ್ದೇನೆ. ನಿಮ್ಮ ಆಕರ್ಷಕವಾದ ಮುಖ, ಗಂಭೀರವಾದ ನೋಟ, ವಿಶಾಲವಾದ ಎದೆ, ಮೊಳಕಾಲಿನ ವರೆಗೂ ಇರುವ ನಿಲುವಂಗಿ, ಕೋಟು, ಸರಪಳಿ, ಗಡಿಯಾರ, ಹಣೆಯಲ್ಲಿ ಮೂರು ಚಿನ್ನದ ಗೆರೆಗಳಂತೆ ಮಿಂಚುವ ಶ್ರೀಗಂಧ, ಕುಂಕುಮ ಬೊಟ್ಟು, ಬೂಟ್ಸು, ಬಾಯಲ್ಲಿ ಯಾವಾಗಲೂ ಪನ್ನಿರು ಹೊಗೆಸೊಪ್ಪಿನೊಂದಿಗೆ ಇರುವ ಕುಂಭ ಕೋಣದ ವೀಳ್ಯ, ಇವೆಲ್ಲಕ್ಕೂ ಮೀರಿದ ನಿಮ್ಮ ಶುದ್ಧವಾದ ಮಾತು,—ಹೀಗಿರುವ ನಿಮ್ಮನ್ನು ಯಾರು ತಾನೇ ಆಕರ್ಷಿಸುವುದಿಲ್ಲ?

ಸಾವಿರ ಹತ್ತು ಸಾವಿರ ಸಂಖ್ಯೆಯ ಸಭೆಯಲ್ಲಿ ನೀವಿದ್ದರೂ ನಿಮ್ಮನ್ನು ಯಾರೂ ಗುರುತಿಸಿಯೇ ಗುರುತಿಸುತ್ತಾರೆ, ಬೀದಿಯಲ್ಲಿ ನೀವು ಹೆಜ್ಜೆಯನ್ನು ಹಾಕುತ್ತಿದ್ದರೆ, ಕ್ಷಣಕಾಲ ನಿಂತು ನಿಮ್ಮನ್ನು ನೋಡದೇ ಇರಲು ಯಾರಿಂದಲೂ ಸಾಧ್ಯವಿಲ್ಲ.

ನಿಮ್ಮ ಮಾತೂ ಹಾಗೆಯೇ. ನೀವು ಆ ಕಾಲದ ಬಿ. ಎ. ಪಧವೀದರ. ಪ್ರತಿ ಶುಕ್ರವಾರ ನೀವು ಜವಾನರನ್ನೂ ಗುಮಾಸ್ತರನ್ನೂ ಸೇರಿಸಿ ಮಾತಾಡುತ್ತಿದ್ದೀರಲ್ಲ. ಆಗ, ನಿಮ್ಮ ಶುದ್ಧವಾದ ಆ ಆಂಗ್ಲ ಭಾಷಣವನ್ನು ಕೇಳುವಾಗ, ಮೆಕಾಲೆ, ಗಿಬ್ಬನ್ ಇಂಥವರ ನೆನಪೇ ಬರುತ್ತದೆಂದು ಆರಾವಮುದು ಹೇಳುತ್ತಾರೆ.

ನನಗೇನು ತಿಳಿಯುತ್ತದೆ? ನಾನು ಬರಿಯ ಎಸ್. ಎಸ್. ಎಲ್. ಸಿ. ಓದಿರುವೆನು. ಆದರೆ ನಿಮ್ಮ ಮಾತನ್ನು ಕೇಳುವಾಗ ಈ ನಾಡಿನಲ್ಲಿ ನಿಮ್ಮಷ್ಟು ಸ್ಫುಟವಾಗಿ ಪ್ರಸಂಗ ಮಾಡುವವರು ಯಾರೂ ಇರಲಾರರೆಂಬ ತೀರ್ಮಾನಕ್ಕೆ ನಾನು ಬಂದಿದ್ದೇನೆ. ನಿಮಗೆ ಯಾವುದು ಬಾಯಿಪಾಠ? ಗೀತೆ? ಕುರಳ್? ಕಂಬ ರಾಮಾಯಣ? ಭಾಗವತದ ಅಷ್ಟೂ ಶ್ಲೋಕಗಳನ್ನೂ ಅದು ಹೇಗೆ ನೀವು ನೆನಪಿನಲ್ಲಿಟ್ಟುಕೊಂಡಿದ್ದೀರೋ? ಕಾಳ ಮೇಘದ ಹಲವು ಹಾಡುಗಳನ್ನು ಹೇಳಿ ನಗೆಯಾಡುತ್ತೀರಲ್ಲ, ಅವನ್ನು ಎಲ್ಲಿ ಅಭ್ಯಾಸ ಮಾಡಿದಿರಿ? ನಿಮಗೆ ಇದಕ್ಕೆಲ್ಲ ಸಮಯ ಎಲ್ಲಿ ಸಿಕ್ಕಿತು?

ಇಷ್ಟು ಮಾತ್ರವೇನು? ಸರಕಾರ ಆಗಿಂದಾಗ್ಗೆ ಹೊರಡಿಸುವ ಪ್ರಕಟಣೆಗಳು, ನೌಕರರ ಸಂಬಳ ಸಾರಿಗೆ ಲೆಕ್ಕ ಪುಸ್ತಕಗಳು—ಇಂಥ ವ್ಯವಹಾರಗಳಲ್ಲಿಯೂ ಅವುಗಳ ಉಪಯೋಗದ ಬಗ್ಗೆಯೂ ನೀವು ಪ್ರವೀಣರಾಗಿದ್ದೀರಲ್ಲ. ಇದನ್ನೆಲ್ಲ ಅಭ್ಯಾಸಮಾಡಲು ನಿಮಗೆಲ್ಲಿ ಬಿಡುವಿದ್ದಿತೋ ಏನು ಕತೆಯೊ? ನನಗೊಂದೂ ತೋಚುತ್ತಿಲ್ಲ. ಸೇರಿದ

ಹಾಗೆ ಒಂದು ತಿಂಗಳು ನಿಮ್ಮನ್ನು ಅನುಸರಿಸಿದರೆ ಸಾಕು, ನಾವು ಏನ್ನೋ ಕಲಿಯಲು ಸಾಧ್ಯವಿದೆ.

ಆಫೀಸಿನಲ್ಲಿ ಮಾತ್ರವಲ್ಲ, ಹೊರ ಜಗತ್ತಿನಲ್ಲಿ ಸಹ ನಾವು ಹೇಗೆ ನಡೆದುಕೊಳ್ಳಬೇಕು ಎನ್ನುವುದನ್ನೂ ನಿಮ್ಮಿಂದ ನಾವು ನೋಡಿ ತಿಳಿದುಕೊಳ್ಳಬೇಕಾಗಿದೆ. ನೀವು ಮನೆಗೆ ಬಂದೊಡನೆ ಏನು ಮಾಡುತ್ತೀರಿ? ಮೂರೆಲೆ ಆಟ ಆಡುತ್ತೀರಾ? ಕತ್ತೆ? ರಮ್ಮಿ? ಕ್ಲಬ್ಬಿನಲ್ಲಿ ಹರಟೆ? ಒಳ್ಳೆಯದು ಕೆಟ್ಟದ್ದು ಯಾವುದನ್ನೂ ಗಮನಿಸದೆ ನಾಟಕ ಸಿನೆಮಾ ಹೀಗೆ ಹೋಗಿ ಸಮಯವನ್ನು ಹಾಳು ಮಾಡುತ್ತೀರಾ? ಇಲ್ಲ, ಖಂಡಿತವಾಗಿಯೂ ಇಲ್ಲ.

ಮನೆಗೆ ಬಂದ ಮೇಲೆ ನೀವು ಶುದ್ಧವಾಗಿ ಮುಖ ತೊಳೆದು ಉಪ್ಪಿಟ್ಟೋ ಬಜ್ಜಿಯೋ ಚೆನ್ನಾಗಿ ತಿಂದು ಮುಗಿಸಿ, ಒಳ್ಳೆಯ ಕಾಫಿಯನ್ನು ಕುಡಿದು, ನಿಮ್ಮ ಮಗನನ್ನೇ ಒಂದು ಇಂಜಕ್ಷನ್ ಮಾಡಲು ಹೇಳಿ (ಡಯಬಿಟೀಸ್ ಇದೆಯೆಂದು ನೀವು ಪಥ್ಯ ಇರುವವರಲ್ಲ) ಬಳಿಕ ಸ್ವಲ್ಪ ಹೊತ್ತು ವಿಶ್ರಾಂತಿ ತೆಗೆದುಕೊಂಡು, ಸಂಧ್ಯಾವಂದನೆ ಮುಗಿಸಿ, ಅರ್ಧ ಆಳು ಪ್ರಮಾಣದ ರಾಮಕೃಷ್ಣರ ಚಿತ್ರಪಟಗಳನ್ನು ಇಟ್ಟಿರುವ ದೇವರ ಮನೆಗ ಪ್ರವೇಶಿಸಿ ವೀಣೆಯನ್ನು ಬಾಜಿಸಲು ಪ್ರಾರಂಭಿಸುತ್ತೀರಿ. ಬಾಜನದೊಂದಿಗೇ ಹಾಡುತ್ತೀರಿ. ವರ್ಗವಾಗಿ ನೀವು ಇಲ್ಲಿಗೆ ಬಂದು ಏಳು ವರ್ಷಗಳಾಗಿಯೂ ನಿಮಗೆ ವೀಣೆಯನ್ನು ನುಡಿಸಲು ಬರುತ್ತದೆ, ಹಾಡಲು ಬರುತ್ತದೆ ಎಂದು ಹೊರಗೆ ತೋರ್ಪಡಿಸಿಕೊಳ್ಳದಿರುವ ನಿಮ್ಮ ಹಿರಿತನವನ್ನು ನಾನು ಮೆಚ್ಚದೆ ಇರಲು ಹೇಗೆ ಸಾಧ್ಯ?

ಈಗ್ಗೆ ಮೂರನೆಯ ವರ್ಷದ ಹಿಂದೆ "ಬನ್ನಿರೋ ಹುಡುಗರಿರಾ" ಎಂದು ಶ್ರೀರಾಮನವಮಿಯ ದಿನ ನಮ್ಮನ್ನು ಬರಮಾಡಿಕೊಂಡಿರಿ. ಮಾಮೂಲಿನಂತೆ ಗುಗ್ಗರಿ ಕೋಸಂಬರಿ ಪಾನಕ ಸಿಗುತ್ತದೆ ಎಂದು ಭಾವಿಸಿದ್ದ ನಮಗೆ ಗಾನಾಮೃತವೂ ದೊರಕುತ್ತದೆ ಎಂದು ಎಲ್ಲಿ ನಿರೀಕ್ಷಿಸಿದ್ದೆವು? ನಾನು ಬಿ. ಎ. ಓದಿಲ್ಲ. ಆದರೆ ಮೂರು ಸಂಗೀತ ಸಭೆಗಳಲ್ಲಿ ಸದಸ್ಯನಾಗಿರುವುದರಿಂದ ಸಾಕಷ್ಟು ಸಂಗೀತ ಕಚೇರಿಗಳಲ್ಲಿ ನಾನು ಹಾಜರಾಗಿದ್ದೇನೆ. ಆದರೆ ಅವೊತ್ತು ನೀವು ಹಾಡಿದುದನ್ನೂ ಹಾಡಿನೊಂದಿಗೇ ವೀಣೆ ನುಡಿಸಿದುದನ್ನೂ ಕೇಳಿ ನನ್ನ ಹೃದಯ ತುಂಬಿಹೋಯಿತು. ಕಣ್ಣುಗಳು ತೇವ ಗೂಡಿದುವು.

ನನ್ನ ಸನಿಹದಲ್ಲಿದ್ದ ತಿರುಮಲೆ ನನ್ನ ಕಣ್ಣಿಂದ ಉದುರುತ್ತಿದ್ದ ನೀರನ್ನು ಕಂಡು, "ಏನೋ ಇದು?" ಎಂದು ಕೇಳಿದ. ನನಗೆ ನಾಚಿಕೆಯಾಗಿ "ಕಾಲಿನಲ್ಲಿ ಗಾಯ ಇದೆ. ಅದಕ್ಕೆ ಈಗ ಏಟು ಬಿತ್ತು" ಎಂದು ಸುಳ್ಳು ಹೇಳಿದೆ.

ನೀವು ಅಂದು ಹಾಡಿದ ರೀತಿ ತುಂಬಾ ಸೊಗಸು. ಸಂಗತಿಯನ್ನೇ ಹಾಡದೆ ತ್ಯಾಗ ರಾಜರು, ಗೋಪಾಲಕೃಷ್ಣ ಭಾರತಿಯಾರರ ಕೀರ್ತನೆಗಳನ್ನು ಮಧುರವಾಗಿ ನೀವು

ಹಾಡಿದಿರಿ. ಭಾವಾವೇಶದಿಂದ ನಾನು ಪುಲಕಿತನಾದೆ. ನಮ್ಮನ್ನು ಮುಖ್ಯವಾಗಿ ನನ್ನನ್ನು, ನೀವು ಆಗ ಸೆಳೆದುಕೊಂಡಿರಿ.

ಆ ಮೇಲೆ ವಿಚಾರಿಸಿದ್ದಲ್ಲಿ ನೀವು ದೊಡ್ಡ ಸಂಗೀತ ವಿದ್ವಾಂಸರ ಪರಂಪರೆಯಲ್ಲಿ ಜನಿಸಿದವರು ಎಂದೂ, ನಿಮ್ಮ ಅಜ್ಜ ಅರವತ್ತು ವರುಷಗಳ ಹಿಂದೆ ಒಂದು ದಿನ, ಕಾವೇರಿಯಲ್ಲಿ ಸ್ನಾನಮಾಡಲು ಹೋದಾಗ "ಉರರೇ, ರಾಮಯ್ಯಾ" ಎನ್ನುವ ಕೀರ್ತನೆಯನ್ನು ಗಟ್ಟಿಯಾಗಿ ಹಾಡಲು, ನದೀ ತಟದಲ್ಲಿದ್ದ ಗಿಡಮರಗಳೆಲ್ಲವೂ ಸ್ತಬ್ಧವಾಗಿ ಹೋದುದನ್ನೂ ಜಿ. ಎ. ಒ. ನನಗೆ ರಸವತ್ತಾಗಿ ವಿವರಿಸಿದ. ಆ ಕಾಲದಲ್ಲಿ ಹಲವು ವಿದ್ವಾಂಸರು ಬಂದು ನಿಮ್ಮ ಅಜ್ಜನಲ್ಲಿ ಪಾಠ ಹೇಳಿಸಿಕೊಂಡರಂತೆ,

ಇದನ್ನೆಲ್ಲ ಕೇಳುವಾಗ ನನ್ನ ಹೃದಯ ಜೋರಾಗಿ ಬಡಿದುಕೊಳ್ಳುತ್ತದೆ. ನಾವು ಕೆಲಸ ಮಾಡುತ್ತಿರುವುದು ಸರಕಾರದ ಲೆಕ್ಕ ಪರಿಶೋಧಕರ ಕೈಕೆಳಗೆ ಅಲ್ಲ. ಒಬ್ಬ ಮೇಧಾವಂತನ ಜತೆಯಾಗಿ ಎನ್ನುವ ಭಾವನೆ ಏರ್ಪಡುತ್ತದೆ. ತಾವು ಒಂಬೈನೂರು ರೂಪಾಯಿಗಳನ್ನು ತೆಗೆದುಕೊಂಡು ಕೆಲಸ ಮಾಡುತ್ತಿರುವ ಸರಕಾರದ ಉದ್ಯೋಗಸ್ಥರು ಮಾತ್ರವಲ್ಲ, ವಂಶದಿಂದ ಗೌರವವಾಗಿ ಬಾಳಿಬಂದಿರುವ ನಾಗರಿಕ ಪ್ರತಿನಿಧಿ.

ಈವಾಗ ನಿಮ್ಮನ್ನು ನೋಡಿದರೆ ನಮಗೆ ನದಿಯ ದಂಡೆಯಲ್ಲಿರುವ ಮರದ ನೆಳಲಿನ ತಂಪೇ ಆಗುತ್ತದೆ. ನಿಮ್ಮ ದನಿಯನ್ನು ಕೇಳಿದರೆ ಸಾಕು, ನದಿಯ ನೀರಿನ ಜಳಜಳ ಶಬ್ದವೂ ಆ ನೀರಿನ ಮೇಲೆ ಹಾರುವ ಹಕ್ಕಿ ಹಿಂಡಿನ ಮೋಹಕ ಕೂಗೂ ಕೇಳಿಸಿದ ಹಾಗಾಗುತ್ತದೆ. ನಿಮ್ಮನ್ನು ಅಭಿನಂದಿಸುವುದನ್ನು ಬಿಟ್ಟು ಮತ್ತೇನು ನನ್ನಿಂದ ಮಾಡಲು ಸಾಧ್ಯವಿದೆ?

ನಿಮ್ಮ ಮೇಲಿನ ಭಯಭಕ್ತಿಯಿಂದಲೇ ನಾನು ಮೇಲೂ ಬರೆಯುತ್ತ ಇದ್ದೇನೆ.

ಅಸಿಸ್ಟೆಂಟ್ ಅಕೌಂಟೆಂಟ್ ಮಹಾಲಿಂಗಂ ನಾಲ್ಕು ಐದು ದಿನಗಳಿಂದ ನಿಮ್ಮ ಬಗ್ಗೆ ಏನೇನೋ ಹೇಳಿಕೊಂಡು ಸುತ್ತಾಡುತ್ತಾ ಇದ್ದಾನೆ. ಏ. ಏ. ಅಯ್ಯರ್ ಎಂದರೆ 'ಅಸಲ್ ಆಷಾಢಭೂತಿ ಅಯ್ಯರ್' ಎನ್ನುತ್ತಾನೆ.

"ಅಯ್ಯರ್ ತುಂಬಾ ದೊಡ್ಡವರು. ಅವರು ಬರಿಯ ಸರಕಾರೀ ಸೇವಕರಲ್ಲ. ಪರಮಜ್ಞಾನಿ. ವಿದ್ವಾಂಸರು. ಅವರ ಬಗ್ಗೆ ಏನಾದರೂ ಕೆಟ್ಟಮಾತು ಆಡಿದರೆ ಆಡಿದವರ ನಾಲಗೆ ಬಿದ್ದುಹೋಗುತ್ತದೆ' ಎಂದು ನಾನು ಉತ್ತರ ಹೇಳಿದೆ.

"ನೀನು ಹೇಳುವ ಅದೇ ಕಾರಣದಿಂದಲೇ ನಾನು ಅವರನ್ನು ಕುರಿತು ಹಾಗೆ ಹೇಳಿದ" ಎಂದ ಮಹಾಲಿಂಗಂ. ಆ ಬಳಿಕ ಆತ ಹೇಳಿದ ಎಲ್ಲವನ್ನೂ ಸಂಕ್ಷೇಪ್ತವಾಗಿ ನಾನು ನಿಮಗೆ ತಿಳಿಸಿಬಿಡುತ್ತೇನೆ.

ತಾವು ಕೊಚ್ಚಿ, ಕೊಯಮುತ್ತೂರು, ತಿರುವನಂತಪುರ, ಮಧುರೆ—ಹೀಗೆ ತನಿಖೆಗೆಂದು ಹೊರಟಾಗ, ಹಿಂದಿರುಗಿ ಬರುವಾಗ, ರೈಲ್ವೆ ಟಿಕೆಟ್ಟನ್ನೇ ತೆಗೆದುಕೊಳ್ಳುವುದಿಲ್ಲ

ವಂತೆ. ಗಾಡಿ ಹೊರಡುವ ಸಮಯ ನೋಡಿ ತಾವು ಮೊದಲನೆಯ ತರಗತಿಯ ಬೋಗಿಯೊಳಗೆ ಪ್ರವೇಶಿಸಿ, ಹೋಲ್ಡಾಲನ್ನು ಬಿಚ್ಚಿ, ಬದರಿ, ಕಿಟಿಕಿಗಳನ್ನು ಮುಚ್ಚಿ ಬೋಲ್ಟ್ ಹಾಕಿ, ದೀಪಗಳನ್ನು ಆರಿಸಿ ಮಲಗಿ ಬಿಡುತ್ತೀರಂತೆ.

"ನೀನು-ನಾನು ಆಗಿದ್ದರೆ ಭಿಕ್ಷುಕನನ್ನು ಎಬ್ಬಿಸುವ ಹಾಗೆ ಎಬ್ಬಿಸಿ, ಆ. ಟಿ. ಎ. ಟಿಕೆಟ್ ಕೇಳುತ್ತಾನೆ, ನಾವೆಲ್ಲ ಮೂರನೆ ದರ್ಜೆಯವರು ಅಲ್ಲವೆ? ಅಯ್ಯರನ್ನು ಯಾರು ಎಬ್ಬಿಸಲು ಸಾಧ್ಯವಾಗುತ್ತದೆ? ಅವರು ಸುಖವಾಗಿ ನಿದ್ದೆ ಮಾಡುತ್ತಾರೆ. ರೈಲು ಸೆಂಟ್ರಲ್ ಸ್ಟೇಷನ್ ಬಂದೊಡನೆ ಹೋಲ್ಡಾಲನ್ನು ಕೆಳಗಿಳಿಸುವಂತೆ ಪೋರ್ಟರಿಗೆ ಹೇಳಿ ತಾವೂ ಕೆಳಗೆ ಇಳಿಯುತ್ತಾರೆ. ಬಿ. ಸೆಕ್ಷನ್ ಗುಮಾಸ್ತೆ ಇದ್ದಾನಲ್ಲ ಆಯ್ಯಾಟೂರೆ, ಆತ ಪ್ಲಾಟ್‌ಫಾರಂ ಟಿಕೆಟ್ ತೆಗೆದುಕೊಂಡು ಬಂದು ಸಿದ್ಧವಾಗಿರುತ್ತಾನೆ. ಗಿಜಿಗಿಜು ಸಂದಣಿಯಲ್ಲಿ ಹೋಲ್ಡಾಲ್ ಆಚೆ ಸಾಗುತ್ತದೆ. ಇವರಿಬ್ಬರೂ ಹಾಯಾಗಿ ಮಾತಾಡಿ ಕೊಂಡು ಹೊರಬಂದು, ಒಂದು ಟ್ಯಾಕ್ಸಿ ಮಾಡಿಕೊಂಡು ಮನೆಗೆ ಬಂದು ಸೇರುತ್ತಾರೆ."

"ಏಯ್ ಮಹಾಲಿಂಗಂ, ಇದೇನಯ್ಯ ನಿನ್ನ ಒದರಾಟ?"

"ನಾನು ಒದರುತ್ತೇನೋ? ರುಜು ಮಾಡಿಕೊಡುತ್ತೇನೆ, ಬೇಕಾದರೆ, ರುಜು. ಆ ಮನುಷ್ಯ ತನ್ನ ಜನ್ಮದಲ್ಲಿ ಟಿಕೆಟ್ ತೆಗೆದಿಲ್ಲ. ಅಪ್ಪಿತಪ್ಪಿ ಒಂದು ದಿನ ಟಿಕೆಟ್ ಕೇಳಿದರೂಂತ ಇಟ್ಟುಕೋ. 'ನನ್ನ ಪರ್ಸನಲ್ ಕ್ಲಾರ್ಕ್ ಬಳಿ ಟಿಕೆಟ್ಟು ಫೈಲ್ ಎಲ್ಲ ಇವೆ' ಎಂದು ಹೇಳಿದರಾಯಿತು. ಇವರು ನನ್ನ-ನಿನ್ನ ಹಾಗೇನು? ನಮ್ಮ ಮುಖದಲ್ಲಿ ತಾನೇ ಬರೆದಿದೆಯಲ್ಲ, ಗುಮಾಸ್ತರು ಹಾಗಂತ. ಅವರನ್ನು ನೋಡು, ದಿವಾನರ ಹಾಗಲ್ಲವೋ ಇದ್ದಾರೆ. ನಡೆಯಲ್ಲಿ ನುಡಿಯಲ್ಲಿ ಗಾಂಭೀರ್ಯ. ಅವರನ್ನು ಯಾರಯ್ಯಾ ಚೆಕ್ ಮಾಡ್ತಾರೆ?"

"ಮಹಾಲಿಂಗಂ, ನಾನು ಇದನ್ನು ನಂಬುವುದಿಲ್ಲ."

"ನೀನು ನಂಬಿ ನನಗೇನು ಆಗಬೇಕು ಹೇಳು? ಆಗಬೇಕೋ? ನಾನು ಹೇಳುವು ದನ್ನು ರೂಪಿಸಲು ಸಿದ್ಧ. ಈ ಸುದ್ದಿಯನ್ನು ನಾನು ಮೇಲಧಿಕಾರಿಗಳಿಗೂ ತಿಳಿಸುತ್ತೇನೆ."

"ರುಜುವಾತು ಎಂತೀಯಲ್ಲ. ಯಾವ ರೀತಿ ಹೇಳು?"

"ಸೆಪ್ಟಂಬರ್ ಇಪ್ಪತ್ತನೇ ತಾರೀಖು ಕೊಚ್ಚಿಯಿಂದ ಇವರು ಫಸ್ಟ್‌ಕ್ಲಾಸಿನಲ್ಲಿ ಬಂದಿದ್ದಾರೆ. ಅಲ್ಲಿ ಹದಿನೈದು ಸೀಟುಗಳು ರಿಸರ್ವ್ ಆಗಿವೆ. ಆದರೆ ಇವರ ಹೆಸರು ಅಲ್ಲಿ ಇಲ್ಲ. ಬೇರೆ ಟಿಕೆಟ್ ಮಾರಾಟವಾಗಿಲ್ಲ. ಹಾಗಾದರೆ ಇವರು ಆ ಗಾಡಿಯಲ್ಲಿ ಹೇಗೆ ಬರಲು ಸಾಧ್ಯವಾಯಿತು ಹೇಳು? ಕಳೆದ ತಿಂಗಳು ಆರನೆಯ ತಾರೀಖು ಕಡಲೂರಿನಲ್ಲಿ ಒಂದು ಫಸ್ಟ್‌ಕ್ಲಾಸ್ ಟಿಕೆಟ್ಟೂ ಮಾರಾಟವಾಗಲಿಲ್ಲ. ಹಾಗಿರುವಾಗ ಅಲ್ಲಿಂದ ಬಂದ ಎಂದು ಇವರು ಹೇಗೆ ಬಿಲ್‌ಮಾಡಿ ಹಣ ಪಡೆದರು ಹೇಳು? ಮಹಾ ವೇದಾಂತಿ, ಆಷಾಢಭೂತಿ. ಇವನ ಗುಟ್ಟು ರಟ್ಟುಮಾಡಿ ನಾನು ಬೇರೆ ಕೆಲಸಕ್ಕೆ

ಕೈಹಾಕುತ್ತೇನೆ, ಆ ತಾರೀಖುಗಳಲ್ಲಿ ಸಂಬಂಧಪಟ್ಟ ಸ್ಟೇಷನ್ ಮಾಸ್ತರುಗಳಿಂದ ವಿವರ ತೆಗೆದು ಬರೆಯಿಸಿಕೊಂಡಿದ್ದೇನೆ. ತಿಳಿಯಿತೋ?"

"ಜೋರಾಗಿ ಮಾತಾಡುತ್ತಾ ಇದ್ದೀಯಲ್ಲವಾ! ಮಾತಾಡು. ಆದರೆ ನನ್ನ ಪ್ರಶ್ನೆಗೆ ಉತ್ತರ ಕೊಡು."

"ಏನು ನಿನ್ನ ಪ್ರಶ್ನೆ!"

"ನಮ್ಮ ಅಯ್ಯರ್ ನೀನು ಹೇಳಿದ ಹಾಗೆಯೇ ಮಾಡಿದಾರೆ ಅಂತ ಇಟ್ಟುಕೋ . . ."

"ಇಟ್ಟುಕೋ ಏನು? ಮಾಡಿದಾರೆ. ಸಾಕ್ಷಿ ಇದೆ ಎಂತೀನಿ."

"ಸರಿ. ಮಾಡಿದಾರೆ. ನಿನಗೆ ಆದರಿಂದ ಆದ ನಷ್ಟ ಏನು?"

"ನನಗೇನು ಅಂತೀಯೋ? ಚೆನ್ನಾಗಿದೆ ನಿನ್ನ ಮಾತು. ಇದಲ್ಲ ಯಾರ ಮನೆ ಹಣ? ನಾವೆಲ್ಲ ತೆರಿಗೆ ತೆತ್ತದ್ದು, ತೆರುತ್ತ ಇರುವುದು, ಎಲ್ಲವೂ ಇದರಲ್ಲಿ ಸೇರಿದೆ. ಅದಲ್ಲದೆ ಪ್ರಯಾಣಭತ್ಯ ಹಾಗಂತ ಈತ ನೂರು ಇನ್ನೂರು ತೆಗೆದುಕೊಳ್ಳುತ್ತ ಇದ್ದಾನೆ. ಮಾಡೋದೆಲ್ಲ ಅನಾಚಾರ; ಮನೇಮುಂದೆ ಬೃಂದಾವನ. ಈತ ಸರಿಯಾದ ಮೋಸಗಾರ; ಠಕ್ಕ. ಎಷ್ಟು ಸಂಗೀತ ಕಲಿತಿದ್ದರೇನು? ಎಷ್ಟು ಶಾಸ್ತ್ರ ಓದಿದ್ದರೇನು?"

"ಅದು ಸರಿ. ನಿನಗೆ ಯಾಕೆ ಅವರ ಮೇಲೆ ಇಷ್ಟು ದ್ವೇಷ? ನಿನಗೇನಾದರೂ ಅವರು ಕೆಡಕು ಮಾಡಿದಾರೇನು?"

"ಇದು ಸಾಲದೋ? ನನಗೆ ಬೇರೆ ಮಾಡಬೇಕೋ? ಕಳೆದ ತಿಂಗಳು ಮಾಯಾವರಕ್ಕೆ ಹೋಗಿ ಅಲ್ಲಿ ಇಪ್ಪತ್ತು ದಿನಗಳು ಇದ್ದು ತನಿಕೆಗೆ ಹೋಗಿದ್ದೆ ಎಂದು ಈತ. ಆಫೀಸ್ ಲೆಕ್ಕದಲ್ಲಿ ಇಪ್ಪತ್ತು ದಿನಗಳಿಗೆ ಅಲೋಯೆನ್ಸ್ ತೆಗೆದುಕೊಂಡಿದ್ದಾನೆ. ಮಹಾ ಜ್ಞಾನಿ, ಆದರೆ ಇವನು ಅಲ್ಲಿಗೆ ಹೋಗಿದ್ದುದು ಎರಡೇ ದಿನ. ಪೂರಾ ಇದ್ದವನು ಇವನ ಗುಮಾಸ್ತೆ, ಇದೇ ರೀತಿ ನಾಲ್ಕು ದಿನಕ್ಕೆ ಹದಿನಾಲ್ಕು; ಮೂರಕ್ಕೆ ಆರು . . ."

"ಇದ್ದರೂ ಇಷ್ಟು ದ್ವೇಷ ನಿನಗೆ ಅವರ ಮೇಲೆ ಇರಬಾರದು."

"ಮಾತಿಲ್ಲದೇ ಇದ್ದರೆ ಏನೂ ಕೊಳ್ಳೆ ಹೋಗೋದಿಲ್ಲ, ಆದರೆ ಪ್ರತಿ ಶುಕ್ರವಾರ ನಮ್ಮನ್ನೆಲ್ಲ ಸೇರಿಸಿ ಈತ ಧರ್ಮಭೋಧೆ ಮಾಡುತ್ತಾನಲ್ಲ. ಉಪದೇಶ ಯಾತಕ್ಕೋ. ಇವನು ಓದಿದ್ದರೆ ಮೇಲಿನವರ ಹತ್ತಿರ ತೋರಿಸಲಿ. ಚೆನ್ನಾಗಿ ಮಾತಾಡೋಕ್ಕೆ ಬರುತ್ತೆ ಎನ್ನೋದಾದ್ರೆ ಕೆಲಸಬಿಟ್ಟು ಚುನಾವಣೇಗೆ ನಿಂತುಕೊಳ್ಳಲಿ." ನಮ್ಮನ್ನೆಲ್ಲ ಕೂಡಿಸಿ ಇಲ್ಲದ್ದು ಸಲ್ಲದ್ದು ಹೇಳೋದು. ಮಾರನೆಯ ದಿನ ಹಿಂದುಗಡೆ ಪರಿಹಾಸ್ಯ ಮಾಡೋದು. ಇವನನ್ನು ನಾನು ಮುಗಿಸಿಬಿಡುತ್ತೇನೆ ನೋಡು. ಈ ಆಧಾರಗಳನ್ನಿಟ್ಟು ಮೇಲಿನವರಿಗೆ ನಾನು ದೂರು ಕೊಡುತ್ತೇನೆ. ಮೊಟ್ಟೆಕಾಗದ ಬರೆಯೊಲ್ಲ. ನನ್ನ ಸಹಿಮಾಡಿಯೇ ಕಳಿಸುತ್ತೇನೆ, ಮುಂದಿನ ತಿಂಗಳು ಇವನು ಕಂಬಿ ಎಣಿಸದೆ ಹೋದರೆ ನಾನು ಮಹಾಲಿಂಗಂ ಅಲ್ಲ."

ಇದು ನನಗೂ ಮಹಾಲಿಂಗಂಗೂ ನಡೆದ ಮಾತುಕತೆ. ಅವನು ಬರೆದಿದ್ದ ಆಧಾರ ಗಳನ್ನೂ ಅರ್ಜಿಯನ್ನೂ ನಾನು ನೋಡಿದೆ. ಆತ ಸುಳ್ಳು ಹೇಳಿಲ್ಲ. ನಿಜವಾಗಿಯೂ ತನ್ನ ನಿಲವಿಗೆ ಸಾಕ್ಷ್ಯಸಂಗ್ರಹಣೆ ಮಾಡಿದ್ದಾನೆ. ಆ ಪಾಪಿ ಅಷ್ಟಕ್ಕೇ ನಿಲ್ಲಿಸಿಲ್ಲ: ಯುದ್ಧ ಕಾಲದಲ್ಲಿ ನೀವು ನಿಮ್ಮ ಸಾಮರ್ಥ್ಯವನ್ನು ಉಪಯೋಗಿಸಿ ಆರು ಅಂಗಡಿಗಳಿಂದಲೂ ಆಹಾರಧಾನ್ಯ, ಸೀಮೆಯೆಣ್ಣೆ ಮುಂತಾದುವನ್ನು ಶೇಖರಿಸಿ, ರಾಜವೈಭವದಿಂದ ಮೆರೆ ದಿರುವುದಾಗಿಯೂ ಕೊನೆಗೆ ಇದು ಬಹಿರಂಗವಾಗಿ ದೇವದಾಸ್ ಎನ್ನುವ ಗುಮಾಸ್ತ ನಿಂದ ರಕ್ಷಿಸಿಕೊಂಡುದಾಗಿಯೂ ಆ ನಂತರ ಉಪಕಾರ ಮಾಡಿದ ಅದೇ 'ದೇವದಾಸ್‌ಗೆ ನೀವು ಮೂರು ವರ್ಷಗಳ ಸಂಬಳದ ಗ್ರೇಡನ್ನು ನಿಲ್ಲಿಸಿದ್ದಾಗಿಯೂ ಆತ ಕತೆಯನ್ನು ಹೇಳುತ್ತ ಇದ್ದಾನೆ. ಪ್ರಮಾಣವಾಗಿ ಹೇಳುವುದಾದರೆ ನನಗೆ ಇದೊಂದನ್ನೂ ನಂಬಲು ಸಾಧ್ಯವೇ ಇಲ್ಲ. ಈ ಆಧಾರಗಳೊಂದಿಗೆ ಅವನು ವಾದಿಸದೆ ಇದ್ದಿದ್ದರೆ ಖಂಡಿತ ಅವನ ಮಾತನ್ನು ನಾನು ಒಪ್ಪುತ್ತಿರಲಿಲ್ಲ. ನಾನು ನಂಬುವ ಹಾಗೆ ಆ ಪಾಪಿ ಮಾಡಿ ದ್ದಾನೆ. ಅದಕ್ಕಾಗಿ ನೀವು ನನ್ನನ್ನು ಕ್ಷಮಿಸಬೇಕು.

ಇದನ್ನೆಲ್ಲ ಕೇಳಿ, ನೋಡಿದ ಮೇಲೆ, ನನಗೆ ಆ ದಿನಗಳಿಂದ ನಿದ್ದೆಯೇ ಇಲ್ಲವಾಗಿದೆ. ನನಗೆ ಯಾವಾಗಲೂ ನಿಮ್ಮ ಬೆರಳುಗಳೇ ನನ್ನ ಕಣ್ಣಮುಂದೆ ನಿಲ್ಲುತ್ತವೆ. 'ದಾಶರಥೇ' ಎಂದು ಶ್ರೀರಾಮನನ್ನೇ ಸ್ಪರ್ಶಿಸುವ ಹಾಗೆ ವೀಣೆಯ ತಂತಿಗಳನ್ನು ತಮ್ಮ ಬೆರಳುಗಳು ಮೀಂಟುತ್ತವೆ, 'ಸಭಾಪತಿಗೆ ಬೇರೆ ದೈವ' ಎಂದು ತಾವು ಹಾಡುವಾಗ ತಮ್ಮ ಬೆರಳುಗಳು ಅನಂತ ಶಬ್ದವನ್ನು ಮೊಳಗಿಸುತ್ತವೆ. ಈ ರಸಾಸ್ವಾದನೆಯ ಮಧುವನ್ನು ನಾನು ಸವಿದಿರುವವನು.

ಆದುದರಿಂದ ಈಗ ನನಗೆ ಭಾರೀ ಸಂದೇಹ. ಈ ಬೆರಳುಗಳು ಹೇಗೆ ಸುಳ್ಳು ಹೇಳಿ ಕಳ್ಳ ಹಣವನ್ನು ಸ್ವೀಕರಿಸುತ್ತವೆ? ಎರಡು ದಿನಗಳು ತನಿಖೆಮಾಡಿ ಇಪ್ಪತ್ತು ದಿನಗಳು ಎಂದು ಹೇಗೆ ಬರೆಯುತ್ತವೆ? ಟಿಕೆಟ್ಟಿಗೂ ಹಣಕ್ಕೂ ಸುಳ್ಳು ಕೈಬರಹಕ್ಕೂ ಈ ಬೆರಳುಗಳು ಚಲಿಸುತ್ತವೆಯೋ? ವೀಣೆಯ ಮೇಲೆ ಬೆರಳಾಡಿಸುವ ಈ ಮೃದುವಾದ ಬೆರಳುಗಳು ಇಂಥ ಕೆಲಸವನ್ನು ಮಾಡಂತ್ತವೆಯೇ? ವೀಣೆಯನ್ನು ಹಿಡಿದುಕೊಳ್ಳು ವುದು ಎಡದ ಕೈ ಎಂದರೂ, ತಂತಿಗಳನ್ನು ಮೀಟಿ ಅಲೆಗಳನ್ನು ಎಬ್ಬಿಸುವುದು ಬಲದ ಕೈ ಬೆರಳುಗಳು ತಾನೇ? ಈ ಎರಡು ಕೈಗಳ ಚಲನೆಗೂ ಆಣತಿ ಮಾಡುವುದೂ ಒಂದೇ ಮೆದುಳು ತಾನೇ? ಮನಸ್ಸು? ಇದು ಹೇಗೆ ಸಾಧ್ಯವಾಗುತ್ತದೆ?

ಈ ಪ್ರಶ್ನೆಗಳಿಂದ ನಾನು ಕಂಗಾಲಾಗಿದ್ದೇನೆ, ನಿದ್ದೆ ಹೋಗಿದೆ. ಅದೇ ಬೆರಳು ಗಳಿಂದ ತಾವು ನನಗೆ ಒಂದು ಕಾಗದವನ್ನು ಬರೆಯಬಾರದೆ ಎಂದು ನನ್ನ ಮನಸ್ಸು ಹಾತೊರೆಯುತ್ತ ಇದೆ. ಸುಂದರವಾದ ತಮ್ಮ ಆ ಬೆರಳುಗಳಲ್ಲಿ ಮಿನುಗುವ ಹರಳಿನ ಉಂಗುರವನ್ನು ನಾನು ಕನಸಿನಲ್ಲಿಯೂ ಕಾಣುತ್ತ ಇದ್ದೇನೆ.

ಮಹಾಲಿಂಗಂನನ್ನು ನಾನು ಈಗ ಸಮಾಧಾನ ಮಾಡಿ ತಾತ್ಕಾಲಿಕವಾಗಿ ತಡೆದಿದ್ದೇನೆ. ತಮ್ಮ ಸಂಸಾರ ದೊಡ್ಡದು. ಏಳು ಜನ ಹೆಣ್ಣುಮಕ್ಕಳು ಮತ್ತು ಇಬ್ಬರು ವಿಧವೆ ಸೋದರಿಯರನ್ನು ಅವರು ಕಾಪಾಡುತ್ತಿದ್ದಾರೆ. ಚಾಂಡಾಳಾ, ಈ ಕೆಲಸ ಮಾಡಬೇಡ ಎಂದು ಅವನಿಗೆ ಬುದ್ಧಿವಾದ ಹೇಳಿದ್ದೇನೆ, ನೀವು ಬಂದೊಡನೆ ಅವನನ್ನು ಕರೆಯಿಸಿ ಸಮಾಧಾನ ಹೇಳಬೇಕು ಎಂದು ನಾನು ನಿಮ್ಮನ್ನು ಕೇಳಿಕೊಳ್ಳುತ್ತ ಇದ್ದೇನೆ. ನನ್ನ ಬಲದ ಬೆರಳುಗಳಿಂದ ಹೀಗೆ ಬರೆಯುತ್ತ ತಕ್ಕ ಪ್ರಾಯೋಪಶ್ಚಿತ್ತವನ್ನೂ ಮಾಡಿ ಕೊಳ್ಳುತ್ತ ಇದ್ದೇನೆ. 'ಯಾವ ಅಸಂಭಾವಿತವೂ ಆಗುವುದಿಲ್ಲ' ಎಂದು ತಾವು ಹೇಳಿದ ಹಾಗೆ ನನ್ನ ಕಿವಿಗಳು ಗುಂಯ್‌ಗುಡುತ್ತಿವೆ.

ಮತ್ತೆ ಅನೇಕ ನಮಸ್ಕಾರಗಳು.

ತಮ್ಮ ಪ್ರೀತಿಯ
ಕಕಾಕಿಕೀ,

ವಿ.ಸೂ.: ನನ್ನ ಹೆಸರನ್ನು ಬರೆಯದೇ ಹೋದುದರ ಕಾರಣವನ್ನು
ನಾನು ನಿಮಗೆ ತಿಳಿಸಬೇಕೆ?

ಏ. ಏ, ಅಯ್ಯರ್ ಎರಡು ಮೂರು ಸಲ ಈ ಕಾಗದವನ್ನು ಓದಿನೋಡಿದರು. ಗಾಡಿ ಇರುಳನ್ನು ಭೇದಿಸಿ ಸಾಗುತ್ತ ಇದೆ. ಮೊದಲನೆಯ ತರಗತಿಯ ಬೋಗಿ ಎರಡೇ ಎರಡು ಸೀಟುಗಳು. ಒಂದರಲ್ಲಿ ಒಬ್ಬ ಪಂಜಾಬಿ ಸರದಾರ ತನ್ನ ಮುಂಡಾಸನ್ನು ತೂಗಬಿಟ್ಟು ಹಾಗೆ ನಿದ್ರಿಸುತ್ತಿದ್ದಾನೆ.

ಈ ಕಾಗದವನ್ನು ತಮಗೆ ಬರೆದವರು ಯಾರು? ಒಂದು ಸಮಯ ಆ ಮಹಾ ಲಿಂಗನೇ ಬರೆದಿದ್ದಾನೋ? ಈ ಪತ್ರ ಬಂದದ್ದು ಸಹ ರಸಹ್ಯವಾಗಿಯೇ ಇದೆ. ಹೋಲ್ಡಾಲನ್ನು ಬೋಗಿಯೊಳಕ್ಕೆ ಹಾಕಿ. ಗಾಡಿ ಹೊರಡುವಾಗ ತಮ್ಮ ಕೈಗೆ ಈ ಕಾಗದವನ್ನು ಕೊಟ್ಟು ಜವಾನ ಹೀಗೆ ಹೇಳಿದ್ದಾನೆ:

"ಮರೆತೇಬಿಟ್ಟೆ, ಸ್ವಾಮಿ. ಒಬ್ಬರು ಅಯ್ಯರು ಈ ಕಾಗದವನ್ನು ಕೊಟ್ಟು ತಮಗೆ ಕೊಡಲು ಹೇಳಿದರು. 'ಅವಸರವಿಲ್ಲ, ಈಗ ಕೊಡಬೇಡ, ಊರಿಗೆ ಹೊರಡುವಾಗ ಕೊಡು' ಎಂದರು. ತಾವು ಆಗ ಪೂಜೆ ಮಾಡುತ್ತಿದ್ದೀರಿ. ಸಾಯಂಕಾಲದ ಪೂಜೆ. ಆಮೇಲೆ ನಿಮಗೆ ಕೊಡಬೇಕು ಎಂದಿದ್ದುದು ಮರತೇಹೋಯಿತು."

ಹೀಗೆ ಹೇಳುತ್ತ ಅವನು ಅವರ ಕೈಗೆ ಆ ಕವರನ್ನು ಕೊಟ್ಟ. ರೈಲು ಚಲಿಸ ತೊಡಗಿತು, ಆ ಪಂಜಾಬಿ ಎಚ್ಚರವಾಗಿ ಕೇಳಲು "ಮದರಾಸ್ ಜಾಥಾ" ಎಂದು ಉತ್ತರ ಹೇಳಿ ಕಣ್ಣುಗಳನ್ನು ಮುಚ್ಚಿದ್ದಾಯಿತು.

ಅಯ್ಯರ್ ಮೂರು ನಾಲ್ಕು ಸಲ ಆ ಕಾಗದವನ್ನು ಓದಿದರು. ನಾಲ್ಕನೆಯ ಸಲ

ಓದುವಾಗ ನಿರ್ಲಕ್ಷ್ಯದ ನಗೆಯೊಂದಿಗೆ ತಮಗೆ ತಾವೇ ಹೇಳಿಕೊಂಡರು. 'ಇದು ಎಲ್ಲರೂ ಸೇರಿ ಮಾಡಿರುವ ಪಿತೂರಿ, ಅಸಹನೆಯುಳ್ಳವರಿಗೆ ನಾನೇನೂ ಕೆಡುಕು ಮಾಡುವುದು ಬೇಡ. ಪರರು ಚೆನ್ನಾಗಿರುವುದು ಅವರಿಗೆ ಹಿಡಿಸಿಲ್ಲ. ಆದರೆ ಈ ಆಧಾರಗಳನ್ನು ಅವನು ಎಲ್ಲಿ ಶೇಖರಿಸಿದ? ಇದಕ್ಕಾಗಿ ತುಂಬಾ ಶ್ರಮ ತೆಗೆದುಕೊಳ್ಳದೆ ಇದು ಸಾಧ್ಯವೇ ಇಲ್ಲ.'

ದೇಹದೊಳಗೆ ಏನೋ ಶಬ್ದವಾಯಿತು. ಬಹಿರಂಗವಾಗಿ......ಎಚ್ಚರಿಕೆ...... ಇತ್ಯಾದಿ ಶಬ್ದಗಳು ಅವರ ಹೊಟ್ಟೆಯೊಳಗೆ ಹೊರಳಾಡಿದುವು. ಮಹಾಲಿಂಗಂನನ್ನು ಈಗಲೇ ನೋಡುವುದು ಒಳ್ಳೆಯದು ಎನ್ನುವ ಹಾಗಿದೆ. ಆದರೆ ರೈಲಿಗೆ ರೆಕ್ಕೆಗಳು ಇಲ್ಲ. ಬೆಳಗಿನ ಜಾವ ಮಾತ್ರ ಅದು ಮದರಾಸನ್ನು ಸೇರುತ್ತದೆ.

ತಮ್ಮ ತಲೆಯ ಮೇಲಿನ ದೀಪದಿಂದ ಬೆರಳುಗಳು ಕಾಣಿಸಿದುವು. ಆ ಒಂದು ಬೆರಳಿನಲ್ಲಿ ಹರಳಿನ ಉಂಗುರ ಫಳಾರನೆ ಮಿಂಚಿತು. ತಮ್ಮ ಬೆರಳುಗಳನ್ನು ಅಯ್ಯರ್ ತಾವೇ ನೋಡುವಾಗ ಕಣ್ಣುಗಳು ಉರಿಕಂಡುವು. ನೋಟವನ್ನು ಅತ್ತ ಹರಿಸಿದರು. ಕಣ್ಣುಗಳನ್ನು ಮುಚ್ಚಿದರು, ಕಾಲಿಗೆ ಹೊದೆದುಕೊಂಡರು. ಮುಖಕ್ಕೂ ಎಳೆದು ಕೊಂಡರು, ಆದರೆ ಅವರ ಕೆಳಹೊಟ್ಟೆಗೆ ಬಿದ್ದ ಭೀತಿ ಭೂತವಾಗಿ ಬೆಳೆಯುತ್ತ ಹಾವಿನಂತೆ ಹರಿದಾಡತೊಡಗಿದೆ.

ಅಯ್ಯರ್ ಈಗ ಅಲ್ಲಿಯೇ ಸಿಕ್ಕಿಸಿದ್ದ ಕೋಟಿನಿಂದ ಗಡಿಯಾರವನ್ನು ತೆಗೆದು ನೋಡಿದರು. ಅಬ್ಬಾ......ಇನ್ನು ಕಾಲು ಗಂಟೆಯಲ್ಲಿ ಈ ಗಾಡಿ ಮುಂದಿನ ನಿಲ್ದಾಣ ದಲ್ಲಿ ಹೋಗಿ ನಿಲ್ಲುತ್ತದೆ. ಒಂದು ಎರಡು ಮೂರು ಎಂಟು ನಿಮಿಷಗಳು ಜಾರಿದುವು. ಹತ್ತು ಯುಗಗಳು ಕಳೆದ ಮೇಲೆಯೇ ಮುಂದಿನ ನಿಲ್ದಾಣ ಸಿಕ್ಕಿತು. ಗಾಡಿ ನಿಂತಿತು.

ಪಿ. ಪಿ. ಅಯ್ಯರ್ ಈಗ ಕೆಳಗಿಳಿದರು. ಆ ಗಾಡಿಯ ಹಿಂಭಾಗ ಉದ್ದಕ್ಕೆ ನಡೆದರು. ಗಾರ್ಡ್ ಇರುವ ಜಾಗದಲ್ಲಿ ಹೋಗಿ ನಿಂತರು:

"ಗುಡ್ ಈವಿನಿಂಗ್, ಅಪಸರವಾಗಿ ಗಾಡಿ ಹತ್ತಬೇಕಾಯಿತು. ಟಿಕೆಟ್ ತೆಗೆಯಲು ಸಮಯವಿಲ್ಲ. ಇಲ್ಲಿಂದ ಮೂರನೆಯ ಬೋಗಿಯಲ್ಲಿ ಇದ್ದೇನೆ. ಟಿಕೆಟ್ ಹಣವನ್ನು ಇಲ್ಲಿ ಕೊಡಬಹುದೋ?"

"ಪರವಾಯಿಲ್ಲ, ಸಾರ್. ಟಿ. ಟಿ. ಬರುತ್ತಾರೆ. ನಾನು ನಿಮ್ಮಲ್ಲಿಗೇ ಕಳಿಸುತ್ತೇನೆ. ಹೋಗಿ. ಇನ್ನೇನು ಅವರು ಈ ಕಡೆ ಬರ್ತಾರೆ."

ಅಯ್ಯರ್ ಪುತ್ತೆ ತಮ್ಮ ಬೋಗಿಗೇ ಹಿಂದಿರುಗಿದರು. ನಿಂತರು. ಬೋಗಿಯಲ್ಲಿ ದೀಪ ಉರಿಯುತ್ತಿದೆ. ಸರದಾರನನ್ನು ಕಾಣಲಿಲ್ಲ. ಆತ ಸ್ನಾನದ ರೂಮಿಗೆ ಹೋಗಿ ದ್ದಾನೆ ಎಂದು ಕಾಣುತ್ತದೆ.

ಟಿ. ಟಿ.ಯನ್ನು ನಿರೀಕ್ಷಿಸುತ್ತ ಗಾಡಿಯ ಬಳಿಯಲ್ಲಿ ನಿಂತಿದ್ದರು ಪಿ. ಪಿ. ಅಯ್ಯರ್.

ಅದೋ, ದೂರದಲ್ಲಿ ಒಬ್ಬ ಖಾಕಿ ಪ್ಯಾಂಟು, ಹ್ಯಾಟಿನ ಸಮೇತ ಇದ್ದಾನೆ. ಅವನೇ ಟಿ. ಟಿ. ಇರಬೇಕು.

"ಅಯ್ಯೋ......ಅಯ್ಯೋ...... ಅಮ್ಮಾ......ಅಮ್ಮಾ......ಕೈ......ಕೈ...... ಅಮ್ಮಾ......ಅಮ್ಮಾ......"

ಸ್ನಾನದ ರೂಮಿಗೆ ಹೋಗಿದ್ದ ಸರದಾರಜಿ ಧಡಾರೆಂದು ಬಾಗಿಲನ್ನು ಮುಚ್ಚಿದ್ದ. ಅಲ್ಲಿ ಕೈಹಾಕಿ ಒಂದು ಓರವಾಗಿ ನಿಂತಿದ್ದ ಅಯ್ಯರನ್ನು ಆತ ಗಮನಿಸಲಿಲ್ಲ. ಅಯ್ಯರ್ ಬೆರಳುಗಳು ಆ ಸಂದಿನಲ್ಲಿ ಸಿಕ್ಕಿ ಅವರು ಬೊಬ್ಬೆಹಾಕಿದ ಮೇಲೆಯೇ ಅವನು ಗಾಬರಿಯಿಂದ ಅದನ್ನು ಹಿಂದಕ್ಕೆ ಎಳೆದುಕೊಂಡದ್ದು.

ಅಯ್ಯರಿಗೆ ಸ್ಮೃತಿತಪ್ಪಿದ ಹಾಗಾಯಿತು. ಅವರು ಹಾಗೆಯೇ ಕಣ್ಣುಗಳನ್ನು ಮುಚ್ಚಿ ಕುಳಿತುಬಿಟ್ಟರು.

ಅವರು ಕಣ್ಣುಗಳನ್ನು ತೆರೆದರೆ ಗಿಜುಗಿಜು ಗುಂಪು, ತಮ್ಮ ಸುತ್ತಲೂ. ಹರಿದು ಬರುತ್ತಿರುವ ರಕ್ತವನ್ನು ಯಾರೋ ಒತ್ತಿ ನಿಲ್ಲಿಸಲು ಪ್ರಯತ್ನಿಸುತ್ತಿದ್ದರು. ಅವರ ಕೈಮೂಳೆಗಳು ಜಜ್ಜಿಹೋಗಿವೆ. ಎಡಕೈ. ಇದರಿಂದಾಗಿ ಆ ಗಾಡಿ ಆ ನಿಲ್ದಾಣವನ್ನು ಬಿಡಲು ಅರ್ಧ ಗಂಟೆ ನಿಧಾನವಾಗಿ ಹೋಯಿತು.

ರಾತ್ರಿ ಪೂರಾ ನಿದ್ದೆ ಬಾರದೆ ಅಯ್ಯರ್ ಸಂಕಟಪಟ್ಟರು. ಸರದಾರ ಎರಡು ಸಲ "ಮಾಫ್ ಕೀಜಿಯೇ, ಮಾಫ್ ಕೀಜಿಯೇ" ಎಂದವನೇ ಸುಖವಾಗಿ ಗೊರಕೆ ಹೊಡೆಯ ಲಾರಂಭಿಸಿದ್ದ,

ಬೆಳಗಾಯಿತು, ಗಾಡಿ ಮದರಾಸು ನಿಲ್ದಾಣಕ್ಕೆ ಬಂದು ಸೇರಿತು.

ಅಯ್ಯರ್ ಬೆರಳುಗಳೇ ಜಜ್ಜಿಹೋಗಿದೆ. ಇನ್ನು ಟಿ. ಟಿ. ಟಿಕೆಟನ್ನು ಎಲ್ಲಿ ಕೇಳು ತ್ತಾನೆ? ಅಯ್ಯಾದೊರೆಯೊಂದಿಗೆ ಆತನೂ ಸೇರಿಕೊಂಡು ಅವರನ್ನು ಹೊರಗೆ ಕರೆದು ಕೊಂಡು ಬಂದು ಟ್ಯಾಕ್ಸಿ ಹತ್ತಿಸಿಬಿಟ್ಟ. ಅಯ್ಯರ್ ಜತೆಯಲ್ಲಿ ಅಯ್ಯಾದೊರೆ.

ಇದರಿಂದಾಗಿ ಅಯ್ಯರ್ ಮೂರು ತಿಂಗಳು ರಜೆ ಬರೆಯಬೇಕಾಯಿತು. ಆಫೀಸಿ ನಿಂದ ಒಬ್ಬರೂ ಬಿಡದ ಹಾಗೆ ಎಲ್ಲರೂ ಬಂದು ಅಯ್ಯರನ್ನು ವಿಚಾರಿಸಿಕೊಂಡು ಹೋದರು.

ಮಹಾಲಿಂಗಂ ಸಹ ಒಂದು ದಿನ ಬಂದಿದ್ದ. ಬಹಳ ಸಮಯ ಅವರ ಬಳಿಯಲ್ಲಿ ಇದ್ದ. ಯಾರೂ ಇಲ್ಲದ ಸಮಯ ನೋಡಿ ಆತ ಹೇಳಿದ:

"ನನ್ನಿಂದ ನಿಮಗೆ ಏನೂ ತೊಂದರೆಯಾಗುವುದಿಲ್ಲ. ಎಲ್ಲವನ್ನೂ ಹರಿದು ಬಿಸಾಕಿದೆ."

ಹೀಗೆ ಹೇಳಿದವನೇ ಮಹಾಲಿಂಗಂ ಅವರ ಕೈಯನ್ನು ನೋಡಿ ಬಿಕ್ಕಿ ಬಿಕ್ಕಿ ಅತ್ತ.

ಅವನು ಹೋದಮೇಲೆ ಏ. ಏ. ಅಯ್ಯರ್ ತಮ್ಮ ಬೆರಳುಗಳನ್ನು ತಾವೇ ನೋಡಿ ಕೊಂಡರು. ಇನ್ನುಮುಂದೆ ವೀಣೆಯನ್ನು ನುಡಿಸುವುದಕ್ಕಾಗುವುದಿಲ್ಲ ಎಂದು ಡಾಕ್ಟರು

ಅವರಿಗೆ ಹೇಳಬೇಕೇ? ಎಡಕೈಯಲ್ಲಿ ಬೆರಳುಗಳೇ ಇಲ್ಲ. ಅವು ಅಪ್ಪಚ್ಚಿಯಾಗಿ ರೊಟ್ಟಿಯ ಹಾಗೆ ಆಗಿಹೋಗಿದೆ. ಇದೆಲ್ಲವೂ ಅವರಿಗೆ ಕನಸಿನಂತೆ ಕಾಣುತ್ತ ಇದೆ. ಆ ಕಾಗದ, ಕಾಗದದಲ್ಲಿನ ಬೆರಳುಗಳು, ಸುತ್ತೆ ಬಾಗಿಲು, ಅಯ್ಯೋ......

ಆದರಲ್ಲಿಯೂ ಈ ಎಡಬೆರಳುಗಳೇ ಏನು ಪಾಪಮಾಡಿದ್ದುವು? ಬಲದ ಬೆರಳುಗಳನ್ನು ಬಿಟ್ಟು ಎಡಕೈಯಿನದನ್ನು ಶ್ರೀರಾಮು ಜಜ್ಜಿದ್ದಾನಲ್ಲ, ಅವನ ವರ್ತನೆಯೇ ವಿಚಿತ್ರ! ಹೌದು, ಯಾವ ಪಾಪವನ್ನೂ ಮಾಡದ ಸೀತೆಯನ್ನು ಅವನು ಕಾಡಿಗೆ ಕಳಿಸಿದವನಲ್ಲವೆ?

ಅಯ್ಯರ್ ತಲೆದಿಂಬನ್ನು ಎಳೆದುಕೊಂಡು ಮುಖವನ್ನು ಅದರಲ್ಲಿ ಹುದುಗಿಸಿ ಒಂದೇಸಮನೆ ಕಣ್ಣೀರನ್ನು ಸುರಿಸತೊಡಗಿದರು.

## ಅಪ್ಪ ಬೇಡ

ಒಂದೇ ಮುಖಛಾಯೆಯುಳ್ಳ ಆ ಮೂವರು ಹುಡುಗಿಯರೂ ಚಿನ್ನದ ಬೊಂಬೆಗಳ ಬೊಂಬೆಗಳ ಹಾಗೆ ಇದ್ದರು. ಅವರಲ್ಲಿ ಒಂದೂವರೆ–ಎರಡು ವರ್ಷಗಳ ಅಂತರ ಅಷ್ಟೆ ಸುಮಾರು ಹದಿನೇಳು, ಹತ್ತೊಂಬತ್ತು, ಇಪ್ಪತ್ತೊಂದು—ಹೀಗೆ. ಒಂದೇ ಮೈಬಣ್ಣ. ಎತ್ತರದಲ್ಲಿ ಸ್ವಲ್ಪ ಸ್ವಲ್ಪ ವ್ಯತ್ಯಾಸ ಇದ್ದೀತು. ಒಟ್ಟಿನಲ್ಲಿ ಅವರು ಒಂದು ಗೊಂಚಲಿನಲ್ಲಿ ಅರಳಿರುವ ಮೂರು ಹೂವುಗಳು.

ಅವರಲ್ಲಿ ಯಾರಿಗೂ ಮದುವೆಯಾಗಿಲ್ಲ. ಅದರ ಬಗ್ಗೆ ಮಾತೋ ಪ್ರಯತ್ನವೋ ಯಾವುದೂ ಇಲ್ಲ. ಅವೊತ್ತಿನ ಪಾಡು ಅವೊತ್ತಿಗೆ ಎನ್ನುವ ಸ್ಥಿತಿಯಲ್ಲಿ ಇರುವ ಅವರಿಗೆ ಮದುವೆಯ ಚಿಂತೆ ಯಾಕೆ?

ಆದರೆ ಆ ಊರಿನಲ್ಲಿ ಎಷ್ಟೋ ಮದುವೆಗಳು ನಡೆದುಕೊಂಡೇ ಇವೆ. ಬಾಳೆ ತೋರಣಗಳು, ಮಂಗಳ ವಾದ್ಯದ ಮೊಳಗು—ಮಾಮೂಲು. ಎಂಥೆಂಥವರಿಗೋ ಲಗ್ನಬಲ ಕೂಡಿಬರುತ್ತಿದೆ. ಕೋಗಿಲೆ ಬಣ್ಣದ ಮಂಗಳ, ಕೋಮಲ ಇವರಿಗೆಲ್ಲ ಗುರುಬಲ ಕೂಡುತ್ತದೆ.

ಈ ಮೂವರು ಹುಡುಗಿಯರೂ ಆ ದಾರಿಯಲ್ಲಿಯೇ ಹೋಗುತ್ತಾರೆ; ಬರುತ್ತಾರೆ. ಮದುವೆಗಾಗಿ ಬರುವ ಕಾರುಗಳು. ಸ್ಕೂಟರುಗಳನ್ನು ನೋಡುತ್ತಾರೆ. ಟೆರಿಲಿನ್ ಬಟ್ಟೆಗಳನ್ನು ಧರಿಸಿರುವವರೂ ರುಮಾಲುಧಾರಿಗಳೂ ಎಲ್ಲರೂ ಸೇರಿ ಓಡಾಡುವ ಸಂತೆ. ಆದರೆ ಈ ಹುಡುಗಿಯರು ಬೇಗ ಹೋಗಬೇಕು. ಬಸ್ಸನ್ನು ಹಿಡಿಯಬೇಕು. ಇಂಥವನ್ನೆಲ್ಲ ನೋಡಲು ಅವರಿಗೆ ಸಮಯ ಎಲ್ಲಿದೆ?

ಹಿರಿಯವಳು ವೇದ ಹತ್ತು ಗಂಟೆಗೆ ತಂತಿಕಾರ್ಯಾಲಯಕ್ಕೆ ಹೋಗಿ ಸೇರಬೇಕು. ಎರಡನೆಯವಳು ಕನಕ ಆ ಸಮಯಕ್ಕೆ ಕಾಲೇಜು, ಮೂರನೆಯವಳು ಚಂಪಕ ಹತ್ತು ಗಂಟೆಗೆ ಹೋದರೇ ಟೈಪಿಂಗ್ ಮಿಷಿನ್ ಸಿಕ್ಕುತ್ತದೆ. ಅವಳು ಕೆಲಸಕ್ಕೆ ಹೋಗುತ್ತಿಲ್ಲ, ಕಾಲೇಜಿಗೂ ಹೋಗುತ್ತಿಲ್ಲ. ಎಸ್. ಎಸ್. ಎಲ್. ಸಿ. ಓದಿದ್ದು ಸಾಕೆಂದು ಇನ್‌ಸ್ಟಿಟ್ಯೂಟ್ ಸೇರಿದ್ದಾಳೆ. ಸ್ವಲ್ಪ ನಿಧಾನವಾಗಿ ಹೋದರೆ. ಮಿಷಿನ್ನುಗಳು ಖಾಲಿಯಾಗುವವರೆಗೂ ಆಕೆ ಕಾದು ನಿಲ್ಲಬೇಕು.

ವೇದಳ ಸಂಬಳದಿಂದಲೇ ಈಗ ಸಂಸಾರ ನಿರ್ವಹಣೆ ಆಗುತ್ತ ಇದೆ. ಹಸಿದು ಇಲ್ಲದೆ ಊಟ ಸಿಗುತ್ತ ಇದೆ. ಒಂದು ಅನ್ನ, ಸಾರು. ಇದಕ್ಕೆ ಊಟ ಎಂದು ತಾನೆ ಹೇಳಬೇಕು? ಸಂಬಳ ತೆಗೆದುಕೊಂಡ ಮೊದಲ ವಾರ ಅಲ್ಪಸ್ವಲ್ಪ ತರಕಾರಿ ದರ್ಶನ. ಪ್ರತಿದಿನವೂ ಹೀಗೆಯೇ ನಡೆಯಬೇಕು ಎಂದರೆ ಕನಕ ಕಾಲೇಜಿಗೆ ಹೋಗುವುದು ಹೇಗೆ? ಚಂಪಕ ಇನ್‌ಸ್ಟಿಟ್ಯೂಟಿಗೆ ಹೋಗುವುದು ಹೇಗೆ? ಇನ್ನು ಹತ್ತು ತಿಂಗಳು ಹೀಗೆಯೇ

ಕಳೆದರೆ ಚಂಪಕಳ ಅಭ್ಯಾಸ ಮುಗಿಯುತ್ತದೆ. ಎಲ್ಲಿಯಾದರೂ ಒಂದು ಕೆಲಸ ಆಕೆಗೆ ಸಿಕ್ಕುತ್ತದೆ. ವೇದಳ ಕಾರ್ಯಾಲಯದಲ್ಲಿಯೇ ಹೇಗಾದರೂ ಮಾಡಿ ಅವಳನ್ನು ಸೇರಿಸ ಬಹುದು. ಅದು ಆಗುವ ಕಡೆ ಅವಳು 'ಸ್ಟ್ರಾಂಗ್' ಆಗಿ ಈಗಿನಿಂದಲೇ ಹೇಳಿಕೊಂಡಿದ್ದಾಳೆ. ಅಷ್ಟರೊಳಗೇ ಅವಳಿಗೆ ಹದಿನೆಂಟೂ ತುಂಬುತ್ತದೆ. ಡಿಪ್ಲೊಮಾ ಸರ್ಟಿಫಿಕೇಟೂ ಕೈಯಲ್ಲಿ ಬಂದು ಸೇರುತ್ತದೆ.

ಇದೆಲ್ಲ ಒಂದು ವ್ಯವಸ್ಥೆ ಆಗುವ ವರೆಗೆ ಹೊಟ್ಟೆತುಂಬ ಊಟಮಾಡಿದರೆ ಬಟ್ಟೆಗೆ ಕೊರತೆ. ಬಟ್ಟೆಗೆ ಮನ ಒಲಿದರೆ ಚೆನ್ನುಚೆನ್ನಾದುದು ಬೇಕೆಂದರೆ ಹೊಟ್ಟೆಗೇ ತಾಳ. ಏನು ಮಾಡುವುದು?

ಮೊದಲೆಲ್ಲ ಅವರು ಎಷ್ಟು ಬವಣೆಪಟ್ಟರು? ಅದರೊಂದಿಗೆ ಈಗಿನ ಪರಿಸ್ಥಿತಿಯನ್ನು ಹೋಲಿಸಿದರೆ ಎಷ್ಟೋ ಪಾಲು ಮೇಲು. ಚಂಪಕ ಸಂಪಾದಿಸುವುದಕ್ಕೆ ಪ್ರಾರಂಭಿಸಿದರೆ ತಮ್ಮ ಸ್ಥಿತಿ ಮೇಲೂ ಉತ್ತಮಗೊಳ್ಳುತ್ತದೆ. ಕನಕಳಿಗೆ ಇನ್ನೂ ಎರಡು ವರ್ಷ ಕಾಲೇಜು ವ್ಯಾಸಂಗ. ಆ ಮೇಲೆ ಯಾವುದೇ ಟ್ರೈನಿಂಗ್ ಎಂದರೂ ಒಂದೇ ವರ್ಷ. ಹೀಗೆ ಮೂರು ವರ್ಷಗಳನ್ನು ಕಳೆದರೆ ಆ ಮೇಲೆ ಚಿಂತೆಯಿಲ್ಲ. ನೆನೆದುದನ್ನೆಲ್ಲ ಕೊಳ್ಳಬಹುದು. ಹೊಟ್ಟೆತುಂಬ ಊಟಮಾಡಬಹುದು. ಅದುವರೆಗೆ ಬೇರೆ ಯೋಚನೆಗಳಿಗೆ ಎಡೆಯಿಲ್ಲ, ಊರಿನಲ್ಲಿಯೂ ಜಗತ್ತಿನಲ್ಲಿಯೂ ಪ್ರತಿನಿತ್ಯ ಏನು ಏನೋ ನಡೆದುಕೊಂಡೇ ಇರುತ್ತವೆ. ಅದರ ಬಗ್ಗೆ ಅವರು ಯಾಕೆ ತಲೆಕೆಡಿಸಿಕೊಳ್ಳಬೇಕು?

ತಮ್ಮ ತಾಯಿ ಸುಂದರಮ್ಮ ತಮಗಾಗಿ ಎಂಥ ಕಷ್ಟ ಕೋಟಲೆಗಳನ್ನು ಸಹಿಸಿಕೊಂಡಿದ್ದಳು ಎನ್ನುವುದು ಆ ಹುಡುಗಿಯರಿಗೆ ತಿಳಿದಿದೆ. ಗುಡುಗಿನ ಹಾಗೆ ಒಂದರ ಮೇಲೊಂದು ಮೊಳಗುತ್ತ ತಮ್ಮ ಸ್ಥಿತಿ ಚಿಂತಾಜನಕವಾದಾಗ, ಆ ಹುಡುಗಿಯರು ತಮ್ಮ ತಾಯಿಯೇ ಗತಿ ಎಂದು ಅವಳ ಹಿಂದೆ ಅಡಗಿಕೊಂಡದ್ದುಂಟು.

ಸುಂದರಮ್ಮ ತಮ್ಮ ಮೂವತ್ತಾರನೆಯ ವರುಷಗಳ ವರೆಗೆ ಹೊರಜಗತ್ತನ್ನೇ ತಿಳಿಯದವಳಂತೆ ಇದ್ದಳು. ಸಂಸಾರಸುಖವನ್ನು ಮಧುರವಾಗಿ ಅನುಭವಿಸುವ ವಯಸ್ಸು. ಮಿನುಗುವ ನಂದಾದೀಪದಂತೆ ಕುಂಕುಮವಿಟ್ಟು ಹೂಮುಡಿದು ಲಕ್ಷಣವಾಗಿ ಇದ್ದವಳು. ಅವಳು ಮಾಡಿದ ಅಡಿಗೆಗೆ ಅದೆಲ್ಲಿಂದ ಆ ರುಚಿ ಬರುತ್ತಿತ್ತೋ ಏನೋ?

ಯಾರು ಯಾರೋ ಅವಳು ಮಾಡಿದ ಅಡಿಗೆಯನ್ನು ಊಟಮಾಡಿ ಬಾಯಿತುಂಬಾ ಹೊಗಳುತ್ತಿದ್ದರು. ಆದರೆ ಯಾರು ಹೊಗಳಬೇಕೋ, ಆ ಸವಿಮಾತಿನಿಂದ ಅವಳ ಹೃದಯ ಹಿಗ್ಗುತ್ತದೋ—ಅಂಥವನು ಬಾಯಿತೆರೆಯಬೇಕಲ್ಲ. ಊಹೂಂ, ಒಂದು ದಿನವೂ ಕಾಣೆ. ಹೋಗಲಿ, ಹೊಗಳದಿದ್ದರೆ ಹೋಗಲಿ, ತಪ್ಪಾದರೂ ಹೇಳದಿದ್ದರೆ ಸಾಕಲ್ಲ. ಅದೂ ಸಹ ಇಲ್ಲ. ತಲೆತುಂಬ ಅಹಂಭಾವ.

ಆ ದಿನಗಳಲ್ಲಿ ಭೂಮಿ ಮನೆ ಎಲ್ಲ ಇದ್ದು, ಇರುವ ವರೆಗೆ ಚೆನ್ನಾಗಿ ತಿಂದು ಮುಗಿಸಿದ್ದಾಯಿತಂ. ಉಳಿದದ್ದು ಪಳಿದದ್ದು ಇಸ್ಪೀಟಿಗೂ ಭೋಗಕ್ಕೂ ಸರಿಹೋಯಿತು. ಪಕ್ಕದ ಗ್ರಾಮದಲ್ಲಿ ಇವರಿಗೆ ಇದ್ದ ಒಂದು ಹೊಲವನ್ನೂ ಮನೆಯನ್ನೂ ಕಣ್ಣಮ್ಮ ತನ್ನ ಹೆಸರಿಗೆ ಬರೆಯಿಸಿಕೊಂಡುಬಿಟ್ಟಳು. ಆ ಕಣ್ಣಮ್ಮನಿಗೆ ಒಂದು ಹುಡುಗಿ. ವೇದಳಿಗಿಂತ ಒಂದು ವರ್ಷ ವಯಸ್ಸಿನಲ್ಲಿ ದೊಡ್ಡದು. ಈತ ಆ ಹುಡುಗಿಗೆ ಹಾಡು, ನಾಟ್ಯ ಎಂದು ಹೇಳಿಕೊಂಡು ಮನೆಯನ್ನು ಬುಡಮೇಲು ಮಾಡಿಕೊಂಡಿದ್ದ.

ವೃಕ್ಷ, ಇಲ್ಲಿ, ಈ ಮನೆಯ ಹಿತ್ತಿಲಿನಲ್ಲಿ; ಕೊಂಬೆ ಚಾಚಿ ಹೂ ಉದುರುವುದು ಆ ಮನೆಯಲ್ಲಿ. ಊಟ ಇಲ್ಲಿ; ಹಾಸಿಗೆ ಅಲ್ಲಿ. ಅದಕ್ಕೆ ತಕ್ಕಹಾಗೆ ಒಂಬತ್ತೂವರೆ ಗಂಟೆಗೆ ಒಂದು ಗಾಡಿ. ಅದರಲ್ಲಿ ಹೋಗಿ ಕುಳಿತರೆ, ಹತ್ತು ಹತ್ತೂಕಾಲಿಗೆಲ್ಲ ಅಲ್ಲಿ ಹೋಗಿ ಸೇರಬಹುದು.

ಈತ ಆಗಾಗ್ಗೆ ಅಲ್ಲಿಗೆ ಹೋಗುತ್ತಾನೆ ಎನ್ನುವುದನ್ನು ಅಲ್ಲಿ ನೋಡಿಬಂದವರು ಇಲ್ಲಿ ತಿಳಿಸಿದರು.

"ಏನೇ ಸುಂದರೀ, ನಿನಗೂ ಈಗ ಮೂರು ಮಕ್ಕಳಾಗಿವೆ. ಹೀಗೆ ಈತನನ್ನು ಹೋದ ದಾರಿಯಲ್ಲಿಯೇ ಬಿಟ್ಟರೆ ಹೇಗೆ?" ಎಂದು ಕೆಲವರು ಕೇಳಿದರು.

"ಏನು ಮಾಡಲಿ? ಆ ಊರಿನ ಹೆಸರನ್ನೆತ್ತಿದರೇ ಇವರು ರೌದ್ರ ಆಗುತ್ತಾರೆ. ಎಂಥದ್ದೂ ಇಲ್ಲ ಎನ್ನುತ್ತಾರೆ."

"ಹುಚ್ಚೀ, ಹುಚ್ಚಿ, ಏನು ಮಾಡಬೇಕೂಂತ ಕೇಳ್ತೀಯಲ್ಲ. ಅದನ್ನೆಲ್ಲ ನಿನಗೆ ಹೇಳಿಕೊಡಬೇಕೇನು?"

ಆಕೆ ತನಗೆ ತೋರಿದ ರೀತಿಯಲ್ಲಿ ಏನು ಮಾಡಬೇಕೋ ಅದೆಲ್ಲವನ್ನೂ ಮಾಡಿದಳು. ಊಹುಂ, ಪ್ರಯೋಜನ ಏನೂ ಆಗಲಿಲ್ಲ. ಚಿನ್ನ, ಬಣ್ಣ ಎಲ್ಲವೂ ಒಂದೊಂದಾಗಿ ಕರಗುತ್ತಲೇ ಇದ್ದುವು. ಕೊನೆಕೊನೆಗೆ ಮನೆಗೆ ಬಂದುಕೊಂಡಿದ್ದ ಆತ ಬರುವುದನ್ನೂ ನಿಲ್ಲಿಸಿಬಿಟ್ಟ.

ಕೆಲವು ದಿನಗಳು ಆತ ಆ ಊರಿನಲ್ಲಿಯೇ ಇದ್ದಾನೆ ಎಂದರು. ಬಳಿಕ ಇವನಾಗಿಯೆ ಹೊರಟುಹೋದನೋ ಅವರಾಗಿಯೆ ಓಡಿಸಿದರೋ ಅವನಂತೂ ಮತ್ತೆ ಅಲ್ಲಿ ಕಾಣಸಿಗಲಿಲ್ಲ.

ಸುಂದರಮ್ಮ ಕಾದು ಕಾದು ನೋಡಿದಳು. ಮನೆ ದುಃಖದಲ್ಲಿ ಮುಳುಗಿತು. ನಗನಾಣ್ಯ ಇದ್ದದ್ದು ಎಲ್ಲವನ್ನೂ ಅಡವಿಟ್ಟದ್ದು ಆಯಿತು. ಮಾರಿದ್ದಾಯಿತು. ಆಗ ಪಟ್ಟಣದಲ್ಲಿದ್ದ ಅವಳ ಅಣ್ಣ ಬಾಯೆಂದು ಕಾಗದ ಹಾಕಿದ ಮೇಲೆ ಮಕ್ಕಳೊಂದಿಗೆ ಆಕೆ ಅಲ್ಲಿಗೆ ಹೋಗಿ ಸೇರಿದಳು.

ಸುಂದರಮ್ಮನ ಅಣ್ಣ ತಂಗಿಗೆ ಸಹಾಯಮಾಡಿಕೊಂಡೇ ಇದ್ದ. ವೇದಳಿಗೆ ದೊಡ್ಡ ಪರೀಕ್ಷೆಯ ಸಮಯ. ಆಗ ಅವಳ ಅಣ್ಣ ಹಠಾತ್ತನೆ ಕಾಲವಾದ.

ಈ ಆಘಾತವನ್ನು ಸುಂದರಮ್ಮ ಹೇಗೆ ಸಹಿಸಿಕೊಂಡಳೋ ತಿಳಿಯದು. ಹುಣ್ಣಿನ ಮೇಲೆ ಬೊಕ್ಕೆ. ವೇದಳಿಗೆ ಪರೀಕ್ಷೆ ಹೋಯಿತು. ಮಾರಿ ಜೀವಿಸಲು ಮನೆಯಲ್ಲಿ ಏನೂ ಇಲ್ಲ, ಉಳಿಕೆ ಏನಾದರೂ ಇದ್ದಿದ್ದರೆ ಅವರಿಗೆ ಆಗ ಅದು ಸಮಯಕ್ಕೆ ಬಂದಿರ ಬೇಕು.

ಇಂಥ ಸ್ಥಿತಿಯಲ್ಲಿಯೇ ವೇದ ಎರಡನೆಯ ಸಲ ಪರೀಕ್ಷೆಗೆ ಕುಳಿತು ತೇರ್ಗಡೆಯಾದಳು. ಯಾರೋ ಪುಣ್ಯಾತ್ಮರು ಕನಿಕರಪಟ್ಟು ಅವಳಿಗೆ ಟೆಲಿಫೋನ್ ಆಪರೇಟರ್ ಕೆಲಸ ಕೊಡಿಸಿದರು. ಹೀಗಾಗಿ ಸಂಸಾರ ನಿರ್ವಹಣೆಗೆ ಒಂದು ದಾರಿ ಆಯಿತು. ಕನಕ ಓದಲು ಸಾಧ್ಯವಾಯಿತು.

ಈ ಮಧ್ಯಕಾಲದಲ್ಲಿ ಅವರು ಅನುಭವಿಸಿದ ನರಕಯಾತನೆ? ಎಷ್ಟೋ ದಿನಗಳು ಊಟಕ್ಕೇ ಇಲ್ಲ. ಮನೆಬಾಡಿಗೆ ಕೊಡಲಾರದ ಸ್ಥಿತಿ. ಈವಾಗ ಅವರು ಮೂವರೂ ಪ್ರಾಯಕ್ಕೆ ಬಂದ ಹೆಣ್ಣುಮಕ್ಕಳು. ಮೂವರದೂ ಕಣ್ಣುಗಳು ಸೂರೆಗೊಳ್ಳುವಂಥ ರೂಪ. ಗಂಡಿನ ಸಹಾಯವಿಲ್ಲದೆ ಅವರ ಮನೆಯ ಸಂಸಾರ ಈಗ ಸಾಗುತ್ತ ಇದೆ.

ಸುಂದರಮ್ಮ ಬೆಂಕಿಯನ್ನು ಮಡಿಲಲ್ಲಿ ಕಟ್ಟಿಕೊಂಡು ಆ ದಿನಗಳನ್ನು ಕಳೆದಳು. ಚಂಪಕ ಈ ಕಷ್ಟದ ದಿನಗಳಲ್ಲಿಯೇ ಹನ್ನೊಂದನೆಯ ತರಗತಿಗೆ ಪ್ರವೇಶಿಸಿದ್ದಾಳೆ. ಒಂದು ವರ್ಷ, ಎರಡು ವರ್ಷ ಕಳೆದರೆ ಅವಳೂ ಕೆಲಸಕ್ಕೆ ಹೋಗುತ್ತಾಳೆ. ಆ ಮೇಲೆ ಕನಕ ಒಬ್ಬಳು ಚೆನ್ನಾಗಿ ಓದಿದರೆ ಸಾಕು. ಇವರಿಬ್ಬರೂ ಸೇರಿ ಅವಳನ್ನು ಮೇಲಕ್ಕೆ ತಂದರೆ, ಬಳಿಕ ಅವಳೇ ಎಲ್ಲರ ಹೊರೆಯನ್ನೂ ಹೊರಲು ಸಾಧ್ಯವಿದೆ.

ಧೈರ್ಯವನ್ನು ಕೈಬಿಡದೆ ಸುಂದರಮ್ಮ ಈ ಪ್ರವಾಹದಲ್ಲಿಯೇ ಈಜಿದಳು. ದಡ ಸೇರಿದಳು.

ಒಂದು ದಿನ ಕನಕ ಕಾಲೇಜಿನಿಂದ ಬರಲು ನಿಧಾನವಾಗಿ ಹೋಯಿತು. ವೇದ ಸಹ ಮನೆಗೆ ಬಂದು ಸೇರಿದ್ದಾಳೆ. ಕಾಲೇಜಲ್ಲಿ ಏನಾದರೂ ವಿಶೇಷ ಇದ್ದ ದಿನ ಬೆಳಗ್ಗೆಯೇ ಅವಳು ತಿಳಿಸುವುದು ರೂಢಿ. ಇವೊತ್ತು ಏನೂ ಹೇಳಿಲ್ಲ. ಯಾಕೆ ಬರಲಿಲ್ಲ, ಎಂದು ಎಲ್ಲರಿಗೂ ಯೋಚನೆ. ಬಹಳ ಸಮಯ ಕಳೆದ ಮೇಲೆಯೇ ಅಂದು ಅವಳು ಬಂದದ್ದು.

ವೇದ ಈಗ ಅವಳಿಗೆ ಪ್ರಶ್ನೆ ಹಾಕಿದಳು:

"ಯಾಕೇ ಕನಕಾ, ಇವೊತ್ತು ಇಷ್ಟು ಹೊತ್ತು......"

"ದಾರಿಯಲ್ಲಿ ಅಪ್ಪ ಸಿಕ್ಕಿದ್ದರು......"

ಸುಂದರಮ್ಮ ದಿಗ್ಭ್ರಮೆಗೊಂಡಳು.

"ಅಪ್ಪ? ಎಲ್ಲಿ?" ಎಂದು ಚಂಪಕ ಮತ್ತು ವೇದ ಕನಕಳನ್ನು ಸುತ್ತುಗಟ್ಟಿದರು. ಸುಂದರಮ್ಮನ ಚಿಂತೆಯೂ ನೋಟವೂ ಎಲ್ಲಿಯೋ ಇದ್ದ ಹಾಗಿತ್ತು.

"ಕಾಲೇಜಿಂದ ಬರ್ತಾ ಇರೋವಾಗ ದಾರಿಯಲ್ಲಿ."

"ಹೌದಾ?"

"ಹೌದು. ಯಾರೋ ಸಂಗೀತ ವಿದ್ವಾಂಸರ ಹಾಗೆ ಜುಬ್ಬಾ, ಮೇಲುಹೊದಿಕೆ ಹೊದೆದು ನಿಂತಿದ್ದರು. ನಾನು ಯಾರೋ ಎಂದುಕೊಂಡಿದ್ದೆ. ಇವರು ನಮ್ಮ ತಂದೆ ಎಂದು ನನಗೆ ಹೇಗೆ ತಿಳಿಯಬೇಕು? ಬಳಿಕ ಅವರೇ ನನ್ನ ಹೆಸರು ಹಿಡಿದು ಕೂಗಿದರು. ತಿರುಗಿ ನೋಡಿದೆ, ಚೆನ್ನಾಗಿ ಗಮನಿಸಿದ ಮೇಲೆ ಅವರನ್ನು ನಾನು ಕಂಡುಹಿಡಿದೆ. ಶ್ರೀಗಂಧ, ಅತ್ತರಿನ ಸುವಾಸನೆ ಮೂಗನ್ನು ಕೊರೆಯುತ್ತಿರಲು ಬಾಯಿ ತುಂಬಾ ತಾಂಬೂಲ ಹಾಕಿ ಅಪ್ಪ ಅಲ್ಲಿ ನಿಂತಿದ್ದರು."

"ಹುಂ. ಆ ಮೇಲೆ?"

"ಆ ಮೇಲೆ ನಮ್ಮನ್ನೆಲ್ಲ ವಿಚಾರಿಸಿದರು. ವಿಳಾಸ ಕೇಳಿದರು. ಕೊಟ್ಟೆ. ಅಷ್ಟರಲ್ಲಿ ಬಸ್ ಬರಲು ಆ ಮೇಲೆ ನೋಡುತ್ತೇನೆ ಎಂದು ಹೇಳಿ ಹೊರಟುಹೋದರು."

"ಅದಕ್ಕಾಗಿ ಯಾಕೆ ಇಷ್ಟು ಹೊತ್ತು......"

ಹೋಟೆಲಿಗೆ ಹೋದೆವು. ಬೇಡ ಎಂದೆ. ಕೇಳಲಿಲ್ಲ. ಬಲವಂತ ಮಾಡಿದ ಮೇಲೆ ಬರೋಲ್ಲ ಎಂದು ಹೇಗೆ ಹೇಳಲಿ?"

"ಬೇರೆ ಏನೂ ಅವರು ಕೇಳಲಿಲ್ಲವೊ?"

"ವೇದಳಿಗೆ ಸಂಬಳ ಎಷ್ಟು ಎಂದು ಕೇಳಿದರು. ಚಂಪಕ ಏನು ಮಾಡಿಕೊಂಡಿದ್ದಾಳೆ ಎಂದರು ಅಷ್ಟೇ."

"ಎಲ್ಲಿದ್ದಾರಂತೆ?" ಎಂದಳು ವೇದ.

"ಗೊತ್ತಿಲ್ಲ."

"ಏನು ಮಾಡಿಕೊಂಡಿದ್ದಾರಂತೆ?"

"ಅದೂ ಗೊತ್ತಿಲ್ಲ."

"ನೀನು ಕೇಳಬೇಡವೇನೇ?"

"ಕೇಳಿದೆ. ಆದರೆ ಅಪ್ಪ ಮಾತು ಬದಲಾಯಿಸಿಬಿಟ್ಟರು."

ಸುಂದರಮ್ಮ ಈಗ ತಾಳ್ಮೆಯನ್ನು ಕಳೆದುಕೊಂಡವಳಂತೆ "ಸರಿ, ಸರಿ, ನಿಮ್ಮ ಕೆಲಸ ಗಮನಿಸಿ ಹೋಗಿ" ಎಂದಳು.

ಆ ಮೇಲೆ ಅವರನ್ನು ನೋಡಿದ್ದು, ಮಾತಾಡಿದ್ದು ಎಲ್ಲವೂ ಆ ಮನೆಯಲ್ಲಿ ಮರೆತೇ ಹೋಯಿತು.

ಒಂದು ದಿನ ಚಂಪಕಳ ನಂಬರು ದಿನಪತ್ರಿಕೆಯಲ್ಲಿ ಪ್ರಕಟವಾಗಿತ್ತು. ಆ ದಿನ ಆಕೆ ಮಾರುತಿ ದೇವಸ್ಥಾನಕ್ಕೆ ಹೋಗಿ ತೆಂಗಿನಕಾಯಿ ಒಡೆದು ಮನೆಗೆ ಹಿಂದಿರುಗಿದಳು.

"ತೆಂಗಿನ ಕಾಯಿ ಒಡೆದಿಯೊ?" ಎಂದು ಕೇಳುತ್ತ ಸುಂದರಮ್ಮ ಬಾಗಿಲ ಬಳಿ ಬಂದಾಗ, ಅಲ್ಲಿ ನೆಳಲಿನ ಹಾಗೆ ಒಂದು ಆಕೃತಿ ನಿಂತಿರುವುದನ್ನು ಕಂಡು ರೋಮಾಂಚನ

ಗೊಂಡು ತಾನೂ ಹಾಗೆಯೇ ನಿಂತಳು. ಚಂಪಕ ತಾಯಿಯ ಹಿಂದೆ ಬಂದಿದ್ದವಳು ಆತನನ್ನು ದಿಟ್ಟಿಸಿ ನೋಡಿದಳು. ಹೌದು, ಆತ ಅವರೆಲ್ಲರ ತಂದೆ. ಏಳೆಂಟು ವರ್ಷಗಳ ಹಿಂದೆ ನೋಡಿದ್ದ ರೂಪ. ಇದ್ದರೂ ಕನಕ ವರ್ಣಿಸಿದ್ದರ ಮೇಲೆ ಒಂದು ಬಗೆಯಾಗಿ ಕಲ್ಪನೆ ಮಾಡಿಕೊಂಡು ಆತನನ್ನು ಕಂಡುಹಿಡಿಯಲು ಸಾಧ್ಯವಾಯಿತು.

ಸುಂದರಮ್ಮನಿಗೆ ಆಗ ಒಂದೂ ತೋಚದೆ ಮೆಲ್ಲ ಮೆಲ್ಲಗೆ ಹಿಂದಕ್ಕೆ ಸರಿದು ಕತ್ತಲೆಯಲ್ಲಿ ಹೋಗಿ ನಿಂತಳು.

ಹುಡುಗಿಯರೆ ಎದ್ದು ಹೋಗಿ ತಂದೆಯನ್ನು ಸ್ವಾಗತಿಸಿ, ಮನೆಯೊಳಗೆ ಕರೆದುಕೊಂಡು ಬಂದರು. ಆತ ಅಲ್ಲಿಗೆ ಪ್ರವೇಶಿಸುವಾಗ ಶ್ರೀಗಂಧದ ಪರಿಮಳ ಮನೆಯೆಲ್ಲವನ್ನೂ ವ್ಯಾಪಿಸಿತು. ದೊಡ್ಡ ಸಂಗೀತ ವಿದ್ವಾಂಸನಂತೆ ಕಾಣುತ್ತಿದ್ದ ಆತ ಅಲ್ಲಿ ಬಂದು ಕುಳಿತುಕೊಂಡಾಗ, ಆತನ ಯೋಗ್ಯತೆಗೆ ಈ ಮನೆ ತಕ್ಕುದಲ್ಲವೇನೋ ಎಂದೂ ಭಾವಿಸುವಂತಾಯಿತು.

ಹುಡುಗಿಯರಿಗೆ ಕುತೂಹಲವೋ ಕುತೂಹಲ.

"ನಿನಗೆ ಈ ಮನೆ ಹೇಗಪ್ಪಾ ಗೊತ್ತಾಯಿತು? ನಾನು ವಿಳಾಸ ಕೊಟ್ಟಿದ್ದ ಮನೆಯನ್ನು ಈಗ ಬದಲಾಯಿಸಿದ್ದೇವಲ್ಲ" ಎಂದಳು ಕನಕ.

"ನಾನು ಅಲ್ಲಿ ಹೋಗಿ ವಿಚಾರಿಸಿದೆ. ಯಾರಿಗೂ ತಿಳಿಯದು ಎಂದರು. ಏನು ಮಾಡೋಣ ಎಂದು ಯೋಚಿಸುತ್ತ ಆ ಮಾರುತಿ ಗುಡಿಯ ಬಳಿ ಹೋದೆ, ಚಂಪಕಳನ್ನು ನೋಡಿದೆ, ಮೊದಲು ನೀನೇ ಎಂದು ಭಾವಿಸಿದೆ. ಹಾಗೆ ಆಕೆ ಬೆಳೆದಿದ್ದಾಳೆ, ಆ ಮೇಲೆ ಸಂದೇಹವಾಯಿತು. ಅವಳನ್ನು ಹಿಂಬಾಲಿಸಿ ಇಲ್ಲಿಗೆ ಬಂದು ಸೇರಿದೆ. ಹೇಗೋ ನಿಮ್ಮಲ್ಲಿಗೆ ಬಂದು ಸೇರಿದ್ದಾಯಿತಲ್ಲ. ನಿಮ್ಮನ್ನು ನೋಡಿದ್ದಾಯಿತು. ಇಗೊಳ್ಳಿ, ಈ ಸೇಬಿನ ಹಣ್ಣುಗಳನ್ನು ತೆಗೆದಿಡಿ" ಎಂದು ಆತ ತನ್ನ ಕೈಚೀಲದಲ್ಲಿದ್ದ ಮೂರು ನಾಲ್ಕು ಸೇಬಿನ ಹಣ್ಣುಗಳನ್ನು ಹೊರತೆಗೆದಿಟ್ಟ.

ಆತ ಸುಂದರಮ್ಮನ ಕೂಡ ಏನೂ ಮಾತಾಡಲಿಲ್ಲ. ಇಷ್ಟು ವರ್ಷಗಳು ಕಳೆದ ಮೇಲೆ ಬಂದಿರುವವನನ್ನು ಕುರಿತು ಆಕೆಯೂ ಚಕಾರವೆತ್ತಲಿಲ್ಲ. ಆದರೆ ಸ್ವಲ್ಪ ಹೊತ್ತಿನಲ್ಲಿಯೇ ಕತ್ತರಿಸಿದ ಸೇಬಿನ ಹೋಳುಗಳು ಅಲ್ಲಿಗೆ ಬಂದಿತು. ಅದರ ಹಿಂದೆಯೇ ಟೀ ಕಪ್ಪುಗಳನ್ನಿಟ್ಟ ಟ್ರೇ ಸಹ.

ಅವೊತ್ತು ಅವರ ಮನೆಯಲ್ಲಿ ಹಬ್ಬದ ಸಡಗರ. ಎಷ್ಟೋ ಸಂಕಟದಿಂದ ಅವರು ಪಾಲಾಗಿದ್ದರೂ ಇದಕ್ಕೆಲ್ಲ ಮೂಲ ಕಾರಣ ಈ ಮಹಾನುಭಾವರೇ ಆದರೂ ಬಂದಿರುವವನು ತಂದೆಯಷ್ಟೆ. ತಂದೆಯಿಂದ ಅವರಿಗೆ ಉಂಟಾಗಿರುವ ಅಪಮಾನ ಅಷ್ಟು ಇಷ್ಟಲ್ಲ. ಆದ್ದರೂ ಅವೆಲ್ಲವನ್ನೂ ಮರೆತು, ಈಗ ತಮ್ಮನ್ನು ನೋಡಲು ಬಂದಿರುವ ತಂದೆಯ ಮುಖವನ್ನು ಕಂಡೊಡನೆ ಅವರೆಲ್ಲ ಸಂತೋಷದ ಬುಗ್ಗೆಯಾದರು.

ಆ ಮನೆಗೆ ಇಂದು ಏನೋ ಹೊಸ ಕಳೆ ಬಂದ ಹಾಗೆ. ಅವೊತ್ತು ಒಂಬತ್ತು ಗಂಟೆಗೆಲ್ಲ ಊಟ ಮುಗಿಸಿ ಸೆಖೆಯನ್ನು ತಾಳಲಾಗದೆ ಆತ ಒಂದು ಬೀಸಣಿಗೆಯನ್ನು ಕೈಯಲ್ಲಿ ಹಿಡಿದು ಮಲಗಲು ಅಣಿಯಾದ. ಮಲಗಿದ ಮೇಲೆ ಬಹಳ ಹೊತ್ತಿನ ವರೆಗೂ ಬೀಸಣಿಗೆಯಿಂದ ಬೀಸುವ ಶಬ್ದ ಕೇಳುತ್ತಲೇ ಇತ್ತು. ಮತ್ತೆ ಆತ ಯಾವಾಗ ನಿಲ್ಲಿಸಿದನೋ, ಮಲಗಿದನೋ ಆ ಹುಡುಗಿಯರಿಗೆ ತಿಳಿಯದು.

ಬೆಳಗಿನ ಜಾವ ಸುಂದರಮ್ಮ ಸ್ನಾನ ಮುಗಿಸಿ ಹಣೆಗೆ ಕುಂಕುಮವನ್ನಿಟ್ಟುಕೊಂಡಿದ್ದಳು. ಅಪ್ಪ ಇನ್ನೂ ನಿದ್ರಿಸುತ್ತಲೇ ಇದ್ದಾರೆ. ಇದಿಷ್ಟೇ ಆ ಮೇಲೆ ಆ ಹುಡುಗಿಯರಿಗೆ ತಿಳಿದದ್ದು.

"ರಾತ್ರಿ ಬಹಳ ಹೊತ್ತಿನ ವರೆಗೆ ಅಪ್ಪನಿಗೆ ನಿದ್ದೆ ಬರಲಿಲ್ಲಾಂತ ಕಾಣುತ್ತದೆ. ಬೀಸಿಕೊಂಡೇ ಇದ್ದರು" ಎಂದಳು ಚಂಪಕ.

ಸುಂದರಮ್ಮ ಯಾವ ಮಾತೂ ಆಡಲಿಲ್ಲ. ತಾಯಿಯಿಂದ ಉತ್ತರ ಬರುತ್ತದೆ ಎಂದು ಚಂಪಕ ಈ ಮಾತನ್ನು ಹೇಳಿಯೂ ಇರಲಿಲ್ಲ. ವೇದಳಿಗೋ ತನ್ನ ಆಫೀಸಿನಲ್ಲಿ ಕೆಲಸ ಮಾಡುವಾಗಲೂ ಸಹ ತನ್ನ ತಂದೆ ಬಂದದ್ದು ದೊಡ್ಡ ನಿಧಿ ಸಿಕ್ಕಿದ ಹಾಗೆ ಮನಸ್ಸಿಗೆ ತುಂಬಾ ಉಲ್ಲಾಸ.

"ಏನಮ್ಮಾ, ಇದ್ದರೂ ನೀನು ತುಂಬಾ ಕೆಟ್ಟವಳು. ಇಷ್ಟು ವರ್ಷಗಳು ಕಳೆದ ಮೇಲೆ ಅಪ್ಪ ಬಂದಿದ್ದಾರೆ. ಅವರ ಕೂಡ ನೀನು ಒಂದು ಮಾತೂ ಆಡುತ್ತಿಲ್ಲ ಯಾಕೆ?" ಎಂದು ಕೇಳಿದಳು ಚಂಪಕ.

"ಸರಿ, ಸರಿ, ನಿನ್ನ ಕೆಲಸ ನೀನು ಗಮನಿಸಿಕೋ ಹೋಗು,"

"ಎಲ್ಲ ಮಾತಾಡ್ತಾಳೆ. ನಾವು ಇಲ್ಲದ ಸಮಯ ನೋಡಿ" ಎಂದಳು ವೇದ.

ಹಾಗೆಯೇ ಆಗಬೇಕು ಎನ್ನುವ ಆಸೆ ಆ ಹುಡುಗಿಯರಿಗೆ. ತಂದೆ ತಾಯಿ ಮತ್ತೆ ಅನ್ಯೋನ್ಯವಾಗಿ ಹೋದರೆ ತಮ್ಮ ಬಾಳು ಬಂಗಾರ ಎನ್ನುವ ಭಾವನೆ.

ಅವರು ಈಗ ಮಾತಾಡಿಕೊಳ್ಳುತಿಲ್ಲ, ನಿಜ. ಆದರೇನಂತೆ?

ಮನೆಯಲ್ಲಿ ತಂದೆಗೆ ರಾಜೋಪಚಾರ. ಗಟ್ಟಿಹಾಲಿನ ಕಾಫಿ. ಒಳ್ಳೆಯ ಊಟ. ಕೈಯಲ್ಲಿ ಬೀಸಣಿಗೆಯನ್ನು ಹಿಡಿದು ಬೀಸುತ್ತ ಒಂಬತ್ತು ಗಂಟೆಗೆಲ್ಲ ಆತ ಮಲಗುತ್ತಾನೆ. ನಿದ್ದೆ ಬಂದಿರುವುದಿಲ್ಲ. ಬೀಸಿಕೊಂಡೇ ಇರುತ್ತಾನೆ. ಬಳಿಕ ಹುಡುಗಿಯರಿಗೆ ಚೆನ್ನಾಗಿ ನಿದ್ದೆ ಬಂದಿತು ಎಂದ ಮೇಲೆ, ಬಹಳ ಹೊತ್ತಿನ ಮೇಲೆ, ಆತ ಬೀಸುವುದನ್ನು ನಿಲ್ಲಿಸಿಕೊಳ್ಳುತ್ತಾನೆ.

ಆ ಮೇಲೆ?

"ದಾಹವಾಗಿದೆ" ಎನ್ನುತ್ತಾನೆ. ಆತ ಕತ್ತಲೆಯನ್ನು ಕುರಿತು ಹಾಗೆ ಕೇಳಿದನೋ ಏನೋ? ಏನು ದಾಹವೊ?

ಅವರು ಮಾತಾಡಿಕೊಳ್ಳದೆ ಇದ್ದರೆ ಏನಂತೆ?

ಮಾತಾಡಲು ಸಾಧ್ಯವಿಲ್ಲ, ಅದರ ಆವಶ್ಯಕತೆಯೂ ಇಲ್ಲ. ಆದರೆ ನಾಲ್ಕನೆಯ ದಿನ ಹಾಸಿಗೆಯಲ್ಲಿ ಅವರು ತಂದೆಯನ್ನು ಕಾಣಲಿಲ್ಲ.

"ಅಪ್ಪ ಎಲ್ಲಮ್ಮ?" ಎನ್ನುತ್ತ ಹಾಸಿಗೆಯಿಂದ ಎದ್ದು ಒಳಗೆ ಬಂದು ತಾಯಿಯನ್ನು ಕೇಳಿದಳು ಚಂಪಕ.

"ನನ್ನನ್ನು ಬಂದು ಕೇಳು. ನಾನೇನೋ ಸೆರಗಿನಲ್ಲಿ ಗಂಟು ಹಾಕಿಕೊಂಡಿರುವ ಹಾಗೆ. ಏಳು ಗಂಟೆಯ ವರೆಗೂ ಅವರು ಮಲಗಿ ನಿದ್ರಿಸುತ್ತಾರಷ್ಟೆ."

"ಮಲಗಿಲ್ಲ."

"ಎದ್ದರೋ ಏನೋ?"

"ಬಾತ್‌ರೂಮಿನಲ್ಲಿಯೂ ಇಲ್ಲ. ಬಂದಾಗಿನಿಂದ ನೀನು ಅವರ ಕೂಡ ಒಂದು ಮಾತೂ ಆಡಿಲ್ಲ. ಆದರಿಂದ ಅವರಿಗೆ ಬೇಜರಾಯಿತು ಎಂದು ಕಾಣುತ್ತದೆ. ತಪ್ಪು ನಿನ್ನದೇ. ಧಾರಾಳವಾಗಿ ನಾನು ಹೇಳುತ್ತೇನೆ."

"ಹೌದಮ್ಮ, ತಪ್ಪು ಎಲ್ಲ ನನ್ನದೆ. ನನಗೆ ಮಾಡಿದ ದ್ರೋಹವೆಲ್ಲವನ್ನೂ ಮರೆತು, ನಡು ಬೀದಿಯಲ್ಲಿ ನನ್ನನ್ನು ಬಿಟ್ಟವರನ್ನು ಒಂದೂ ಮಾತೂ ನಾನು ಆಡದೇ ಇದ್ದೆ ನೋಡು, ಅದೇ ನನ್ನ ತಪ್ಪು" ಎಂದಳು ಸುಂದರಮ್ಮ.

ಆತ ಬಂದಿದ್ದು ಹೊರಟು ಹೋದ ದುಃಖ ನಾಲ್ಕೈದು ದಿನಗಳು ಅವರಿಗೆ ತುಂಬಾ ಬಾಧಿಸಿತು, ದಿಢೀರೆಂದು ಬಂದದ್ದು, ತಮ್ಮಲ್ಲಿ ಇದ್ದುದ್ದು ಎಲ್ಲವೂ ಅರ್ಧ ಕನಸು ಕಂಡ ಹಾಗೆ ಆಗಿಹೋಗಿದೆ.

ಆತ ಬೀಸಿಕೊಳ್ಳುತ್ತ ಮಲಗಿರುತ್ತಿದ್ದ ಜಾಗವನ್ನು ಚಂಪಕ ಆಸೆಯಿಂದ ನೋಡುತ್ತಾಳೆ. ಸ್ವಲ್ಪ ಹೊತ್ತಿನ ವರೆಗೆ ಈ ಸ್ಥಿತಿ. ಆ ಮೇಲೆ ಕನಕ ಬರುತ್ತಾಳೆ. ಅವಳೊಂದಿಗೆ ಅವಳ ಗೆಳತಿ ಲತಾ. ಹುಡುಗಿಯರ ಮಾತು ಎಲ್ಲಿಗೋ ಹೋಗುತ್ತದೆ. ದುಃಖ ಶಮನವಾಗುತ್ತದೆ.

ಆದರೂ ಚಂಪಕಳಿಗೆ ತಾಯಿಲ್ಲಿ ಏನೋ ದೋಷ. ಈಗ ತಾಯಿ ತಮ್ಮೊಂದಿಗೂ ಸರಿಯಾಗಿ ಮಾತುಕತೆ ಆಡುತ್ತ ಇಲ್ಲ. ಯಾಕೋ ಏನೋ?

ತಾಯಿಯ ಈ ಬದಲಾವಣೆ ಆ ಮೂವರು ಹುಡುಗಿಯರಿಗೂ ಚೆನ್ನಾಗಿ ತಿಳಿದಿದೆ. ಇದ್ದರೂ ಆ ಬಗ್ಗೆ ಅವರು ಚಕಾರವೆತ್ತಲಿಲ್ಲ, ಆದರೆ ಚಂಪಕ ಮಾತ್ರ ತಾನೊಬ್ಬಳೆ ಇದ್ದಾಗ ತಾಯಿಯನ್ನು ಕೆದಕಿ ಅವಳ ಅಂತರಂಗವನ್ನು ತಿಳಿಯುವ ಪ್ರಯತ್ನ ಮಾಡಿದಳು:

"ಯಾಕಮ್ಮಾ, ಈಗ ನೀನು ಒಂದು ಥರಾ ಇದ್ದೀಯ?"

"ಹೇಗಿದ್ದೇನೆ?"

"ದಿಢೀರೆಂದು ನಿನ್ನಲ್ಲಿ ಏನೋ ಬದಲಾವಣೆ ಕಾಣುತ್ತ ಇದೆ. ನಿನಗೆ ಏನಾಗಿದೆ? ಏನೋ ಮನೋವ್ಯಾಧಿ."

"ನನಗೆ ಯಾವ ವಿಧವಾದ ವ್ಯಾಧಿಯೂ ಇಲ್ಲ."

"ಉಹೂಂ, ನೀನು ಮನಸ್ಸಿನಲ್ಲಿ ಏನನ್ನೋ ಬಚ್ಚಿಟ್ಟುಕೊಂಡು ವ್ಯಥೆಪಡು ತ್ತಿದ್ದೀಯ."

ಸುಂದರಮ್ಮ ಬಲವಂತದಿಂದ ನಗೆಯನ್ನು ತಂದುಕೊಂಡು "ಛೆ, ಛೆ, ಅಂಥಾದ್ದು ಯಾವುದೂ ಇಲ್ಲ. ಎಲ್ಲವನ್ನೂ ನಾನು ಯಾವಾಗಲೋ ಮರೆತೆ" ಎಂದಳು.

"ಮತ್ತೆ ನಿನ್ನನ್ನು ನೋಡಿದರೆ ತುಂಬಾ ಗಾಬರಿಗೊಂಡವಳಂತೆ ಕಾಣುತ್ತೀಯಲ್ಲ, ಯಾಕೆ?"

"ಏನು ಮಾಡುವುದೆಂದು ನನಗೆ ತಿಳಿಯಲಿಲ್ಲ. ನಿಜ, ನನ್ನ ಆರೋಗ್ಯ ಸರಿಯಾಗಿಲ್ಲ,"

"ವೇದಳಿಗೆ ಚೆನ್ನಾಗಿ ಪರಿಚಯವಿರುವ ಆ ಲೇಡಿ ಡಾಕ್ಟರಲ್ಲಿ ಯಾಕೆ ಹೋಗಿ ತೋರಿಸಬಾರದು?"

"ಹೋಗಬೇಕು. ಕೆಲಸ ಜಾಸ್ತಿಯಾಗಿ ಹೋಗಲು ಸಾಧ್ಯವಾಗಿಲ್ಲ."

"ಇವೊತ್ತೇ ಹೋಗಿ ನೋಡು. ಬೇಕಾದರೆ ನಾನೂ ಸಹ ಬರುತ್ತೇನೆ. ಇನ್‌ಸ್ಟಿಟ್ಯೂಟ್‌ನಿಂದ ಬಂದ ಮೇಲೆ ಹೋಗೋಣವೇನು?"

"ಹೋಗೋಣ, ನೀನೂ ಬಾ. ಬಂದರೆ ಒಳ್ಳೆಯದು."

ಇನ್‌ಸ್ಟಿಟ್ಯೂಟ್‌ನಲ್ಲಿ ಅವೊತ್ತು ಎಲ್ಲರೂ ಒಂದು ಮದುವೆಗೆ ಹೊರಟು ನಿಂತಿದ್ದರು. ಅವಳೊಂದಿಗೆ ಅಭ್ಯಾಸ ಮಾಡುತ್ತಿರುವ ಒಬ್ಬಳು ಹುಡುಗಿಯ ಅಕ್ಕನಿಗೆ ಮದುವೆ. ದೊಡ್ಡವರ ಮದುವೆಯೆಂದೇ ಹೇಳಬೇಕು. ಅವಳೊಂದಿಗೆ ಹೊರಟರೆ ಡಾಕ್ಟರರಲ್ಲಿಗೆ ಹೋಗಲು ಸಾಧ್ಯವಾಗುವುದಿಲ್ಲ ಎಂದು ಚಂಪಕ ಹಿಂದಿರುಗಿದಳು. ಮನೆಗೆ ಬಂದರೆ ಅಲ್ಲಿ ಬೀಗ ಹಾಕಿದೆ.

ನೆರೆಮನೆಯ ಗೃಹಿಣಿ ಕೀಲಿಯನ್ನು ತಂದು ಚಂಪಕಳ ಕೈಲಿತ್ತು "ಅಮ್ಮನಿಗೆ ತುಂಬಾ ಹುಷಾರಿಲ್ಲ ಅಂತ ಡಾಕ್ಟರನ್ನು ನೋಡಲು ಹೋಗಿದ್ದಾರೆ. ನೀನು ಬಂದರೆ ಅಲ್ಲಿಗೆ ಬರಹೇಳು ಎಂದು ಹೇಳಿವರು" ಎಂದಳು.

ಚಂಪಕ ಈಗ ಡಾಕ್ಟರ ಷಾಪಿಗೆ ಹೊರಟಳು. ಹೋಗುವಾಗ ಅವಳಿಗೆ ದಾರಿಯಲ್ಲಿ ಹಲಬಗೆಯ ಚಿಂತೆ, ದಿಗಿಲು. ಅಷ್ಟು ಅವಸರವಾಗಿ ಹೋಗಬೇಕಾದರೆ ಏನೋ ಎಂತೋ ಎಂದು. ಆದರೂ ಧೈರ್ಯದಿಂದಲೇ ಅವಳು ಹೆಜ್ಜೆ ಹಾಕಿದಳು.

ಅಲ್ಲಿ ಇವಳಿಗೆ ಮೊದಲೇ ವೇದ ಬಂದು ಕುಳಿತಿದ್ದಳು. ಈಗಂತೂ ಚಂಪಕಳಿಗೆ ಮೈಯೆಲ್ಲ ನಡುಕ.

"ನೀನು ಯಾವಾಗ ಬಂದೆ? ಅಮ್ಮನ ಕೂಡವೆ ಬಂದಿಯೋ?"

"ಇಲ್ಲ, ಅಮ್ಮ ಇಲ್ಲಿಗೆ ಬಂದ ಮೇಲೆ ಡಾಕ್ಟರು ನನಗೆ ಫೋನ್ ಮಾಡಿದ್ದರು."

"ಹಾಗಾದರೆ ಈವಾಗ ಅಮ್ಮನಿಗೆ ಏನಾಗಿದೆ?"

"ಡಾಕ್ಟರು ಹೊರಬಂದ ಮೇಲೆಯೇ ಎಲ್ಲ ತಿಳಿಯಬೇಕು. ನಾನು ಬಂದಿರುವುದು ಡಾಕ್ಟರಿಗೆ ಗೊತ್ತಿಲ್ಲ. ಬಹಳ ಸಮಯವೇ ಆಗಿದೆ. ಅಮ್ಮ ಒಳಗಿದ್ದಾಳೆ."

ಏನು ಮಾಡಲೂ ತೋಚದೆ ಅವರೀರ್ವರೂ ಮೇಲೂ ಕಾಲು ಗಂಟೆ ಕಾದರು. ಆಗ ಡಾಕ್ಟರು ಹೊರಬಂದರು.

"ಬನ್ನಿ. ಬಂದು ಬಹಳ ಸಮಯವಾಯಿತೋ?"

"ಏನಿಲ್ಲ. ಅಮ್ಮನಿಗೆ ಹೇಗಿದೆ?"

"ಇಂಜಕ್ಷನ್ ಮಾಡಿದ್ದೇನೆ. ನಿದ್ದೆ ಮಾಡುತ್ತಿದ್ದಾರೆ."

"ಅವರಿಗೆ ಏನು ಆಗಿದೆ?"

"ಎಲ್ಲ ಮನಸ್ಸಿನ ಮೇಲೆ ಆಗಿರುವ ಪರಿಣಾಮ ಅಷ್ಟೇ."

"ಆಹಾ" ಎಂದು ಅವರೀರ್ವರೂ ಒಮ್ಮೆಲೇ ದನಿಗೂಡಿಸಿದರು.

"ಒಳ್ಳೇ ಸಮಯದಲ್ಲಿ ಅವರು ಇಲ್ಲಿಗೆ ಬಂದಿದ್ದಾರೆ. ನೀವು ಬಂದ ಮೇಲೆ ನೋಡೋಣ ಎಂದು ನಿಧಾನಿಸಿದ್ದರೆ ತುಂಬಾ ಅಪಾಯವಾಗುತ್ತಿತ್ತು."

"ಹೌದಾ, ಈಗ ಹೇಗಿದೆ?"

"ಇಲ್ಲಿಗೆ ಬಂದ ತಕ್ಷಣ ಪ್ರಜ್ಞೆ ತಪ್ಪಿಸಿ ಏನು ಮಾಡಬೇಕೋ ಅದನ್ನು ಮಾಡಿದ್ದಾಯಿತು. ಇನ್ನು ಪ್ರಾಣ ಭಯ ಇಲ್ಲ. ಅದೇ ಹೇಳಿದೆನಲ್ಲ, ಷಾಕ್ಕಿನಿಂದಲೋ ಚಿಂತೆಯಿಂದಲೋ ಗರ್ಭ ನಿಲ್ಲಲಿಲ್ಲ. ವಯಸ್ಸಾಗಿದೆ ನೋಡಿ."

"ಅಮ್ಮನಿಗೆ ವಯಸ್ಸು ನಲ್ವತ್ತೊಂಬತ್ತು."

"ಅದರಿಂದಲೇ ಹೀಗೆ. ಅದೂ ಇಷ್ಟು ವರ್ಷ ಕಳೆದ ಮೇಲೆ, ಹೆದರಬೇಡಿ. ಔಷಧ ಬರೆದುಕೊಡುತ್ತೇನೆ. ಎರಡು ದಿನಗಳಲ್ಲಿ ಇಲ್ಲಿಂದ ಡಿಸ್‌ಚಾರ್ಜ್ ಮಾಡುತ್ತೇನೆ. ಆ ಮೇಲೆ ಎರಡು ವಾರ ವಿಶ್ರಾಂತಿ ತೆಗೆದುಕೊಂಡರೆ ಎಲ್ಲ ಸರಿಹೋಗುತ್ತದೆ."

ಡಾಕ್ಟರ್ ಒಳಗೆ ಪ್ರವೇಶಿಸುತ್ತಲೇ ವೇದ ಚಂಪಕ ಪರಸ್ಪರ ನೋಡಿಕೊಂಡು ಏನು ಮಾಡುವುದೆಂದು ತಿಳಿಯದೆ ನಾಚಿಕೆಯಿಂದ ತಲೆತಗ್ಗಿಸಿ ನಿಂತರು.

ಈಗ ಅವರು ಔಷಧದ ಚೀಟಿಯನ್ನು ಬರೆಯಿಸಿಕೊಂಡು ಹೊರಬರುವುದಕ್ಕೂ ಕನಕ ಅಲ್ಲಿಗೆ ಪ್ರವೇಶಿಸುವುದಕ್ಕೂ ಸರಿಹೋಯಿತು.

"ಅಮ್ಮನಿಗೆ ಹೇಗಿದೆ?"

"ಪರವಾಯಿಲ್ಲ, ನಿದ್ದೆ ಮಾಡ್ತಾ ಇದ್ದಾಳೆ."

"ಒಂದೂ ಭಯ ಇಲ್ಲವಲ್ಲ."

"ಇಲ್ಲ. ಇನ್ನು ಮೇಲೆ ಇಲ್ಲ."

"ನಾನು ಇನ್ನೂ ಮೊದಲೇ ಬರುತ್ತಿದ್ದೆ. ದಾರಿಯಲ್ಲಿ ಅಪ್ಪ ಸಿಕ್ಕಿಧರು. ಅದರಿಂದಲೇ."

"ಅಪ್ಪ? ಎಲ್ಲಿ ಸಿಕ್ಕಿದರು?"

"ಕಾಲೇಜಿನಿಂದ ಬರೋ ದಾರಿಯಲ್ಲಿ. ಶ್ರೀಮಂತ ಮನೆ ಒಂದರಲ್ಲಿ ಮದುವೆ. ಆ ಮದುವೆಗೆ ಅಪ್ಪ ನಾಟ್ಯಕ್ಕೆ ಏರ್ಪಾಡು ಮಾಡಿದ್ದಾರಂತೆ. ಆ ಮೇಲೆ ಮನೆಗೆ ಬರುತ್ತೇನೆ ಎಂದು ಹೇಳಿದರು."

"ಯಾತಕ್ಕಾಗಿಯೋ? ನೀನು ಔಷಧ ತೆಗೆದುಕೊಂಡು ಬರೋವಾಗ ಅಮ್ಮ ಆಸ್ಪತ್ರೆಯಲ್ಲಿ ಇದ್ದಾಳೆ. ನೀವು ಬರುವುದು ಬೇಡ, ಎಂದು ಅವರಿಗೆ ಹೇಳು. ನಾಟ್ಯದ ತಂಡದೊಂದಿಗೇ ಅವರು ಹೊರಟು ಹೋಗಲಿ" ಎಂದಳು ವೇದ.

"ಈವಾಗ ಮಾತ್ರ ಬರುವುದು ಬೇಡವೋ ಹೇಗೆ?" ಎಂದು ಕೇಳಿದಳು ಕನಕ.

"ಈವಾಗ ಮಾತ್ರವಲ್ಲ. ಯಾವಾಗಲೂ ಅವರು ಇತ್ತ ಸುಳಿಯುವುದೇ ಬೇಡ." ಎನ್ನುತ್ತ ಚಂಪಕ ಹುಚ್ಚಿಯಂತೆ ಕೂಗನ್ನು ಹಾಕಿದಳು.

# ಹಗಲು ಕನಸು

ನಾಲ್ಕು ಜನರ ಹಾಗೆ ನನಗೆ ಮಾತಿನ ವೈಭವವಿಲ್ಲ. ಏನೂ ಇಲ್ಲದುದಕ್ಕೆ ಕೆಲವರು ಕಣ್ಣು, ಮೂಗು, ಬಾಯಿ, ಕಿವಿ ಎಲ್ಲವನ್ನೂ ಸೇರಿಸಿ ಅದ್ಭುತವಾಗಿ ವರ್ಣಿಸಿ ಇಲ್ಲದ್ದನ್ನೂ ಸೃಷ್ಟಿಮಾಡುತ್ತಾರಲ್ಲ, ಹಾಗೆ.

ನನಗೆ ಅದೇ ಶೂನ್ಯ. ಬುದ್ಧಿ, ಮನಸ್ಸುಗಳ ವೇಗದಲ್ಲಿ, ಅದರ ಕಾಲು ಭಾಗದಷ್ಟು ವಾರ್ತೆಗಳೂ ಬಾಯಿಂದ ಹೊರಬರುವುದಿಲ್ಲ ಎನ್ನುತ್ತವೆ. ಆದರೆ ನನಗೆ ಉಂಟಾಗಿರುವ ಅನುಭವ ಮಾತ್ರ ಅಲ್ಪಸ್ವಲ್ಪದ್ದೇನು? ನನಗೇನೋ ಇದು ಹಾಗೆ ಕಾಣಲಿಲ್ಲ. ಆದುದ ರಿಂದ ನನ್ನ ಮನಸ್ಸಿನ ದುಗುಂಡ ಇನ್ನೂ ತಣಿದಿಲ್ಲ.

ವಿಷಯ ಇಷ್ಟೇ. ಬಸ್ಸಿನಲ್ಲಿ ನಾನು ಹೋಗುತ್ತ ಇದ್ದೆ.

ಎಲ್ಲಿಗೆ ಹೋದರೇನು? ಬಂದರೇನು? ಆದರಲ್ಲಿ ಏನಾದರೂ ವಿಶೇಷವಿದ್ದರೆ ತಾನೆ!

ನಾನೂ ಸಾಧಾರಣ ಮನುಷ್ಯನೇ. ಬೆಳಗೆದ್ದರೆ ಕಾಫಿ, ಆಮೇಲೆ ಮಾರ್ಕೆಟ್, ಅಕ್ಕಿ ಅಂಗಡಿ. ಇನ್ನು ಮುಂದೆ ಅವಸರ ಅವಸರವಾಗಿ ಆಫೀಸು; ಅಲ್ಲಿಂದ ಹಿಂದಿರುಗಿ ಬಂದಮೇಲೆ ಗಾಳಿಸೇವನೆಗೆ ಸಮುದ್ರದಂಡೆ, ಬಂದಾಗ 'ಹೊತ್ತಾಗಿ ಬಂದಿರಿ!' ಎಂದು ಹೆಂಡತಿಯಿಂದ ಬೈಗುಳ ಮಳೆ. ಊಟ, ನಿದ್ದೆ. ಮತ್ತೆ ಮತ್ತೆ ಇದೇ ಕತೆ, ಇದರಿಂದ ತಪ್ಪಿಸಿಕೊಳ್ಳಲು ಸಾಧ್ಯವೇ ಇಲ್ಲ. ಈ ದಿನನಿತ್ಯದ ಜಂಜಾಟದಿಂದ ಏನಾದರೂ ಅಲ್ಪ ಸ್ವಲ್ಪ ಬದಲಾವಣೆ ಆಗುವ ಹಾಗಿದ್ದರೆ ನನಗೆ ಅದು ತುಂಬಾ ಸಂತೋಷ ತರುವ ಸಂಗತಿಯೇ. ಆದರೆ ಇದು ಹೇಗೆ ಸಾಧ್ಯವಾಗುತ್ತದೆ?

ನನ್ನ ಹೆಂಡತಿಯ ತೊಡೆಯನ್ನು ಬಿಟ್ಟು ಈಗತಾನೆ ಒಂದು ಮಗು ಕೆಳಗಿಳಿದಿದೆ. ಬಾಗಿಲಲ್ಲಿ, ಹೋಗಿ ಮಣ್ಣನ್ನು ತಿಂದು ಆಟವಾಡಿ ಅಳುತ್ತ ಕರೆಯುತ್ತ ಸದಾ ಓಯೆನ್ನುತ್ತ ರಾತ್ರಿ ನಿದ್ದೆಯನ್ನು ಕೆಡಿಸಲು, ಕಂಕುಳಲ್ಲಿ ಮತ್ತೊಂದು ಮಗು. ಮನಸ್ಸಿಗೆ ಚಿಂತೆ ಇನ್ನೂ ಜಾಸ್ತಿಯಾಗಲು, ಹೊಟ್ಟೆಯಲ್ಲಿ ಒಂದು ಮೊಳಕೆಯೋ ಎಂದು ಕಳೆದ ತಿಂಗಳಿಂದ ಸಂದೇಹ. ಇಷ್ಟು ಭಾರವನ್ನೂ ಕೊರಳಿಗೆ ತೂಗಹಾಕಿಕೊಂಡು, ಇನ್ನು ಎರಡು ರೆಕ್ಕೆ ಗಳನ್ನು ಕಟ್ಟಿ ಬಾನಿಗೆ ಹಾರುತ್ತೇನೆ ಎಂದರೆ ಅದು ಹೇಗೆ ಸಾಧ್ಯ?

ಆದುದರಿಂದ ಈಗ ನಾನು ಏನು ಹೇಳಲು ಬಂದೆ, ಹೂಂ, ಬಸ್ಸಿನಲ್ಲಿ ಪ್ರಯಾಣ ಮಾಡುತ್ತ ಇದ್ದೇನೆ.

ಈ ಕಾಲದಲ್ಲಿ ಬಸ್ಸಿನ ಪ್ರಯಾಣ ಎಂದರೆ ನಿಮಗೇ ತಿಳಿದಿದೆಯಲ್ಲ. ಸಿನಿಮಾ ಥಿಯೇಟರಿಗೆ ಹೊಸಾ ಹೊಸದು ಆಟ ಬಂದ ದಿನ ಇರುತ್ತದಲ್ಲ, ಅಂಥ ಗುಂಪು. ಒಳಗೆ ಪ್ರವೇಶಿಸುವುದೇ ಮಹಾ ಸಾಹಸ. ಒಳ ಹೊಕ್ಕೊಡನೆ ನಿಂತುಕೊಳ್ಳಲು ಕೈಹಿಡಿ

ಸಿಗುವುದು ಮೇಲೂ ತೊಂದರೆ. ಹಾಗಿರುವಾಗ ಕುಳಿತುಕೊಳ್ಳಲು ಜಾಗ ಸಿಕ್ಕಿದರೆ.. ...
ಅಬ್ಬಬ್ಬಾ, ನಾನು ಕುಳಿತುಕೊಳ್ಳುತ್ತ ಇದ್ದೆ

"ಲೊಡಕ್......ಲೊಡಕ್......ಲೊಡಕ್......"

ಬಸ್ಸು ಒಂದು ಜಾಗದಲ್ಲಿ ನಿಂತಿತು. ಹೊರಗಿನಿಂದ ಒಂದು ಗುಂಪು ಬಂದು ಅಪ್ಪಳಿಸಿತು. ನನ್ನ ಸನಿಹದಲ್ಲಿ ಒಬ್ಬಳು ಮಿಂಚುವೇಗದಲ್ಲಿ ಬಂದು ಕುಳಿತುಬಿಟ್ಟಳು.

ಅವಳ ಮೈಬಣ್ಣ ಕಪ್ಪು ಎಂದೇ ಹೇಳಬೇಕು. ವಯಸ್ಸು ಹದಿನೆಂಟು–ಇಪ್ಪತ್ತು. ಕಿವಿಗಳಲ್ಲಿ ತೂಗಾಡುತ್ತಿರುವ ರಿಂಗುಗಳು, ಕೊರಳಲ್ಲಿ ಎದ್ದುಕಾಣುವ ಚಿನ್ನದ ಸರ. ಕೆಂಪು ಬಾರ್ಡರಿನ ನೀಲಿ ಸೀರೆ. ಕುಳು ಕುಳೂ ಎಂದು ಮುಖದಲ್ಲಿ ಕಳೆ.

ನೋಟ, ಯಾವ ನೋಟದಿಂದ ಈಗ ನಾನು ಅವಳನ್ನು ನೋಡಬೇಕು? ಒಂದು ಕತ್ತೆ ಸಹ ದೇವಸ್ಥಾನದ ಗೋಡೆಗೆ ಸೇರಿದ ಹಾಗೆ ನಿಂತು ಅದನ್ನೇ ದಿಟ್ಟಿಸುತ್ತದೆ. ಆದರೆ ಆ ದೇಗುಲದ ಚಿತ್ರಶಿಲ್ಪವನ್ನು ನೋಡುತ್ತ ಅದು ನಿಂತಿದೆ ಎಂದು ಹೇಳಲು ಆದೀತೆ? ಮನಸ್ಸಿನಲ್ಲಿ ಎಂಥ ಎಂಥವೋ ಭಾವನೆಗಳು. ವಿಮರ್ಶೆ; ಚರ್ಚೆ. ಅವಳು ವೈಶ್ಯಳೋ ಅವಳೋ ಇವಳೋ ಬ್ರಾಹ್ಮಣ ಹೆಂಗಸೋ? ಯಾರಾದರೆ ನನಗೇನು ಎಂದು ನಾನು ಸುಮ್ಮನಿರಬಾರದೇ?

ಆದರೆ ಅವಳು ನನ್ನ ತೊಡೆಯ ಮೇಲೆ ಅಸುವನ್ನು ನೀಗಿದಳು.

ನನಗೆ ದಿಗ್ಭ್ರಮೆಯಾಗಿ ಹೋಯಿತು. ಹಠಾತ್ತನೆ ಅವಳ ಮುಖ ಬಿಳಿಚಿಕೊಂಡಿತು. ಕಣ್ಣುಗಳು ಅದೊಂದು ವಿಧವಾಗಿ ಚಲಿಸಿದುವು. ಬಾಗಿದವಳೇ ಆಕೆ ನನ್ನ ತೊಡೆಯ ಮೇಲೆ ಒರಗಿಬಿಟ್ಟಳು.

ನಾನು ಹೋ ಎಂದು ಕೂಗಿಕೊಂಡೆ. ಅವಳ ಕತ್ತನ್ನು ಮೇಲಕ್ಕೆತ್ತಲು ಪ್ರಯತ್ನಿಸಿದೆ. ನಾಡಿಯನ್ನು ಹಿಡಿದು ನೋಡಿದೆ. ಊಹುಂ.

ಹೃದಯಾಘಾತ. ಇದಕ್ಕೆ ಸಮಯ, ಕಾರಣ ಹೀಗೆಲ್ಲ ಇದೆಯೇ? ಬಸ್ಸಿನಲ್ಲಿ ಕೋಲಾಹಲವನ್ನು ಕೇಳಬೇಕೇ? ಬಸ್ಸು ನಿಂತುಬಿಟ್ಟಿತು.

ಆ ಬಸ್ಸಿನ ಯಾವುದೋ ಒಂದು ಮೂಲೆಯಲ್ಲಿ ಕುಳಿತಿದ್ದ ಅವಳ ಪತಿ ಈಗ ಎಲ್ಲರನ್ನೂ ತಳ್ಳಿಕೊಂಡು ಈ ಕಡೆ ಬಂದ. ಬಸ್ಸಿನಲ್ಲಾದರೋ ಗಿಜುಗಿಜು ಪ್ರಯಾಣಿಕರು. ಕುಳಿತು, ನಿಂತು ನೇತುಹಾಕಿಕೊಂಡಿರುವವರು.

ಆತನಿಗೂ ಸಣ್ಣ ವಯಸ್ಸೇ. ವಯಸ್ಸು ಇಪ್ಪತ್ತೈದು ಇರಬಹುದೇನೋ? ಕೆಂಪಗೆ ಮೂಗು ಮುಖ ಎಲ್ಲ ಲಕ್ಷಣವಾಗಿದ್ದು ಆತ ಮೀಸೆ ಬಿಟ್ಟಿದ್ದ. ಸರಿಯಾದ ಜೋಡಿ.

ಅವಳ ಎದೆಯ ಮೇಲೆ ಈಗ ನಾನು ಕೈಯಿಟ್ಟು ನೋಡಿದೆ.

ಏನು ಪ್ರಯೋಜನ? ಹಕ್ಕಿ ಯಾವಾಗಲೋ ಹಾರಿ ದೂರಟುಹೋಗಿತ್ತು. ನನ್ನ ತೊಡೆಯ ಮೇಲೆ ಶವ.

"ಏಯ್ ಜಟಕಾ ಜಟಕಾ......ಟ್ಯಾಕ್ಸಿ......ಟ್ಯಾಕ್ಸಿ......"

ನನ್ನ ಅವಸರಕ್ಕೆ ಸಿಕ್ಕಿದ್ದು ರಿಕ್ಷಾ. ಆಫೀಸಿಗೆ ಅರ್ಧಗಂಟೆ ನಿಧಾನವಾಗಿ ಹೋಯಿತು. ಯಜಮಾನರೊಂದಿಗೆ ನನಗೆ ಸ್ವಲ್ಪ ಮನಸ್ತಾಪ ಇದೆ.

ಕೆಲಸದಿಂದ ಸೊಂಟ ನೋವು ಕಂಡಿದೆ. ಮನಸ್ಸು ಕೆಲಸದಲ್ಲಿ ಲೀನವಾಗಿಲ್ಲ. ಸುತ್ತಲೂ ಏನೋ ಕತ್ತಲೆ ಕವಿದಿರುವ ಹಾಗೆ, ಲೆಕ್ಕದ ಪುಸ್ತಕಗಳನ್ನೆಲ್ಲ ತೆಗೆದಿಟ್ಟು, ಏನೋ ಸುಳ್ಳು ಹೇಳಿ, ಮೂರು ಗಂಟೆಗೇ ಆಫೀಸನ್ನು ಬಿಟ್ಟೆ.

ಪ್ಯಾಂಟಿನ ಜೇಬಿನೊಳಗೆ ಕೈಗಳನ್ನು ಇಳಿಬಿಟ್ಟು ಸಮುದ್ರ ದಂಡೆಯಲ್ಲಿ ಉದ್ದಕ್ಕೂ ನಡೆದೆ.

ಮಣಲು ಕಾದುಹೋಗಿತ್ತು. ಬಿಸಿಲೂ ಚುರುಗುಡುತ್ತಿತ್ತು.

ಕುಳುಕುಳು ಎನ್ನುತ್ತಿರುವ ಆ ಶರೀರ. ಇನ್ನೂ ಸಂಸಾರ ಸುಖವನ್ನು ಚೆನ್ನಾಗಿ ಅನುಭವಿಸಿರಲಿಕ್ಕಿಲ್ಲ. ಅವಳು ನನ್ನ ತೊಡೆಯ ಮೇಲೆ ಒರಗಿದ್ದಾಳೆ.

ಮನಸ್ಸಿನ ಸ್ಥಿತಿಯನ್ನು ಒಂದೊಂದು ಸಲ ಏನೆಂದು ಹೇಳಬೇಕು? ಬೆಂಕಿ ದೇಹದಲ್ಲಿ ಹರಿದಾಡುತ್ತ ಇದೆ. ಆದರೆ ಇದರಲ್ಲಿಯೂ ಒಂದು ಬಗೆಯ ಸುಖ.

ದಂಡೆಯಲ್ಲಿ ಉದ್ದಕ್ಕೂ ನಡೆದೆ, ಅಲೆಗಳು ಚಿಮ್ಮುತ್ತ ಚಿಮ್ಮುತ್ತ ನನ್ನ ಕಾಲುಗಳನ್ನು ಸ್ಪರ್ಶಿಸಿದುವು.

ಹೀಗೆಯೇ ಈ ಅಲೆ ನನ್ನ ಮನಸ್ಸಿನ ಭಾರವನ್ನು ತೊಳೆಯುತ್ತದೆಯೋ ಹೇಗೆ? ಹೆಜ್ಜೆ ಹಾಕುತ್ತಿದ್ದಂತೆ ನಡೆದದ್ದನ್ನೆಲ್ಲ ಮತ್ತೆ ಮತ್ತೆ ನೆನಸಿಕೊಂಡೆ.

ಅವಳನ್ನು ಆಲಿಂಗಿಸಿಕೊಂಡೆನೋ? ಹೌದು, ಆಲಿಂಗಿಸಿದೆ. ಕೈಹಿಡಿದು ನಾಡಿ ನೋಡಿದೆ. ಶ್ರೀಗಂಧದ ಪರಿಮಳದಂತೆ ಸುವಾಸನೆಯಾದ ಆ ಮುಖ. ಹಣೆಯ ಮೇಲೆ ಕುರಳು ಹರಿಹಾಯ್ದಿದೆ. ಜಡೆ ಒಂದೋ ಎರಡೋ ಸರಿಯಾಗಿ ಗಮನಿಸಲಿಲ್ಲ...

ಹೇಗಿದ್ದರೆ ಏನಂತೆ? ಅದನ್ನು ಈಗ ತಿಳಿದುಕೊಂಡು ಏನಾಗಬೇಕಾಗಿದೆ? ಪಾಪ, ಎಲ್ಲಿಂದಲೋ ಬಂದು, ಬಸ್ಸಿನಲ್ಲಿ ಹತ್ತಿ ಕುಳಿತು, ನನ್ನ ತೊಡೆಯ ಮೇಲೆ ಮಲಗಿ ಸತ್ತಳಲ್ಲ. ಯಾವುದೋ ಪೂರ್ವಜನ್ಮದ ಬಂಧನ, ನನಗೂ ಅವಳಿಗೂ.

ವಿಧಿ, ವಿಧಿ, ಎಲ್ಲವೂ ವಿಧಿ.

ಅಷ್ಟೆ. ನನ್ನ ಮನಸ್ಸಿನಲ್ಲಿ ನನ್ನನ್ನೂ ಅವಳನ್ನೂ ಸೇರಿಸಿ ಬರೆದ ಕತೆ ಯಾವ ಪುಸ್ತಕದಲ್ಲಿಯೂ ಅಚ್ಚಾಗುವಂತಿಲ್ಲ. ಶಕುಂತಲೆ–ದುಷ್ಯಂತ, ನಳ–ದಮಯಂತಿ, ಸಾವಿತ್ರಿ–ಸತ್ಯವಾನ್, ಪೃಥ್ವಿರಾಜ–ಸಂಯುಕ್ತೆ—ಹೀಗೆ ನಾನೂ ಅವಳೂ.

ಈ ಕಾವ್ಯದಲ್ಲಿ, ನಾನು ಅವಳನ್ನು ವಿವಾಹಮಾಡಿಕೊಂಡು ಸಂಸಾರ ನಡಸುತ್ತಿರುವ ಪತ್ನಿಗೆ ಸಿಕ್ಕುವಂಥ ಸ್ಥಾನವಿಲ್ಲ. ಮಹಡಿಯ ಮನೆಯಿಂದ ಕೆಳಗಿಳಿದು ಬಾಗಿಲಿಗೆ ನಡೆದು ಮಣ್ಣನ್ನು ತಿನ್ನುವ ನನ್ನ ಮಗುವಿಗೂ ಸ್ಥಾನವಿಲ್ಲ.

ಯಾವಾಗಲೂ ಕಂಕುಳಲ್ಲಿಯೇ ಇದ್ದು ಮೂರು ಹೊತ್ತೂ ಕಣ್ಣಿನಲ್ಲಿಯೂ ಮೂಗಿನಲ್ಲಿಯೂ ನೀರನ್ನು ಸುರಿಸುತ್ತ ಗೋಳಿಡುವ ನನ್ನ ಮಗುವಿಗೂ ಇಲ್ಲಿ ಎಡೆಯಿಲ್ಲ, ಹೊಟ್ಟೆಯೊಳಗೆ ಇದ್ದುಕೊಂಡೇ ಔಷಧಿ, ಮಾಯೆ ಹೀಗೆಲ್ಲ ಹೇಳಿಕೊಂಡಿರುವ ಆ ಮೊಳಕೆಗೂ ಸಾಧನವಿಲ್ಲ.

ನಾವಿಬ್ಬರೇ. ನಾನು ಮತ್ತು ನನ್ನ ತೊಡೆಯ ಮೇಲೆ ಒರಗಿದವಳು. ನಾವಿಬ್ಬರೂ ಜತೆಯಾಗಿರುವ ಆ ಕಲ್ಪನೆಯ ಬಾಳಿನಲ್ಲಿ ಹೂದೋಟಗಳೂ, ಜಲಪಾತಗಳೂ, ಶಾಂತಿಯೂ, ನೆಮ್ಮದಿಯೂ ಯಥೇಷ್ಟವಾಗಿ ಇದೆ. ನಾವು ಗಂಧರ್ವರಾಗಿ ಗಗನದಲ್ಲಿ ಸಂಚರಿಸುತ್ತ ಇದ್ದೇವೆ. ಆದರೆ, ಆದರೆ ಇಂಥ ಸಾವು !

ನನ್ನ ದೇಹ ನಡುಗತೊಡಗಿತು. ಎಂಥ ಕನಸು ! ಮನೋವೇದನೆ. ವಿಷವನ್ನು ಅಮೃತದಲ್ಲಿ ಹಾಕಿ ಕಲಸಿದಂತೆ ಇತ್ತು ನನ್ನ ಮನಸ್ಸಿನ ಸ್ಥಿತಿ.

ಹೊತ್ತಾಯಿತು. ಮನೆಗೆ ಹಿಂದಿರುಗಿದೆ.

ಮಣ್ಣನ್ನು ತಿನ್ನುವ ಮಗುವಿನ ಬಾಯನ್ನು ನನ್ನ ಹೆಂಡತಿ ಒರಸುತ್ತ ಇದ್ದಳು.

ನಾನು ಬಂದೊಡನೆ ಆಕೆ ತನ್ನ ಕಂಕುಳಲ್ಲಿದ್ದ ಮಗುವನ್ನು ನನ್ನ ಕೈಗಿತ್ತು, ಊಟಕ್ಕೆ ಎಲೆಹಾಕಲು ಒಳಗೆ ನಡೆದಳು. ಹೋಗುವಾಗ ಉಷ್....ಉಷ್....ಎಂದುಕೊಂಡು ಹೋದಳು.

ಹೌದು. ಅದು ಹೊಟ್ಟೆಯೊಳಗಿರುವ ಮೊಳಕೆಯಿಂದುಂಟಾದ ಸಂಕಟ.

ಎರಡು ತುತ್ತನ್ನು ಬಾಯಿಗೆ ಹಾಕಿದೆ, ಅಷ್ಟೇ.

"ಯಾಕೆ ಮೈ ಚೆನ್ನಾಗಿಲ್ಲವೇ? ಊಟ ಮಾಡಲೇ ಇಲ್ಲವಲ್ಲ !"

"ಹೌದು. ಇವೊತ್ತು ನನ್ನ ತೊಡೆಯ ಮೇಲೆ ಮಲಗಿ ಒಬ್ಬಳು ಸತ್ತಿದ್ದಾಳೆ...."

ಎಂದವನೇ ಕೈತೊಳೆದು ಮೇಲೆದ್ದು, ಮಹಡಿಯ ಮೆಟ್ಟಲುಗಳಿಂದ ಕೆಳಗಿಳಿದು, ಕಾಂಪೌಂಡಿಗೆ ಸೇರಿದ ಹಾಗೆ ಒರಗುಕುರ್ಚಿಯಲ್ಲಿ ಹೋಗಿ ಕುಳಿತೆ.

ರಸ್ತೆಯಲ್ಲಿ ಟ್ರಾಂ ಗಾಡಿಗಳು ಕಿನಿಕಿನಿ ಕೀಚ್ ಎಂದು ಗಂಟೆ ಹೊಡೆದುಕೊಂಡು ಹೋಗುತ್ತಿರುವ ಶಬ್ದ ನನ್ನ ಕಿವಿಗಳನ್ನು ಕೊರೆಯುತ್ತ ಇದೆ. ಬಸ್ಸುಗಳೂ ಕಾರುಗಳೂ ಓಡಾಡುತ್ತ ಇವೆ. ಜನರ ಗಲಾಟೆ.

ಮೇಲೆ ನನ್ನ ಹೆಂಡತಿ ಮಗುವನ್ನು ತೊಟ್ಟಲಿನಲ್ಲಿ ಹಾಕಿ "ಆರಾರೋ.... ಆರಾರೋ...." ಎಂದು ಹಾಡು ಹೇಳುತ್ತಿದ್ದಾಳೆ. ಏನಾದರೂ ಸರಿ, ನನ್ನ ತೊಡೆಯ ಮೇಲೆ ಅವಳು ಮಲಗಿ ಸತ್ತದ್ದು ಅವಳಿಗೆ ಹಿಡಿಸಲಿಲ್ಲವಂತೆ.

ಹೌದು. ಅವಳು ಯಾರೋ? ನಾನು ಯಾರೋ? ಆದರೆ ಇವಳು ಮಾತ್ರ ಯಾರಂತೆ?

ದಿನಗಳು ಕಳೆದಂತೆ ಸಂಸಾರಚಿಂತೆಯಲ್ಲಿ ನಾನು ಅವಳನ್ನು ಮರೆತೆ. ಈ ಜಂಜಾಟ

ದಲ್ಲಿ ಯಾವುದು ತಾನೆ ನಿಲ್ಲಲು ಸಾಧ್ಯವಿದೆ? ಯಾವ ಶಕ್ತಿಯೂ ಇದರಲ್ಲಿ ಅಳಿಸಿ ಹೋಗಬೇಕಾದದ್ದೆ. ಹಸಿಮರದ ಮೇಲೆ ಕೊಡಲಿ ನಟ್ಟಂತೆ ಅವಳ ನೆನಪು ಉಳಿದಿದ್ದರೂ ದಿನಕಳೆದಂತೆ ಆ ಗಾಯ ಒಣಗತೊಡಗಿದೆ.

ಚಿಂತೆಯೇ ಹಾಗೆ.

ಮತ್ತೆ ಅವಳ ನೆನಪು. ಕೊನೆಯದಾಗಿ ಅವಳನ್ನು ನಾನು ಕಂಡ ದೃಶ್ಯ. ಇದೋ ನನ್ನ ಕಣ್ಣಮುಂದೆ ಕಟ್ಟಿದಂತಿದೆ. ರಿಕ್ಷಾವಿಗೆ ಎತ್ತಿ ಹಾಕುವಾಗ ಅವಳ ತಲೆ ಹೇಗೆ ತೂಗಾಡುತ್ತಿತ್ತು! ಅವಳು ಮುಡಿದಿದ್ದ ಹೂದಂಡೆಯೂ ಸಹ ಅವಳನ್ನು ಬಿಟ್ಟಿರಲಾರೆ ಎಂದಿತಲ್ಲ.

ನನಗೆ ಏನೋ ಆಯಿತು. "ಅಯ್ಯೋ...." ಎಂದು ಕೂಗಿಕೊಂಡೆ.

"ಏನು? ಏನು?" ಎನ್ನುತ್ತ ನನ್ನ ಹೆಂಡತಿ ಓಡಿಬಂದಳು.

"ಏನು ಮಾಡಲಿ? ಇನ್ನೂ ಎಷ್ಟು ದಿನಗಳು ಹೀಗೆ...." ಎನ್ನುತ್ತ ನಾನು ಬಿಕ್ಕಿದೆ.

ನನ್ನ ಹಣೆಯ ಮೇಲೆ, ನನ್ನ ಹೆಂಡತಿ ಕೈಯಿಟ್ಟಳು.

"ಅಯ್ಯೋ, ಕೆಂಡದ ಹಾಗೆ ಸುಡುತ್ತ ಇದೆ. ನೀವು ಹೇಳಲೇ ಇಲ್ಲವಲ್ಲ. ಮನೆಯಲ್ಲಿ ಯಾರೂ ಇಲ್ಲ. ಮಲಗಿ. ಬೆಳಗ್ಗೆ ಡಾಕ್ಟರಿಗೆ ತೋರಿಸುವಿರಂತೆ. ಈವಾಗ ಬರ್ತೇನೆ..."

ಹೀಗೆನ್ನುತ್ತ ಆಕೆ ನನ್ನನ್ನು ಮಲಗಿಸಿ, ಲಂಗವನ್ನೂ ಒಂದಿಷ್ಟು ಬಟ್ಟೆಯನ್ನೂ ತೆಗೆದುಕೊಂಡವಳೇ ಆ ಕತ್ತಲೆ ತುಂಬಿದ ಕೊಟಡಿಗೆ ಧಾವಿಸಿದಳು.

# ಕೆಸರಿನಲ್ಲಿ ಅರಳಿದ ಹೊಂದಾವರೆ

ಅಂದು ಭಾನುವಾರ ಮಿನರ್ವಾ ಟಾಕೀಸಿನಲ್ಲಿ ಬೆಳಗಿನ ಆಟಕ್ಕೆ ಮಾಮೂಲಿನಂತೆಯೇ ಜನ ಉದ್ದಕ್ಕೆ ಕ್ಯೂ ನಿಂತಿದ್ದರು. ಹಾಗಲ್ಲದೆ ಅದು ಸಿನಿಮಾ ರಸಿಕರ ಮೆಚ್ಚಿನ ನಟನಟಿಯರು ಅಭಿನಯಿಸಿರುವ ಒಂದು ಆಂಗ್ಲ ಚಿತ್ರ. ಗ್ರೀರ್ ಗಾರ್‌ಸನ್ ಮತ್ತು ವಾಲ್ಟರ್ ಬಿಡ್ಜ್ ನಟಿಸಿರುವ 'ಕೆಸರಿನಲ್ಲಿ ಅರಳಿರುವ ಹೊಂದಾವರೆ',

ಮದರಾಸು ನಗರದ ಜನಸಂಖ್ಯೆಯನ್ನೂ ರಸಿಕತೆಯನ್ನೂ ತೂಕಹಾಕುವಂತೆ ನಾಲ್ಕಾರು ಸಾಲಿನ ಕ್ಯೂ. ವಿದ್ಯಾರ್ಥಿಗಳು, ಗುಮಾಸ್ತರು, ಪದವೀಧರರು, ಪತ್ರಿಕಾ ಸಂಪಾದಕರು, ಸಿನಿಮಾ 'ಎಕ್‌ಸಟ್ರಾ'ಗಳು—ಹೀಗೆ, ಎಲ್ಲರೂ.

ನಾನು ರಿಕ್ಷಾ ಬಿಟ್ಟು ಕೆಳಗಿಳಿದು, ರಿಕ್ಷಾದವನಿಗೆ ಮೂರು ಆಣೆ ತೆಗೆದಂಕೊಟ್ಟೆ.

ಆತ "ಯಾಕೆ ಸಾಮೀ, ಮಾತಾಡಿದಷ್ಟು ಕೊಡು" ಎಂದ.

ನನಗೆ ವಿಸ್ಮಯ. ಮಣ್ಣಡಿಯಿಂದ ಡೇವಿಡ್ಸನ್ ಬೀದಿಗೆ ನ್ಯಾಯವಾದ ಬಾಡಿಗೆ ಮೂರಾಣೆ. ರಿಕ್ಷಾ ಹತ್ತುವಾಗ ಆತ ನಾಲ್ಕಾಣೆ ಕೇಳಿದ್ದ. ನಾನು ಮೂರಾಣೆ ಮಾತ್ರ ಕೊಡುತ್ತೇನೆ ಎಂದಿದ್ದೆ. "ಏನೋ ನೋಡಿ ಕೊಡು, ಸಾಮೀ" ಎಂದು ಆತ ಹೇಳಿದ್ದ, ಈಗ ಇಲ್ಲಿಗೆ ಬಂದರೆ ಬರಿಯ ಒಣ ತಕರಾರು.

"ಮೂರಾಣೆಯಲ್ಲವೇನೋ ಮಾತಾಡಿದ್ದು?"

"ನಾಲ್ಕಾಣೆ ಕೊಡು, ಸಾಮೀ, ಇಲ್ದಿದ್ರೆ ಇದ್ನೂ ನೀನೇ ಇಟ್ಕೋ."

"ಮಾತಾಡಿದ್ದಕ್ಕಿಂತ ಒಂದು ಕಾಸೂ ಜಾಸ್ತಿ ಕೊಡುವ ಹಾಗಿಲ್ಲ,"

"ಕೊಡ್ದಿದ್ರೆ ಹೋಗು ಸಾಮೀ, ನಂಗೆ ಇದು ಬ್ಯಾಡ."

"ಏನು ತಕರಾರೋ ನಿನ್ನದು? ಮಣ್ಣಡಿಯಿಂದ ಇಲ್ಲಿಗೆ ಬರೋದಕ್ಕೆ ಮೂರಾಣೆಗೆ ಮೇಲೆ ಯಾರು ಕೊಡ್ತಾರೆ ಹೇಳು?"

"ನಿನಗೇನು ಸಾಮಿ ಗೊತ್ತು! ಈ ಬಿಸಿಲ್ನಲ್ಲಿ ನಾನು ಭಾರ ಎಳೀತೀನಿ ನೋಡು. ನಮ್ಮ ಕಷ್ಟ ನಿನಗೆ ಹ್ಯಾಗೆ ಗೊತ್ತಾಗಬೇಕು?"

ಹೀಗೆ ಅವನು ಉದ್ದಕ್ಕೂ ನನ್ನನ್ನು ಏಕವಚನದಲ್ಲಿಯೇ ಸಂಬೋಧಿಸಿದ.

ಒಂದಾಣೆ ಜಾಸ್ತಿ ಕೊಡುವುದರಲ್ಲಿ ನಾನು ಚೌಕಾಸಿ ಮಾಡುತ್ತೇನೆ ಎಂದಲ್ಲ. ಎರಡು ವಿಲ್ಸ್ ಸಿಗರೇಟ್‌ಗಳನ್ನು ಎಳೆಯುವ ಖರ್ಚು ಅದು. ಆದರೆ ಈತನ ಬಾಯಿಗೆ ಹೆದರಿ ಕೊಡಲು ಸಾಧ್ಯವಿಲ್ಲ ಎನ್ನುವ ಹಟದಿಂದ ನಾನು ಕೊಡಲು ನಿರಾಕರಿಸಿದ್ದೆ, ಆದರೆ ಆ ಕ್ಯೂನಲ್ಲಿ ನಿಂತಿದ್ದ ಪರಿಚಿತ ಅಪರಿಚಿತ ಮುಖಗಳೆಲ್ಲವೂ ನನ್ನನ್ನೇ ಈಗ ನೋಡುತ್ತಿರುವಂತೆ ಭಾಸವಾಯಿತು. ಅಷ್ಟು ಜನರ ಎದುರಿಗೆ ಇನ್ನೂ ಚೌಕಾಸಿ ಮಾಡುತ್ತ ನಿಲ್ಲುವುದು ನನ್ನಂಥವನಿಗೆ ಮರ್ಯಾದೆಯಲ್ಲ. ಆದುದರಿಂದ ಒಂದಾಣೆ ತೆಗೆದು ಆತನಿಗೆ ಕೊಟ್ಟುಬಿಟ್ಟೆ.

ಕೊಡುವಾಗ ಮಾತ್ರ 'ಕಳ್ಳ ಸೂ. . . .ಮಗ. ಸಣ್ಣ ಬುದ್ಧಿ ಎಲ್ಲಿ ಹೋಗುತ್ತೆ?' ಎಂದು ಗೊಣಗಿಕೊಂಡವನು ನಾನೂ ಕ್ಯೂನಲ್ಲಿ ನಿಂತೆ.

ಬುಕ್ಕಿಂಗ್ ಆಫೀಸ್ ಇನ್ನೂ ತೆರೆದಿರಲಿಲ್ಲ. ನೆಳಲಿಗೆ ಸೇರಿದ ಹಾಗೆ ಕ್ಯೂ ಬೆಳೆದಿತ್ತು. ಹಾಗೆ ನಿಂತಿದ್ದವರಲ್ಲ ಕೆಲವರು ಪತ್ರಿಕೆ ಓದುತ್ತಿದ್ದರು; ಮಾತಾಡುತ್ತಿದ್ದರು; ಹೊಗೆ ಎಳೆದು ಬಿಡುತ್ತಿದ್ದರು. ಇನ್ನೂ ಕೆಲವರು ಒಂದೂವರೆ ಕಾಲಿನಲ್ಲಿಯೇ ನಿಂತಿದ್ದರು. ನಾನೂ ನಿಂತುಕೊಂಡಿದ್ದೆ.

ಈ ಟಾಕೀಸಿನ ಎದುರಿಗೆ ಒಂದು ರಿಕ್ಷಾದವನ ಕುಟುಂಬ. ಒಂದು ಗೋಡೌನ್ ಗೋಡೆಗೆ ಸೇರಿದ ಹಾಗೆ ಇರುವ ಎರಡು ಮೊಳ ಜಾಗವೇ ಇವರ ಮನೆ. ಹೊಗೆ ತುಂಬಿ ಕಪ್ಪುಗಟ್ಟಿರುವ ಗೋಡೆ. ಆ ಗೂಡಿನ ಒಂದು ಮೂಲೆಯಲ್ಲಿ ಒಲೆ. ಸಿಲ್ವರ್ ತಟ್ಟೆ, ತಗರದ ಡಬ್ಬ, ಗೋಣೀಚೀಲ ಇಳಿಬಿಟ್ಟದ್ದೇ ಬಾಗಿಲು.

ಇಂಥ ಮನೆಯ ಮುಂದೆಯೂ ಒಂದು ಸಣ್ಣ ದಿಣ್ಣೆ, ಬಿದಿರ ಚಾಪೆಯನ್ನು ಹಾಸಿಕೊಂಡು ಅಲ್ಲಿ ಇಬ್ಬರು ಕುಳಿತಿದ್ದರು. ಒಬ್ಬಳಿಗೆ ಬೆಕ್ಕಿನ ಕಣ್ಣು, ಪರಟೆ ತಲೆ, ಹಣ್ಣುಮುದುಕಿ. ಮತ್ತೊಬ್ಬಳು ಯುವತಿ. ಆಕೆಯ ಅಂಗ ಸೌಷ್ಠವ ಚೆನ್ನಾಗಿಯೇ ಇದೆ. ಬಲಿಷ್ಠವಾಗಿದ್ದಾಳೆ.

ಆ ಯುವತಿಯ ಮೈಬಣ್ಣ ಕಪ್ಪು, ಆದರೆ ಮಿಂಚುಕಪ್ಪು. ಕೈಯಲ್ಲಿ ಹಸಿರು ಚುಚ್ಚಿಸಿಕೊಂಡಿದ್ದಾಳೆ. ಹಣೆಯಲ್ಲಿ ಕುಂಕುಮವಿದೆ. ಕೊರಳಲ್ಲಿ ಅರಸಿನ ದಾರ. ಹೊಸ ದಾಗಿ ಮದುವೆಯಾದ ಹುಡುಗಿಯೋ? ಆ ಮುದುಕಿ ಅವಳಿಗೆ ತಲೆ ಬಾಚುತ್ತ ಅಲಂಕಾರ ಮಾಡಿಕೊಂಡಿದ್ದಳು.

ನಾನು ಕ್ಯೂವನ್ನು ಗಮನಿಸಿದೆ. ಬುಕ್ಕಿಂಗ್ ಆಫೀಸನ್ನು ತೆರೆದಿದ್ದಾರೆ. ಬಂದಾಗ ನಾನೇ ಕೊನೆಯಲ್ಲಿದ್ದೆ. ಈಗ ನನ್ನ ಹಿಂದೆಯೂ ಉದ್ದಕ್ಕೆ ಸಾಲು ಬೆಳೆದಿದೆ, ಬಹಳ ದೂರದ ವರೆಗೆ. ರೈಲಿನ ಬಾಲದ ಹಾಗೆ. ನಿಂತಿರುವವರು ಮುಂದಕ್ಕೆ ಮುಂದಕ್ಕೆ ಹೋಗುತ್ತ ನಾನೂ ಪಾದವನ್ನು ಎತ್ತಿಡುತ್ತಿದ್ದೇನೆ.

'ಯಾವಾಗ ನನಗೆ ಟಿಕೆಟ್ ಸಿಗುತ್ತದೆಯೋ?' ಎಂದು ಮನಸ್ಸಿನಲ್ಲಿಯೇ ನಾನು ಹೇಳಿಕೊಂಡೆ. ಮೊದಲೇ ಈ ಸಿನಿಮಾ ಬಂದಿತ್ತು. ಹಳೆಯ ಚಿತ್ರವೇ. ನಾನೂ ಇದಕ್ಕೆ ಮೊದಲು ಅದನ್ನು ಒಂದು ಸಲ ನೋಡಿದ್ದೇನೆ.

ಈ ಚಿತ್ರದ ಹೆಸರೇ ಒಂದು ಕವಿತೆಯ ಹಾಗಿದೆ. ಕೆಸರಿನಲ್ಲಿ ಅರಳಿದ ಹೊಂದಾವರೆ. ಒಂದು ಸಂಸಾರ—ಗಾರ್ಸನ್ ಮತ್ತು ಬಿಡ್ವರದು. ಅವರಿಗೆ ಒಂದು ಮಗು. ಪ್ರೀತಿಯ ಮಗು. ಇಬ್ಬರೂ ಆ ಮಗುವನ್ನು ತುಂಬಾ ಪ್ರೀತಿಸುತ್ತಾರೆ. ಆದರೆ ಆ ಮಗು ತೀರಿಕೊಂಡು ಬಿಡುತ್ತದೆ.

"ಏಯ್ ಹೆಣವೇ, ಏನು ಮಾತಾಡ್ತಾ ಇದ್ದೀ! ತಿನ್ನುವುದಕ್ಕೆ ಮಾತ್ರ ಬರ್‍ತೀಯೋ?

ಏನಾದರೂ ಬೇಯಿಸಿದರೆ ತಾನೇ ತಿನ್ನಲು ಸಾಧ್ಯ?" ಎನ್ನುವ ಕರ್ಕಶ ಧ್ವನಿ,

ಆ ದಿನ್ನೆಯ ಕಡೆ ತಿರುಗಿ ನೋಡಿದೆ. ಮೂರು ಕಲ್ಲುಗಳನ್ನು ಇಟ್ಟು ಕಪ್ಪು ಹಿಡಿದಿದ್ದ ಒಲೆಯ ಮುಂದೆ ಕುಳಿತು ಕೂಳು ಬೇಯಿಸುತ್ತಿದ್ದ ಆಕೆ ಕೂಗನ್ನು ಹಾಕಲು 'ಹೆಣ' ಎದ್ದು ಅಲ್ಲಿಗೆ ಓಡಿತು.

"ಹೋಗಿ ಎಲ್ಲಾದ್ರೂ ನಾಕು ಚಕ್ಕೆ ಸಿವುರು ತಕ್ಕೊಂಬಾ" ಎಂದವಳೆ ಆಕೆ, ಹೊಗೆಯ ಒಲೆಯನ್ನು ಊದತೊಡಗಿದಳು. ಕಣ್ಣುಗಳನ್ನು ತೀಡಿಕೊಳ್ಳುತ್ತ ಉಫ್ ಉಫ್ ಎಂದು ಊದಿದಳು.

ಈಗ ಆ ದಿಣ್ಣೆಯಲ್ಲಿ ಗೋಣೀಚೀಲವನ್ನು ನಡುವಿನ ವರೆಗೆ ಹೊದಿಸಿ ಮಲಗಿಸಿದ್ದ ಮಗುವಿಗೆ ಬಿಸಿಲು ಬೀಳಲು ಅದಕ್ಕೆ ಎಚ್ಚರವಾಗಿ ಅಳತೊಡಗಿತು. ಆ ಯುವತಿ ಅದನ್ನೆತ್ತಿಕೊಂಡವಳೇ ಅದರ ಬೆನ್ನು ಸವರುತ್ತ ಹಾಲೂಡತೊಡಗಿದಳು.

ನನ್ನ ಕಣ್ಣುಗಳು ಆ ಹೆಣವನ್ನು ನೋಡಿದುವು. ಹುಟ್ಟಿದಂದಿನಿಂದ ಅರ್ಧ ಗಜ ಬಟ್ಟೆಯೂ ಮೈಮೇಲಿಲ್ಲದ ಕೂಸು ಅದು. ಅದಕ್ಕೂ ಕಪ್ಪು ದೇಹ. ಲಿವರ್‌ಕ್ಯೂರ್ ವಿಳಂಬರದ ಮಗುವಿನ ಹಾಗೆ ಹೊಟ್ಟೆ ಉಬ್ಬಿದೆ. ಜಾರು ತುಂಬಿದ ಕಣ್ಣುಗಳು. ಕೊಳಕಾದ ತಲೆಕೂದಲು. ಮೂಗಿನಿಂದ ಒಸರುತ್ತಿರುವ ಸಿಂಬಳ. ಆ ಹುಡುಗ ಆ ಗೋಣಿತಾಟನ್ನೇ ಎಳೆದು ಮೂಗು ಒರಸಿಕೊಂಡ. ಈಗ ಆಕೆ ಅಲ್ಲಿ ಹರಡಿದ್ದ ಸಿನಿಮಾ ನೋಟೀಸು, ಟಿಕೆಟ್, ಇಂದವನ್ನೆಲ್ಲ ಹೆಕ್ಕಿ ಒಲೆಗೆ ತೆಗೆದುಕೊಂಡು ಹೋಗಿ ಹಾಕಿದಳು.

ಈಗ ತಲೆ ಬಾಚಿಕೊಂಡಿದ್ದ ಆ ಯುವತಿಯನ್ನು "ಏ ಸೆಲ್ವಿ, ಹೋಗಿ ನೀರು ಹಿಡಿದುಕೊಂಡು ಬಾ" ಎಂದಳು ಮುದುಕಿ. ಕಾಗದ ಹಾಳುಮೂಳು ಹಾಕಿರಲು ಒಲೆ ಧಗಧಗ ಎನ್ನುತ್ತಿತ್ತು. ಪಡಸಾಲೆಯಲ್ಲಿ ಅವಳ ಅಕ್ಕ ಮಗುವನ್ನು ಮಲಗಿಸುತ್ತ ಇದ್ದಳು. ಒಲೆಯ ಮೇಲಿದ್ದ ಚಟ್ಟಿಯನ್ನು ಕೆಳಗಿಳಿಸಿ ನೀರು ತರಲು ಆಕೆ ಹೊರಟಳು. 'ಹೆಣ' ಕಾಗದದ ಚೂರುಗಳನ್ನು ಹೆಕ್ಕುತ್ತ ನಿಂತಿತ್ತು,

"ಮುಂದೆ ಹೋಗಿ ಸಾರ್" ಎನ್ನುವ ಕೂಗನ್ನು ಕೇಳಿ ಎಚ್ಚರಾದೆ. ಮುಂದೆ ಹೆಜ್ಜೆಯಿಟ್ಟೆ, ಇನ್ನೂ ಈ ಸಾಲು ಕರಗಿಲ್ಲ. ಉದ್ದಕ್ಕೆ ಇದೆ. ನಾನು ಟಿಕೆಟ್ ತೆಗೆದು ಕೊಳ್ಳಬೇಕಾದರೆ ನನ್ನ ಮುಂದೆ ಇನ್ನೂ ಐವತ್ತು ಅರವತ್ತು ಜನ ಇದ್ದಾರೆ. ಆ ಕಡೆ ಈ ಕಡೆ ತಿರುಗುವಾಗ ಎದುರು ಗೋಡೆಯ ಮೇಲಿದ್ದ ಜಾಹಿರಾತು ಕಣ್ಣಿಗೆ ಬಿತ್ತು....

ಗಾರ್‌ಸನ್ ಮತ್ತು ಬಿಡ್ಜ್. ಗಾರ್ಸನಿನ ಶಾಂತಮುಖ, ಅದರ ಪಕ್ಕದಲ್ಲಿ ಮೂಗು ಮುಖ ಲಕ್ಷಣವಾಗಿರುವ ಬಿಡ್ಜನ ಚಿತ್ರ. ಎರಡೂ ಶೋಕದ ಛಾಯೆ ಉಳ್ಳದ್ದೇ. ಮಗುವನ್ನು ಕಳೆದುಕೊಂಡು ಹೇಗೆ ನಟನೆ ಮಾಡುವುದು? ಶೋಕ ಪಾತ್ರಗಳಲ್ಲಿ ಗಾರ್ಸನ್ ಯಾವಾಗಲೂ ಚೆನ್ನಾಗಿಯೇ ನಟಿಸುತ್ತಾಳೆ. ಒಂದು ಚಿತ್ರದಲ್ಲಿ ಪತಿ ತೀರಿ ಕೊಂಡ ಸುದ್ದಿಯನ್ನು ಕೇಳಿ. ಸ್ವಲ್ಪವೂ ಅಳದೆ ಒಂದು ಮಾತೂ ಆಡದೆ ಮುಖಭಾವ

ದಿಂದಲೇ ಶೋಕವನ್ನು ವ್ಯಕ್ತಪಡಿಸುವ ಆ ನಟನೆ... ಇದರಲ್ಲಿಯೂ ಮಗು ಸತ್ತೊಡನೆ ಚೆನ್ನಾಗಿಯೇ ಅಭಿನಯಿಸುತ್ತಾಳೆ. ಪ್ರೀತಿಯ ತನ್ನ ಮಗು ಕಾಲವಾಗಲು ಚಿತ್ತಭ್ರಮೆ ಯಿಂದ ಯಾವ ಮಗುವನ್ನು ನೋಡಿದರೂ ಒಂದು ಬಗೆಯ ಆನಂದ; ದುಃಖ. ಆದುದರಿಂದ ತನ್ನ ಬಾಳೆಲ್ಲವನ್ನೂ ಮಕ್ಕಳೊಂದಿಗೆ ಮಕ್ಕಳಿಗಾಗಿ ಅರ್ಪಿಸೋಣ ಎಂದು ತೀರ್ಮಾನಿಸುತ್ತಾಳೆ. ಅನಾಥ ಮಕ್ಕಳನ್ನು ತಾನು ಪಾಲಿಸಬೇಕು ಎನ್ನುವ ಚಪಲ ಏರ್ಪಡುತ್ತದೆ. ಆದರೆ ಇಷ್ಟೆಲ್ಲ ಹೊಣೆಗಾರಿಕೆಗೆ ಹಣ ಎಲ್ಲಿಂದ ಬರಬೇಕು?

"ಸಾರ್, ಒಂದು ಕಾಸು ಕೊಡಿ ಸಾರ್."

ಕೂಗನ್ನು ಕೇಳಿ ತಿರುಗಿ ನೋಡಿದೆ. ಆ 'ಹೆಣ' ಕ್ಯೂನಲ್ಲಿ ನಿಂತಿದ್ದವರನ್ನು ಭಿಕ್ಷೆ ಬೇಡುತ್ತಿದ್ದ. ಬಾಯಿಗೆ ಬರುತ್ತಿದ್ದ ಸಿಂಬಳವನ್ನು ತುದಿನಾಲಗೆಯಿಂದ ಒರಸಿಕೊಳ್ಳುತ್ತಿದ್ದ.

ಮತ್ತೆ ಅಲ್ಲಿ "ಓ ಮಚ್ಚಾನ್ ಬಂದ್ಬಿಟ್ಟ" ಎನ್ನುವ ಕೂಗು ಕೇಳಿಸಿತು. ತಿರುಗಿ ನೋಡಿದೆ. ಒಲೆಯ ಮೇಲಿದ್ದ ಪಾತ್ರೆಯನ್ನು ಕೆಳಗೆ ಇಳಿಸಿ, ಆ ಯುವತಿ ಈ ಕಡೆ ಕಣ್ಣು ಹಾಯಿಸಿದಳು.

ರಿಕ್ಷಾವನ್ನು ಒಂದು ಕಡೆ ನಿಲ್ಲಿಸಿ ಹೆಂಡತಿಯ ಬಳಿ ಆ ಮಚ್ಚಾನ್ ಬಂದ, ಬಳಿಕ ಅಲ್ಲಿ ಕುಳಿತವನೆ "ಅಣ್ಣಾ ಬರಲಿಲ್ಲವೋ?" ಎಂದು ಕೇಳುತ್ತ "ಸರಿ ಸರಿ, ಅನ್ನ ಹಾಕು. ನಾನು ಹೋಗ್ಬೇಕು" ಎಂದ.

"ಈಗ ತಾನೇ ಬಂದೆ. ಯಾಕೆ ನಿಂಗೆ ಇಷ್ಟು ಆತ್ರ?" ಎಂದಳು ಆ ಯುವತಿ.

ಈಗ ಆತ ಆ ದಿಣ್ಣೆಯಲ್ಲಿ ಮಲಗಿದ್ದ ಮಗುವನ್ನು ಎತ್ತಿ ನೆಳಲಲ್ಲಿ ಮಲಗಿಸಿ ಬಂದ.

"ಏನಕ್ಕಾ, ಇದು ಹೋಗುತ್ತಂತೆ. ನಾಕು ಅನ್ನದ ಅಗುಳು ಹಾಕ್ಲಾ?" ಎಂದು ಕೇಳಿದಳು ಯುವತಿ.

"ಹಾಕು, ಹಾಕು. ಹಾಕಿ ಕಳಿಸು. ನಾಕು ಕಾಸು ಸಂಪಾದಿಸೋದ್ನ ಕೆಡಿಸಬೇಡ" ಎಂದಳು ಪರಟೆ ತಲೆಯ ಅಕ್ಕ.

ಆ ದಂಪತಿಗಳು ದಿಣ್ಣೆಗೆ ಬಂದರು, ಗೋಣೀತಾಟಿನ ಪರದೆಯ ಹಿಂದೆ ಆತ ಕುಳಿತ. ಆಕೆ ಅನ್ನವನ್ನು ಸಿಲ್ವರ್ ತಟ್ಟೆಗೆ ಹಾಕಿದಳು. ಅವನು ತನ್ನ ಜೇಬಿನಲ್ಲಿದ್ದ ಕೆಲವು ಹಳದಿ ಹೂವುಗಳನ್ನು ರಹಸ್ಯವಾಗಿ ಅವಳ ತುರುಬಿಗೆ ಮುಡಿಸಿದ.

ಯುವತಿ ತಲೆಯನ್ನು ಹೀಗೀಗೆ ಆಡಿಸುತ್ತ "ಆಟ ಆಡ್ಬೇಡ. ಅಕ್ಕಾ ನೋಡುತ್ತೆ ಎಂದಳು.

"ಲೇಲೇ ಮರೀ, ಹೆಂಗೆ ಚೆನ್ನದ್ದಂಗೆ ಹೊಳೀತೀಯೇ ನೀನೂ......"

"ನಾನು ಇನ್ನೂ ಮರೀನಾ?"

ಇಬ್ಬರೂ ನಗೆಯಾಡಿದರು. ಅಲ್ಲಿಯೇ ಒಂದು ಸಿನಿಮಾವನ್ನು ಅವರು ನೋಡಿ ದರೋ ಏನೋ?

"ಇವತ್ತು ಹಬ್ಬ......" ಎನ್ನುತ್ತ ಅವನು ಅವಳ ಕೆನ್ನೆಯನ್ನು ಮೆಲ್ಲಗೆ ಚಿವುಟಿದ.

ಆ ಸರಸ ನಾಟಕವನ್ನು ನಾನು ಮೇಲೂ ನೋಡುತ್ತ ನಿಲ್ಲುವ ಹಾಗಿರಲಿಲ್ಲ. ಸಾಲು ಮುಂದೆ ಸರಿಯಿತು. ನಾನೂ ಮುಂದೆ ಹೋದೆ.

"ಇನ್ನೂ ಎಷ್ಟು ಹೊತ್ತೋ?" ಎಂದ ನನ್ನ ಹಿಂದೆ ನಿಂತಿದ್ದವ.

"ಈ ಸಿನಿಮಾಕ್ಕೆ ಎಷ್ಟು ಡಿಮಾಂಡು!" ಎಂದ ಮತ್ತೊಬ್ಬ,

ಹೌದು. ಯಾಕೆ ಇದಕ್ಕೆ ಇಷ್ಟು ಗುಂಪು? ಇದು ಒಳ್ಳೆಯ ಚಿತ್ರ ಅಷ್ಟೇ.

ಅನಾಥಾಲಯಕ್ಕೆ ಆಕೆ ನಿಧಿ ಶೇಖರಿಸುತ್ತಾಳಲ್ಲ, ಎಂಥೆಂಥ ದೊಡ್ಡ ಮನುಷ್ಯರ ಬಳಿಗೂ ಆಕೆ ಹೋಗುತ್ತಾಳೆ. ರಹಸ್ಯವಾಗಿ ಕಾಮಕೇಳಿಕೆಗಳನ್ನು ನಡೆಸುವ ಶ್ರೀವಂತ ಮನೆಯ ಗಂಡಸರಿಗೂ ಹೆಂಗಸರಿಗೂ ಕರುಣೆಯೇ ಉಂಟಾಗುವುದಿಲ್ಲ.

ಆ ವೃದ್ಧೆ! ವಯಸ್ಸು ಎಂಬತ್ತಾದರೂ ಮುಖಕ್ಕೆ ಪೌಡರು, ಬಣ್ಣ ಬಳಿದು ಆಡಂಬರ ಮಾಡುವ ಆಕೆ ಏನು ಹೇಳುತ್ತಾಳೆ? "ವ್ಯಭಿಚಾರದಿಂದ ಹುಟ್ಟಿದ ಮಗುವಿಗೆ ಮನೆ ಮಠ ಬೇಕೇನು?"

ಅವಳ ಮಾತಿಗೆ ಆ ಕಥಾನಾಯಕ ನೀಡುವ ಉತ್ತರ ಹೀಗೆ:

"ಯಾರು ವ್ಯಭಿಚಾರಿಗಳು? ಮುಂದೆ ಒದಗುವ ಫಲವನ್ನು ನಿರೀಕ್ಷಿಸದೆ ಕಾಮದಿಂದ ಜನಿಸಿದ ಮಗುವನ್ನು ಹೊರಗೆ ಬಿಸಾಡಿ ತಮ್ಮ ಪ್ರಭಾವದಿಂದ ಬಚ್ಚಿಡುವ ದುರ್ಮಾರ್ಗಿಗಳೋ? ಹಾಗಲ್ಲದೆ ಈ ಅನಾಥಮಕ್ಕಳೋ? ಯಾರು ವ್ಯಭಿಚಾರಿಗಳು? ಯಾವ ಮಗುವೂ ಕಳ್ಳ ಮಗು ಅಲ್ಲ .....ಅದನ್ನು ಹೆತ್ತವರೇ ಕಳ್ಳತನವಾಗಿ ಹೆತ್ತಿದ್ದಾರಲ್ಲ. ಪಾಪದ ಶಿಶು ಪಾಪಿಯೊ? ಪಾಪದಿಂದ ಜನಿಸಿದ ಮಗು ಉತ್ತಮನಾಗಲು ಸಾಧ್ಯವಿದೆ......"

ನನ್ನ ಮನಸ್ಸು ತತ್ತ್ವ ವಿಚಾರದಲ್ಲಿ ಪ್ರವೇಶಿಸುವುದಕ್ಕೆ ತಡೆಯಾಗಿ ಆ 'ಹೆಣ' ಮುಂದೆ ಬಂದಿತು:

"ಸಾಮೀ, ಒಂದು ಕಾಸು ಹಾಕು ಸಾಮೀ......"

ಕಾಲಾಣೆ ತೆಗೆದು ನಾನು ಅವನಿಗೆ ಕೊಟ್ಟೆ.

ಸಮಂಜಸವಾದ ಶೀರ್ಷಿಕೆ......ಕೆಸರಿನಲ್ಲಿ ಅರಳಿದ ಹೊಂದಾವರೆ,...... ಇವೊತ್ತು ಖ್ಯಾತನಾಮನಾಗಿರುವ ಸ್ಟಾಲಿನ್ ಒಬ್ಬ ಚಪ್ಪಲಿ ಹೊಲಿಯುವವನ ಮಗ. ಗಾರ್ಕಿ ಮೂಟೆ ಹೊತ್ತಿದ್ದವನು. ರೂಸೋ ರೊಟ್ಟಿ ಅಂಗಡಿಯಲ್ಲಿ ಕೆಲಸ ಮಾಡಿದವನು......

ಎದುರಿನ ದಿಣ್ಣೆಯ ಬಳಿ ಮತ್ತೊಂದು ರಿಕ್ಷಾ ಬಂದು ನಿಂತಿತು. ದೇಹದಲ್ಲಿ ಹರಿಯುವ ಬೆವರನ್ನು ಒರಸಿಕೊಂಡು ಬಂದ ಆ ರಿಕ್ಷಾದವ.

"ಏನು? ಕೂಳು ಇನ್ನೂ ಬೇಯಿಸಾಗಿಲ್ಲವೊ?" ಎಂದು ಬೇಜಾರಿನಿಂದ ಕೇಳುತ್ತ ಆತ ಆ ದಿಣ್ಣೆಯ ಮೇಲೆ ಕುಳಿತ.

"ಮಚ್ಛಾನ್ ಬಂದು ತಿಂದ್ಬುಟ್ಟು ಹೋಯ್ತು. ನಿನಗೆ ಹಾಕ್ಲಾ?" ಎಂದು ಕೇಳಿದಳು ಯುವತಿ.

"ಸರಿ, ಚಿಕ್ಕ ಹೈದ ಎಲ್ಲಿ?"

"ಹೆಣ? ಇಲ್ಲೇ ನಿಂತಿತ್ತು."

ತಂದೆಯ ಕಣ್ಣುಗಳು "ಸಾರ್, ಕಾಲಾಣೆ ಸಾರ್" ಎಂದು ಕೂಗನ್ನು ಹಾಕಿ ತಿರುಪೆ ಬೇಡುತ್ತಿದ್ದ ಆ ಹುಡುಗನನ್ನು ಕಂಡು ಹಿಡಿದುಬಿಟ್ಟಿತು. ಒಡನೆ ಆತ ಕ್ಯೂ ಬಳಿ ಧಾವಿಸಿ ಬಂದ. ಹೆಣದ ಕೈಯನ್ನು ಹಿಡಿದ. ಅದರ ಕೈಯಲ್ಲಿ ನಾಲ್ಕು ಕಾಲಾಣೆಗಳು ಇದ್ದುವು.

ತಂದೆಯ ಮುಖ ರಕ್ತ ಚಿಮ್ಮಿದ ಹಾಗೆ ಮಿನುಗಿತು.

"ಹೆಣವೇ ನನ್ನೆದುರು ಭಿಕ್ಷೆ ಬೇಡ್ತಿಯಾ! ನಿನಗೇನು ಹಾಳು ರೋಗ ಬಂತು?" ಎಂದವನೇ ಅವನ ಕೈಯಲ್ಲಿದ್ದ ನಾಣ್ಯಗಳನ್ನು ತೂಕಿ ಎಸೆದು ದರದರವೆಂದು ಅವನನ್ನು ಹಿಡಿದು ಎಳೆದುಕೊಂಡು ಹೋದ.

ಆ ಹುಡುಗ ಒಂದೇ ಸಮನೆ ಕೂಗಿಕೊಂಡ:

"ಅದನ್ನು ಯಾಕೆ ಹೀಗೆ ಎಳಕೊಂಡು ಬರ್ತಿಯಾ?" ಎಂದು ಕೇಳಿದಳು ತಾಯಿ.

"ಯಾಕೆ? ನಾನು ಸಂಪಾದಿಸೋದು ಸಾಕಾಗಲಿಲ್ಲ. ಮಾನ ಮರ್ಯಾದೆ ಇಲ್ಲದೆ ನಿನ್ನ ಮಗ ಭಿಕ್ಷೆ ಬೇಡ್ತಾನೆ" ಎಂದು ಆತ ಕೂಗಿಕೊಂಡ.

ಕ್ಯೂ ಮುಂದೆ ಸರಿಯಿತು. ನಾನೂ ಸಹ. ಬ್ರಾಡ್‌ವೇಯಲ್ಲಿ ಗಡಗಡಗಡಾ ಎಂದು ಟ್ರಾಂ ಓಡುತ್ತಿತ್ತು, ಈ ಕ್ಯೂ ಸಹ ವಣ್ಣಾರಪೇಟೆ ಟ್ರಾಮಿನ ಹಾಗೆ ಬಳಸುವುದೂ ನಿಲ್ಲುವುದೂ ಆಗಿತ್ತು. ಇನ್ನು ಮೂರೇ ಜನ. ಆ ಮೇಲೆ ನಾನು. ಆದುದರಿಂದ ಟಿಕೆಟ್ ಕೊಳ್ಳಲು ಹಣಕ್ಕಾಗಿ ಕಿಸೆಗೆ ಕೈಹಾಕಿದೆ.

ಮತ್ತೊಮ್ಮೆ ನಾನು ಈಗ ಆ ದಿಣ್ಣೆಯತ್ತ ಕಣ್ಣು ಹಾಯಿಸಿದೆ. ಹೆಂಡತಿ ಹಾಕುವ ಕವಳವನ್ನು ಆತ ಗಬಗಬನೆ ತಿನ್ನುತ್ತಿದ್ದ. 'ಹೆಣ' ಬಿಕ್ಕುತ್ತ ಇತ್ತು. "ಹುಡುಗನಿಗೆ ಇಷ್ಟು ಸದರ ಕೊಡಬಾರದು" ಎಂದು ಆತ ಹೆಂಡತಿಯೊಡನೆ ಕೂಗಾಡುತ್ತ ಇದ್ದ. "ತಿರುಪೆ ಮಾಡ್ತೀಯಾ?" ಎಂದು ಅವನನ್ನು ಗದರಿಸಿಕೊಳ್ಳುತ್ತಿದ್ದ

ಕ್ಯೂ ಮುಂದೆ ಸರಿಯಿತು.

ತಿರುಪೆ. ಮೈಮುರಿದು ದುಡಿದು ಹೆಂಡದಂಗಡಿಗೂ ಮಾರವಾಡಿಗೂ ದುಡ್ಡ ತೆರುವ ಈ ರಿಕ್ಷಾದವನು ಧರ್ಮವನ್ನೂ ನೀತಿಯನ್ನೂ ಬೋಧಿಸದಿದ್ದರೆ ಹೇಗೆ? ಧರ್ಮ, ನೀತಿ ಎನ್ನುವ ವಾಕ್ಯಗಳೇ ಬರಿಯ ಅಲಂಕಾರ ಶಬ್ದಗಳೇನೋ?

ಇದಕ್ಕೆ ಮೊದಲು ನನ್ನನ್ನು ಕುಳ್ಳಿರಿಸಿ ಎಳೆದುಕೊಂಡು ಬಂದ ಆ ರಿಕ್ಷಾದವನು ಒಂದಾಣೆಗಾಗಿ ನನ್ನೊಂದಿಗೆ ಜಗಳವಾಡಿದ್ದ. ಇವನು ಅಂಥ ಒಂದಾಣೆಯನ್ನು ದೂರ ಎಸೆದಿದ್ದಾನೆ. ಇದು ತಿರುಪೆ ಕಾಸು: ಎಂಜಲು ಕಾಸು. ದುಡಿಮೆಗೆ ತಕ್ಕ ಪ್ರತಿಫಲ ವನ್ನು ಜಗಳವಾಡಿ ತೆಗೆದುಕೊಳ್ಳುವುದು ತಪ್ಪಲ್ಲ. ದುಡಿಯದೇ ಬೇಡುವುದು ಮಾತ್ರ ಮಹಾಪರಾಧ, ಆದರೆ ಓದಿಯೂ ಪದವಿಯನ್ನು ಪಡೆದೂ ಲಂಚ ತಗೆದುಕೊಳ್ಳುವ ಅಧಿಕಾರ ವರ್ಗ. ಅವರಿಗಿಂತ ಈತ ಎಷ್ಟೋ ಮೇಲು.

ಕ್ಯೂ ಇನ್ನೂ ಮುಂದೆ ಹೋಯಿತು. ಈಗ ಆ ಮಾನವ ಸಾಲಿಗೆ ನಾನೇ ಇಂಜಿನ್ನು. ನನ್ನ ಮುಂದಿದ್ದವರು ಟಿಕೆಟ್ಟನ್ನು ಪಡೆದಿದ್ದಾಯಿತು. ನಾನು ಹಣವನ್ನು ಚಾಚಿದೆ. ಆದರೆ ಧಡಾರನೆ ಆ ಕಿಟಕಿಯ ಬಾಗಿಲು ಮುಚ್ಚಿಕೊಂಡಿತು.

"ಒಂದೇ ಒಂದು ಟಿಕೆಟ್" ಎಂದೆ.

"ಎಕ್ಸ್‌ಕ್ಯೂಯಸ್ ಮಿ" ಎನ್ನುವ ಉತ್ತರ ಬಂದಿತು. ಹಣವನ್ನು ಮತ್ತೆ ಜೇಬಿಗೆ ಇಳಿಬಿಟ್ಟು ಹೊರಬಂದೆ.

ಸಾಲು ಕರಗಿತು. ನನ್ನ ಹೃದಯದೊಳಗಿಂದ ಒಂದು ಕರೆ ಮೊಳಗುತ್ತಲೇ ಇತ್ತು. ಕೆಸರಿನಲ್ಲಿ ಅರಳಿದ ಹೊಂದಾವರೆಗಳನ್ನು ಈ ಟಾಕೀಸಿನ ಬಳಿ ಮಾತ್ರ ನೋಡ ಬಹುದೋ? ಎಲ್ಲೆಲ್ಲಿಯೂ ಇಂಥವು ಕಾಣಸಿಗುತ್ತವೆಯೋ ಹೇಗೆ?

# ಮೌನವೇ ಒಂದು ಭಾಷೆ

ಒಳ್ಳೆಯ ಸಮಯ. ಅವನು ಒಬ್ಬನಾಗಿಯೇ ಬಂದಿದ್ದ.

ಐದು ವರುಷಗಳಿಗೆ ಹಿಂದೆ 'ನನಗೆ ಏಳು ಮಕ್ಕಳು ಮಾತ್ರ ಜನಿಸಿದ್ದಾರೆ ಎಂದು ಭಾವಿಸಿ ನಿನ್ನನ್ನು ಮನಸ್ಸಿನಿಂದ ತೊಡೆದುಹಾಕಿದ್ದೇನೆ. ನಮ್ಮ ಮುಖದರ್ಶನ ನೀನು ಮಾಡದಿದ್ದರೆ ಸಾಕು. ಅದೇ ನೀನು ನಮಗೆ ಮಾಡುವ ದೊಡ್ಡ ಉಪಕಾರ' ಎಂದು ಬರೆದ ಸಿಂಗಾರಂ ಪಿಳ್ಳೈ ಕಾಗದಕ್ಕೆ ಉತ್ತರವನ್ನೇ ಬರೆಯದೆ 'ಸರಿ, ಹಾಗೆಯೇ ಆಗಲಿ' ಎನ್ನುವ ಹಾಗೆ ಮೌನವಾಗಿ ಇದ್ದ ರವಿಗೆ, ಅವನ ತಾಯಿ ಮಾಡಿದ ಅನುಚಿತ ಕಾರ್ಯದಿಂದ, ಒಡನೆ ಬರುವ ಹಾಗೆ ಕಾಗದವನ್ನು ಹಾಕಿ 'ಅವನು ಮಾತ್ರ ಬರುತ್ತಾನೋ ಅಥವಾ ಆ ಸೀಮೆಯವಳನ್ನೂ ಕರೆದುಕೊಂಡು ಬರುತ್ತಾನೋ?' ಎಂದು ಉದ್ವೇಗದಿಂದಿದ್ದ ಸಂಗಾರಂ ಪಿಳ್ಳೈ, ಗಾಡಿಯಿಂದ ರವಿ ಒಬ್ಬನೇ ಇಳಿಯುತ್ತಿರುವುದನ್ನು ನೋಡಿ ಸಮಾಧಾನದ ನಿಟ್ಟುಸಿರಿಟ್ಟರು.

ರವಿ ಸಾಧಾರಣ ಪಂಚೆಯನ್ನೂ ಷರ್ಟನ್ನೂ ಹಾಕಿದ್ದ. ಅದೇ ಹಳೆಯ ರವಿಯಾಗಿದ್ದ. ಐದು ವರ್ಷಗಳಿಂದೀಚೆಗೆ, ತನ್ನ ಇಪ್ಪತ್ತೆಂಟನೆಯ ವಯಸ್ಸಿಗೇ ತುಂಬಾ ದೊಡ್ಡ ಮನುಷ್ಯನ ಹಾಗೆ ಕಾಣುತ್ತಿದ್ದಾನೆ. ತಲೆಯ ಮುಂಭಾಗ ಕೂದಲುಗಳಿಲ್ಲ. ನೋಡುವುದಕ್ಕೆ ಅವನ ಅಣ್ಣ ಸುಂದರನಿಗಿಂತಲೂ ದೊಡ್ಡವನಾಗಿ ಕಂಡರೂ ಅವನ ಸೌಂದರ್ಯ ಕುಂದಿಲ್ಲ. ಮೈಬಣ್ಣ ಮೊದಲಿಗಿಂತಲೂ ಸ್ವಲ್ಪ ಚೆನ್ನಾಗಿದೆ. ಸ್ವಲ್ಪ ಹೊಟ್ಟೆಯೂ ಬಂದಿದೆ. ರೂಪಿನ ಜತೆಗೆ ಬುದ್ಧಿಯಲ್ಲಿ ಏನು ಕಡಮೆ? ಸಣ್ಣ ವಯಸ್ಸಿನಿಂದಲೂ ಅವನು ತುಂಬಾ ಚುರುಕು. ಸುಂದರಂ ಮನೆ ಹೊಲ ನೋಡಿಕೊಂಡಿರುವುದಕ್ಕೇ ಲಾಯಕ್ಕು. ಇವನು ಚೂಟಿಯಾಗಿದ್ದಾನೆಂದೇ ಹೆಚ್ಚಿನ ವಿದ್ಯಾಭ್ಯಾಸಕ್ಕೆ ನಗರಕ್ಕೆ ರವಿಯನ್ನು ಕಳಿಸಿದ್ದು ಆಯಿತು. ಓದಲು ಹೋದ ಮಗನಿಗೆ ಬುದ್ಧಿ ಕೆಟ್ಟಿತಲ್ಲ. ಆ ಬಿಳಿಯರವಳ ಹಿಂದೆ ಸುತ್ತಾಡುತ್ತ . . . . ಉಂ . . . .

"ಅಪ್ಪಾ"

ಕೈಯಲ್ಲಿ ಸೂಟ್‌ಕೇಸ್ ಹಿಡಿದು ಬಂದಿದ್ದ ರವಿ ತಂದೆಯ ಹಿಂದೆ ನಿಂತವನೇ ಮೆಲ್ಲಗೆ ಕೂಗನ್ನು ಹಾಕಿದ. ಆದರೆ ಸಿಂಗಾರಂ ಪಿಳ್ಳೈ ಈ ಕಡೆ ತಿರುಗಲಿಲ್ಲ. ಅವರ ಕಣ್ಣುಗಳಲ್ಲಿ ಮಾತ್ರ ನೀರು ತುಂಬಿತ್ತು. ಅದು ಅವನಿಗೆ ತಿಳಿಯದು.

ರವಿಯ ತುಟಿಗಳ ಮೇಲೆ ಕಿರುನಗೆ. ಆತ ಚಿಂತೆ ತುಂಬಿದ ದನಿಯಲ್ಲಿ ಹೇಳಿದ:

"ಅಮ್ಮನಿಗೆ ಹೇಗಿದೆ? ಯಾಕೆ ಹೀಗೆ ಮಾಡಿದಳು? ಈ ವಯಸ್ಸಿನಲ್ಲಿ ಆತ್ಮಹತ್ಯೆ ಮಾಡಿಕೊಳ್ಳಬೇಕೆಂದು ಯಾಕೆ ಮನಸ್ಸಾಯಿತು?" ಎಂದು ಒಂದರ ಮೇಲೊಂದು ಪ್ರಶ್ನೆಗಳನ್ನು ಹಾಕಿದ.

ಮಗನ ಮುಖದ ಕಡೆ ತಿರುಗದೆ ಸಿಂಗಾರಂ ಪಿಳ್ಳೈ ಅತ್ತ ನೋಡುತ್ತಲೇ ಅವನಿಗೆ ಉತ್ತರ ಹೇಳಿದರು:

"ಆ ಕೊಟಡಿಯಲ್ಲಿ ಅವಳು ಮಲಗಿದ್ದಾಳೆ. ಒಳಗೆ ಹೋಗಿ ನೋಡಿ, ಅವಳನ್ನೇ ಕೇಳು. ಈ ಮನೆಯಲ್ಲಿ ಪ್ರತಿಯೊಬ್ಬರೂ ಅಸಾಧಾರಣ ಬುದ್ಧಿವಂತರು.... ಹುಂ ಕರ್ಮ...."

ಹೀಗೆ ಹೇಳಿದವರೇ ಅವರು ಹೊರ ದಿಣ್ಣೆಯ ಮೇಲೆ ಬಂದು ಕುಳಿತರು. ಒಳಗೆ ಪ್ರವೇಶಿಸುವ ಮಗನನ್ನು ಅವರು ಕಡೆಗಣ್ಣಿನಿಂದ ನೋಡಿದರು.

'ಮಗ ಎನ್ನುವ ಬಂಧವೇ ನನಗೆ ಕಡಿದುಹೋಯಿತು. ನಾನು ಹಾಗೆ ಭಾವಿಸಿದ್ದೇನೆ. ಆದರೆ ಹೆತ್ತವಳು ನನ್ನ ಹಾಗೆ ಇರಲು ಸಾಧ್ಯವೋ? ಅದು ಸರಿ, ಅದು ಹೇಗೆ ಇವಳು ಈ ಕೆಲಸ ಮಾಡಿದಳು!' ಎಂದು ಪತ್ನಿಯ ಬಗೆಗೆ ಚಿಂತಿಸಿದ ಸಿಂಗಾರಂ. ಎರಡು ದಿನಗಳ ಹಿಂದೆ ಆಕೆ ಆತ್ಮಹತ್ಯೆ ಮಾಡಿಕೊಳ್ಳಲು ಹೊರಟ ಸಂಭವವನ್ನು ಮತ್ತೆ ಈಗ ನೆನಪಿಸಿಕೊಂಡರು.

ಸಿಂಗಾರಂ ಪಿಳ್ಳೈ ಪತ್ನಿ ಅಲಮು ಅಚ್ಚಿಗೆ ಎಷ್ಟೋ ಚಿಂತೆಗಳು.

ಅವನ ಹಿರಿಯ ಮಗ ಸುಂದರನಿಗೆ ಮದುವೆಯಾಗಿ ಹತ್ತು ವರ್ಷಗಳು ಕಳೆದಿದ್ದರೂ ಇನ್ನೂ ಅವನಿಗೆ ಮಕ್ಕಳಾಗಿಲ್ಲ. ತನ್ನ ಪ್ರೀತಿಯ ಎರಡನೆಯ ಮಗ ನಗರದಲ್ಲಿ ವಿದ್ಯಾಭ್ಯಾಸವನ್ನು ಮುಗಿಸಿ, ಮದುವೆ ಮಾಡಿಕೊಂಡು ಮನೆಯಲ್ಲಿ ಇರುತ್ತಾನೆ ಎಂದು ಆಕೆ ಭಾವಿಸಿದ್ದಳು. ಆ ಕನಸೂ ನನಸಾಗಲಿಲ್ಲ. ಅವಳ ಮಗ ರವಿ, ತನಗೆ ಸೀನಿಯರ್ ಆಗಿದ್ದ ಆಂಗ್ಲ ಮಹಿಳಾ ಡಾಕ್ಟರನ್ನು ಪ್ರೀತಿಸಿ, ಅವಳನ್ನು ಮದುವೆಯಾಗುತ್ತೇನೆ ಎಂದು ಮನೆಯಲ್ಲಿ ಬಂದು ತಿಳಿಸಿ, ತಂದೆಗೂ ಮಗನಿಗೂ ವಾಗ್ವಾದ ಆದಾಗ ಆಕೆ ಮೌನವಾಗಿರಬೇಕಾಯಿತು.

ಆಕೆಯ ಮೌನವನ್ನು ಇಬ್ಬರೂ ತಮಗೆ ಸಾಧಕವಾದದ್ದು ಎಂದು ತೀರ್ಮಾನಿಸಿಕೊಂಡರು. ರವಿ ಈಗ ಮದರಾಸಿನಲ್ಲಿ ಆ ಆಂಗ್ಲ ಮಹಿಳೆಯೊಂದಿಗೆ ನರ್ಸಿಂಗ್ ಹೋಂ ನಡಸುತ್ತಿದ್ದಾನೆ.

ಆ ಮಹಿಳೆಯನ್ನು ವಿವಾಹವಾದಾಗ ಅಲಮು ಅಚ್ಚಿ ಸಂತೋಷಗೊಂಡಳೋ ದುಃಖಪಟ್ಟಳೋ ಹೇಗೆ ಆ ವಿಷಯ ಯಾರಿಗೂ ತಿಳಿಯದು. ಆದರೆ ಸಿಂಗಾರ ಪಿಳ್ಳೈ 'ಅವನು ನನ್ನ ಮಗನಲ್ಲ. ತಲೆಸ್ನಾನ ಮಾಡಿಬಿಟ್ಟಿದ್ದೇನೆ. ನೀನೂ ಹಾಗೆಯೇ ಮಾಡು' ಎಂದಾಗ, ಆ ಮಾತನ್ನು ಕೇಳಿ ಅವಳು ದುಃಖಿಸಿದಳೋ ಹೇಗೆ ಆ ವಿಷಯವೂ ಯಾರಿಗೂ ತಿಳಿಯದು.

ಅಲಮು ಅಚ್ಚಿಗೆ ತಿಳಿದ ಭಾಷೆ ಒಂದೇ. ಅದೆ ಮೌನ.

ಈ ಐದು ವರ್ಷಗಳಲ್ಲಿ ರವಿಗೆ ತಿಳಿಯದ ಹಾಗೆ ಆ ಮನೆಯಲ್ಲಿ ಎಷ್ಟೋ ಸಂಭವ

ಗಳು ನಡದುಹೋಗಿವೆ. ಅವನ ತಮ್ಮಂದಿರಾದ ಮುತ್ತುವಿಗೂ ಸೋಮುವಿಗೂ ಮದುವೆ ಆಗಿದೆ.* ಅವನ ಅಕ್ಕ ಕಾಮಾಕ್ಷಿ ಗಂಡ ಸತ್ತು ಅತ್ತೆಯ ಮನೆಯಲ್ಲಿ ಇದ್ದ ವಳು, ಈಗ ಅಲ್ಲಿನ ಆಸ್ತಿಯನ್ನು ಭಾಗಮಾಡಿಕೊಂಡು ಮಕ್ಕಳೊಂದಿಗೆ ತವರಿಗೆ ಬಂದು ಸೇರಿದ್ದಾಳೆ. ಸಮೀಪದ ಊರುಗಳಿಗೆ ಮದುವೆಯಾಗಿದ್ದ ಅವನ ಇನ್ನಿಬ್ಬರು ತಂಗಿ ಯರು ಪಂಕಜ ಮತ್ತು ಇಂದಿರಾ ಎರಡು ವರುಷಗಳಿಗೊಮ್ಮೆ ಇಲ್ಲಿಗೆ ಹೆರಿಗೆಗೆ ಬಂದು ಹೋಗಿದ್ದಾರೆ. ರವಿಯ ಹಿಂದೆಯೇ ಯಾವಾಗಲೂ ಸುತ್ತಿಕೊಂಡಿದ್ದ ಅವನ ಪ್ರೀತಿಯ ತಂಗಿ ಸುಶೀಲ, ಲಂಗದ ಹುಡುಗಿಯ ವಯಸ್ಸನ್ನು ದಾಟಿ, ಈಗ ಸೀರೆಯುಟ್ಟು ದೊಡ್ಡವಳಾಗಿ ಮದುವೆಗೆ ಸಿದ್ಧವಾಗಿದ್ದಾಳೆ.

ಎರಡು ತಿಂಗಳ ಹಿಂದೆ ಸಿಂಗಾರಂ ಪಿಳ್ಳೈಗೆ ಅರವತ್ತನೆಯ ಹುಟ್ಟುಹಬ್ಬ ನಡೆದಿದೆ. ಇಷ್ಟು ದಿನಗಳೂ ಏನೂ ಮಾತಾಡದಿದ್ದ ಅಲಮು ಆಚ್ಚಿ, ಆಹ್ವಾನ ಪತ್ರಿಕೆಗಳಿಗೆ ಸ್ಟಾಂಪನ್ನು ಹಚ್ಚುತ್ತಿದ್ದ ಪತಿಯ ಬಳಿ ನಿಂತು "ಅವನಿಗೆ.... ರವಿಗೆ.... ಕಾಗದ ಹಾಕಿದ್ದೀರಾ?" ಎಂದಳು.

ಸಿಂಗಾರಂ ಅವಳನ್ನು ದಿಟ್ಟಿಸಿ ನೋಡಿದರು. ಆ ನೋಟದಿಂದ ಆಕೆ ಇಲ್ಲ ಎಂದು ಅರ್ಥಮಾಡಿಕೊಂಡಳು. ತಮ್ಮ ನೋಟಕ್ಕೆ ಹೆದರಿ ಅಲಮು ಅಲ್ಲಿ ನಿಲ್ಲದೆ ಹೊರಟು ಹೋದಾಗ ಸಿಂಗಾರಂ ಪಿಳ್ಳೈಗೆ ಅರ್ಥವಾಯಿತು. ಹೌದು, ಈಕೆಯೂ ರವಿಯ ಪಕ್ಷವನ್ನೇ ವಹಿಸಿದ್ದಾಳೆ ಎಂದು, ಆದರೂ ಅವರು ಆತನ ಬಗ್ಗೆ ಒಂದು ನಿರ್ಧಾರಕ್ಕೆ ಬಂದಿದ್ದುದರಿಂದ, ರವಿಗೆ ಆಹ್ವಾನಪತ್ರಿಕೆಯನ್ನಾಗಲಿ ಅಥವಾ ಸುದ್ದಿಯನ್ನಾಗಲಿ ಕಳಿಸು ವುದಿಲ್ಲ ಎನ್ನುವ ದೃಢ ನಿಲವನ್ನು ತಾಳಿದರು.

ಅರವತ್ತನೆಯ ಹುಟ್ಟುಹಬ್ಬದ ಸಮಾರಂಭವು ಮುಗಿಯಿತು, ಸಿಂಗಾರಂ ಪಿಳ್ಳೈ ಯುವರಿಗೆ. ಅಲಮು ಉಲ್ಲಾಸದಿಂದಲೆ ಇದ್ದಳು. ರವಿ ಇಲ್ಲದ ಕೊರತೆಯನ್ನು ಯಾರೋ ಒಂದು ಸಂದರ್ಭದಲ್ಲಿ ಪ್ರಸ್ತಾಪಮಾಡುವಾಗ ಮಾತ್ರ ಅವನ ನೆನಪು ಬಂದದ್ದು. ಹೌದು, ಅಲಮು ಆಚ್ಚಿಯ ಬಗ್ಗೆ ಸಿಂಗಾರಂ ಪಿಳ್ಳೈ ಹೀಗೆಯೇ ಭಾವಿಸಿ ದರು:

ಈ ಸ್ಥಿತಿಯಲ್ಲಿದ್ದ ಅಲಮು ಆಚ್ಚಿ ಇನ್ನೂ ಐವತ್ತರ ಮನೆಗೆ ಪ್ರವೇಶಿಸದೆ ಇರುವಾಗ ಹಠಾತ್ತನೆ ಹೇಗೆ ಆತ್ಮಹತ್ಯೆ ಮಾಡಿಕೊಳ್ಳಲು ಮನಸ್ಸು ಮಾಡಿದಳೋ? ಆಕೆಗೆ ರವಿಯನ್ನು ಬಿಟ್ಟಿರುವುದರ ಚಿಂತೆಯೇ? ಕಾಮಾಕ್ಷಿ ವಿಧವೆಯಾಗಿ ಮನೆಯಲ್ಲಿ ಬಂದು ಕುಳಿತ ದುಃಖವೋ? ಹಿರಿಯ ಮಗನಿಗೆ ಮಕ್ಕಳಿಲ್ಲ ಎನ್ನುವ ಬೇಜಾರೋ? ಇವೆಲ್ಲವೂ ಸೇರಿದ್ದರ ಪರಿಣಾಮವೋ?

ಏನಿದ್ದರೂ ಹಠಾತ್ತನೆ ಆಕೆ ಈ ನಿರ್ಧಾರವನ್ನು ಕೈಗೊಳ್ಳಲು ಕಾರಣ? ಅಲಮು ಆಚ್ಚಿ ಆತ್ಮಹತ್ಯೆ ಮಾಡಿಕೊಳ್ಳಲು ಯಾಕೆ ಮುಂದಾದಳು?

ಸಿಂಗಾರಂ ಪಿಳ್ಳೈಗೂ ಮನೆಯಲ್ಲಿ ಇತರರಿಗೂ ಈ ಕಾರಣ ಏನೆಂದು ತಿಳಿಯಿತು. ಸದ್ಯ ಒಡನೆಯೇ ಅವಳಿಗೆ ಔಷಧ ಕೊಟ್ಟು ಗುಣಪಡಿಸಿದ್ದು ಆಗಿದೆ.

"ಅತ್ತೆ-ಸೊಸೆ ಜಗಳ ಏನಾದರೂ ಉಂಟೊ?" ಎಂದು ವೈದ್ಯರು ಕೇಳಿದರು.

"ಅವಳು ಬಾಯಿಬಿಟ್ಟು ಮಾತಾಡಿದರಲ್ಲವೆ ಜಗಳ ಕದನ ಎಲ್ಲ. ಇದು ಅಂಥ ಮನೆಯಲ್ಲ" ಎಂದರು ಸಿಂಗಾರಂ ಪಿಳ್ಳೈ.

"ಹಾಗಾದರೆ ಬೇರೆ ಕಾರಣ ಇರಲಾರದು. ನಿಮ್ಮ ಎರಡನೆಯ ಮಗನ ದುಃಖವೆ ಅವರಿಗೆ ಅತಿಯಾಗಿ ಇರಬೇಕು, ಯಾವುದಕ್ಕೂ ಮಕ್ಕಳಿಗೆ ಕಾಗದ ಹಾಕಿ ಕರೆಸಿಕೊಂಡರೆ ತಾಯಿಗೆ ಸಂತೋಷವಾಗಿರುತ್ತದೆ" ಎಂದು ಹಳ್ಳಿಯ ವೈದ್ಯರು ಹೇಳಿಹೋದರು.

ಸಿಂಗಾರಂ ಪಿಳ್ಳೈ ತಮ್ಮ ಪತ್ನಿಯ ಮೌನಕ್ಕೆ ಎಂಥೆಂಥದೋ ಕಲ್ಪನೆಗಳನ್ನು ಕಲ್ಪಿಸಿಕೊಳ್ಳುತ್ತ, ಅವಳ ಮನಸ್ಸನ್ನು ಅರಿತುಕೊಳ್ಳಲು ಸಾಧ್ಯವಾಗಲಿಲ್ಲವಲ್ಲ ಎಂದು ವ್ಯಥೆಪಟ್ಟರು. 'ತಮ್ಮ ಬಂಧ ಕಡಿದುಹೋಯಿತು' ಎಂದು ರವಿಗೆ ಆಕೆ ಹೇಳಿದ ಹಾಗೆ ಹಿಂದೆ ಕಾಗದ ಬರೆದಿದ್ದರು. ಈವಾಗ ಅವರ ಮನೆಯಲ್ಲಿ ಹೆಣ್ಣು ಮಕ್ಕಳೂ ಮೊಮ್ಮಕ್ಕಳೂ ತುಂಬಿದ ತುಂಬು ಸಂಸಾರ.

ಪ್ರಜ್ಞೆ ಬರುತ್ತಲೇ ಅಲಮು ಆಚ್ಚಿ ಓ ಎಂದು ಅತ್ತಳು. "ಇದೇನು? ಎಲ್ಲರನ್ನೂ ಕರೆದುಕೊಂಡು ಬಂದು ನನ್ನ ಮಾನ ಕಳೆಯುತ್ತಿದ್ದೀರಿ ! ಅಯ್ಯೋ. . . . ನನ್ನ ಜನ್ಮವೇ" ಎಂದು ಆಕೆ ಪ್ರಲಾಪಿಸಿದಳು. ಸಿಂಗಾರಂ ಪಿಳ್ಳೈ ಹೇಳಿದ ಸಮಾಧಾನ ಯಾವುದನ್ನೂ ಲಕ್ಷ್ಯಕ್ಕೇ ತಂದುಕೊಳ್ಳದೆ ಅವರನ್ನು ಶಪಿಸುವ ಹಾಗೆ ತನ್ನನ್ನು ತಾನೇ ನಿಂದಿಸಿಕೊಂಡಳು.

ಈವಾಗ ರವಿ ಬಂದಿದ್ದಾನೆ. ಅವನಿಗೆ ಅವರು ಕಾಗದ ಹಾಕಿರುವುದು, ಅಲಮು ಆಚ್ಚಿಗೆ ತಿಳಿಯದು. ಈಗ ಅವನ ಆಗಮನದಿಂದ ಪತ್ನಿಗೆ ಎಷ್ಟೋ ಸಮಾಧಾನ ವಾಗುತ್ತದೆ. ಎನ್ನುವುದು ಸಿಂಗಾರಂನ ಭಾವನೆ.

ರವಿ ಮನೆಗೆ ಪ್ರವೇಶಿಸಿದಾಗ, ಅವನನ್ನು ಗುರುತು ಕಂಡುಹಿಡಿಯಲಾರದೆ, ದೊಡ್ಡ ಹುಡುಗರೂ ಅವನನ್ನು ನೋಡಿಯೇ ಇಲ್ಲದ ಸಣ್ಣ ಸಣ್ಣ ಬಾಲಕರೂ "ಅಮ್ಮಾ, ಯಾರೋ ಬಂದಿದ್ದಾರೆ" ಎಂದು ಕೂಗನ್ನು ಹಾಕುತ್ತ ಮನೆಯೊಳಗೆ ಓಡಿದುವು.

ತನ್ನನ್ನು ಕಂಡು ಓಡಿಹೋಗುತ್ತಿರುವ ಆ ಬಾಲಕರನ್ನು ನೋಡಿ ರವಿ ಮುಗುಳುನಗೆ ನಕ್ಕ. ಈಗ, ಎರಡು ದಿನಗಳಿಂದಲೂ ತಾಯಿಯ ಹಾಸಿಗೆಯ ಬಳಿ ಕೊಟಡಿಯಲ್ಲಿಯೇ ಕುಳಿತಿದ್ದ ಸುಶೀಲ ತಲೆಯನ್ನು ಮೆಲ್ಲಗೆ ಹೊರಗಿಕ್ಕಿ ನೋಡಿ "ರವಿಯಣ್ಣಾ. . . . . ." ಎಂದು ಕೂಗನ್ನು ಹಾಕುತ್ತ ತುಟಿಗಳು ಕಂಪಿಸುತ್ತಿರಲು ಹೊರಗೆ ಓಡಿಬಂದಳು. ಅವನ ಕೈಯಲ್ಲಿದ್ದ ಸೂಟ್‌ಕೇಸನ್ನು ತೆಗೆದುಕೊಂಡಳು. "ಬಾ, ಅಣ್ಣಾ" ಎಂದಳು. ಅವಳ ತುಟಿಗಳು ನಡುಗಿದುದಕ್ಕೆ ನಾಲ್ಕಾರು ವರ್ಷಗಳು ಅವನನ್ನು ಕಾಣದೆ, ಈಗ ನೋಡು ತ್ತಿರುವ ಒಂದು ಸಂತೋಷದ ಪರಿಣಾಮವೇ ಆಗಿರಬೇಕು.

"ಸುಶೀ, ಅಬ್ಬಬ್ಬಾ, ನಿನ್ನ ಗುರುತೇ ಸಿಕ್ಕಲಿಲ್ಲ. ಅಮ್ಮ ಹೇಗಿದ್ದಾಳೆ?" ಎಂದು ಆತ ಕೇಳುತ್ತಲೇ, ಅಣ್ಣನನ್ನು ಹಿಂಬಾಲಿಸಿದ ಸುಶೀಲ "ಈಗ ತಾನೇ ನಿದ್ದೆ ಮಾಡ್ತಾ ಇದ್ದಾಳೆ, ಎಬ್ಬಿಸಬೇಡ. ಎಚ್ಚರ ಆದ್ರೆ ಸುಮ್ಮನೆ ಏನೋ ಮಾತಾಡ್ತಾಳೆ...... ಒಳಗೆ ಬಾ. ನಮ್ಮ ತೋಟಕ್ಕೆ ಪಂಪು ಸೆಟ್ಟು ಹಾಕಿದೆ. ಜಿಲ್ ಅಂತ ಆದರಲ್ಲಿ ಸ್ನಾನ ಮಾಡಿದರೆ ರೈಲಲ್ಲಿ ಬಂದ ಆಯಾಸ ಎಲ್ಲ ಹೊರಟುಹೋಗುತ್ತೆ" ಎನ್ನುತ್ತ ಅವನ ಮುಂದೆ ನಡೆದಳು.

ಒಂದು ಕ್ಷಣ ರವಿ ತಾಯಿ ನಿದ್ರಿಸುತ್ತಿದ್ದ ಆ ಕೊಟಡಿಯ ಮುಂದೆ ನಿಂತ. ಅವನು ಹಿತ್ತಿಲ ಕಡೆ ಹೋಗುವಾಗ ಸುಂದರಂನ ಹೆಂಡತಿ ರಾಜಂ ಮುಗುಳ್ನಗುತ್ತ "ಏ..ಪ್ಪ, ಈಗಲಾದರೂ ದಾರಿ ಗೊತ್ತಾಯಿತಲ್ಲ" ಎಂದು ಸ್ವಾಗತಿಸಿದಳು.

ತನ್ನ ಅತ್ತಿಗೆ ಮೊದಲಿಗಿಂತ ತುಂಬ ದಪ್ಪವಾಗಿ ಬೆಳೆದಿರುವುದನ್ನು ಗಮನಿಸಿದ ರವಿ, 'ಮಕ್ಕಳು ಹೆಚ್ಚಾದುದರಿಂದ ಹೀಗೆ ಶರೀರ ದಪ್ಪವಾಯಿತೋ?' ಎಂದು ಭಾವಿಸುತ್ತ "ಏನು ಅತ್ತಿಗೆ, ಚೆನ್ನಾಗಿದ್ದೀರಾ? ದೇಹಕ್ಕೆ ಏನೂ ತೊಂದರೆಯಿಲ್ಲವಲ್ಲ" ಎಂದು ನಗೆಯಾಡುತ್ತ ವಿಚಾರಿಸಿದ. "ನನಗೇನಪ್ಪ ಕಡಮೆಯಾಗಿದೆ?" ಎಂದಳು ಅವನ ಅತ್ತಿಗೆ.

"ಡಾಕ್ಟರಾದುದರಿಂದ ನಾನು ಹಾಗೆ ಕೇಳುವುದು ಸ್ವಾಭಾವಿಕ" ಎಂದ ರವಿ.

"ಹೌದು, ಒಂದು ಸಲ ಪಟ್ಟಣಕ್ಕೆ ಹೋಗಿ ನಿನ್ನ ಷಾಪಿನಲ್ಲಿ ತೋರಿಸಬೇಕು ಹಾಗಂತ ನಿಮ್ಮಣ್ಣ ಹೇಳಿಕೊಂಡೇ ಇದ್ದಾರೆ.... ಹುಂ...."

"ನಾನು ಈಗ ಹೋಗುವಾಗ ನನ್ನ ಕೂಡ ಬನ್ನಿ ಅತ್ತಿಗೆ" ಎಂದು ಆತ ಹೇಳುತ್ತಿರುವಷ್ಟರಲ್ಲಿ ಮಕ್ಕಳ ಪಡೆಯೊಂದಿಗೆ ಹಿತ್ತಿಲಿಂದ ಬಂದ ಇಂದಿರಾ ಮತ್ತು ಪಂಕಜ "ರವಿ ಅಣ್ಣನೋ? ಯಾರೋ ಬಂದಿದ್ದಾರೇಂತ ಮಕ್ಕಳು ಹೇಳಿದುವು. ನಿನ್ನ ಮಾವ ಕಣೋ ಅವರು" ಎಂದು ಪಂಕಜ ತನ್ನ ದೊಡ್ಡ ಹುಡುಗನನ್ನು ರವಿಯ ಮುಂದೆ ತಳ್ಳಿದಳು. ಆತ ಭಯದಿಂದ ಕೊಸರಿಕೊಂಡು ತಾಯ ಹಿಂದೆಯೇ ನಿಂತ.

"ಯಾಕಣ್ಣ, ಅತ್ತಿಗೆಯನ್ನು ಕರೆದುಕೊಂಡು ಬರಲಿಲ್ಲ?" ಎಂದು ಹಾಸ್ಯವಾಗಿ ಕೇಳಿದಳು ಇಂದಿರಾ.

ಇಂದಿರಾ ಕೇಳಿದ ಪ್ರಶ್ನೆ ಸರಿಯಲ್ಲವೆಂದು ನಾಲಗೆ ಕಚ್ಚಿಕೊಂಡಳು ಸುಶೀಲ.

"ಕರೆದುಕೊಂಡು ಬರಬಹುದು. ಆದರೆ ಅಪ್ಪ ಹೊಡೆದು ಕಳಿಸಿವರೆ!" ಎಂದು ರವಿ ನಗೆಯಾಡುತ್ತ ಉತ್ತರ ಕೊಟ್ಟ.

ಆಗ ಅಡಿಗೆ ಮನೆಯಿಂದ ಒಂದು ಹೊಸ ಮುಖ ಹೊರಗೆ ತಲೆಯಿಕ್ಕಲು, "ಸರಿ, ಸರಿ, ಹೊಸಬರನ್ನು ನನಗೆ ಪರಿಚಯ ಮಾಡಿಕೊಡಲಿಲ್ಲ" ಎಂದ.

ಆಗ ಮುತ್ತುವಿನ ಹೆಂಡತಿ ಅವನಿಗೆ ಕಾಫಿ ತಂದುಕೊಟ್ಟಳು.

"ಇವಳು ಮೀನಾ. ಮುತ್ತುವಿನ ಹೆಂಡತಿ" ಎಂದು ರವಿಗೆ ಪರಿಚಯ ಮಾಡಿ ಕೊಟ್ಟಳು ರಾಜಂ. ಅಡಿಗೆ ಮನೆಯ ಕಿಟಕಿಗೆ ಸೇರಿದ ಹಾಗೆ ಹೊರಗೆ ಬಂದು ನಿಂತ ಮತ್ತೊಂದು ಹೆಣ್ಣನ್ನು ತೋರಿಸುತ್ತ "ಇವಳು ನಳಿನಿ, ಸೋಮುವಿನ ಹೆಂಡತಿ" ಎಂದಳು.

ಮೀನಳ ಕೈಯಲ್ಲಿದ್ದ ಕಾಫಿಯನ್ನು ತೆಗೆದುಕೊಂಡ ರವಿ ಅವಳನ್ನು ನೋಡುತ್ತ, ಆಕೆ ಗರ್ಭಿಣಿ ಎನ್ನುವುದನ್ನು ತಿಳಿದು, "ಸೀಮಂತ ಯಾವಾಗ?" ಎಂದು ನಗೆಯಾಡುತ್ತ ಕೇಳಿದ.

"ಯಾಕೆ? ಪರಂಗಿಯವರು ಒಂದೊಂದು ಮಗುವಿಗೂ ಸೀಮಂತ ಮಾಡುತ್ತಾರೇನು? ಇದು ಎರಡನೇ ಮಗು....ಕಣ್ಣನ್ ಎಲ್ಲಿ?" ಎಂದು ಹೇಳುತ್ತ ಪಂಕಜ ಹಿಂದಕ್ಕೆ ತಿರುಗಿದಾಗ, ಬಾಯಲ್ಲಿ ಮೆತ್ತಿಕೊಂಡಿದ್ದ ಅನ್ನದ ಅಗುಳನ್ನು ತೊಡೆದು ಹಾಕುತ್ತ ಒಂದು ಮಗುವನ್ನು ಎತ್ತಿಕೊಂಡು ಹೊರಬಂದಳು ಮೀನಾ.

ಕಾಫಿ ಕುಡಿದಾದ ಮೇಲೆ ಷರ್ಟನ್ನು ಕಳಚಿ ತಂತಿಯ ಮೇಲೆ ಹಾಕಿದ ರವಿ ಗೋಡೆಗೆ ಒರಗಿ ಕುಳಿತ. ಅವನ ಸುತ್ತಮುತ್ತ ಎಲ್ಲರೂ ನೆರೆದರು.

"ಅಂದ ಹಾಗೆ, ಅಕ್ಕ, ಅಣ್ಣ, ಮುತ್ತು, ಸೋಮು ಎಲ್ಲ ಎಲ್ಲಿ? ಭಾವಂದಿರು ಒಬ್ಬರನ್ನೂ ಕಾಣಲಿಲ್ಲವಲ್ಲ!" ಎಂದು ಆತ ಕೇಳುತ್ತ ಇರುವಾಗ, ಅವನ ವಿಧವೆ ಅಕ್ಕ ಕಾಮಾಕ್ಷಿ ಅಲ್ಲಿಗೆ ಪ್ರವೇಶಿಸಿದಳು.

"ಲೋ....ಲೋ....ರವೀ, ಬಂದೆಯೋ? ನಮ್ಮನ್ನೆಲ್ಲ ನೀನು ಮರೆತೇ ಬಿಟ್ಟೆ ಎಂದುಕೊಂಡಿದ್ದೆ" ಎನ್ನುತ್ತ ಆಕೆ ಅವನ ಸನಿಹದಲ್ಲಿ ಬಂದು ಕುಳಿತಳು. ತಮ್ಮನ ಯೋಗಕ್ಷೇಮ ವಿಚಾರಿಸಿದಳು. ಅವಳ ಕೂಡ ಮಾತಾಡುವಾಗ ಚಿಂತೆಯನ್ನು ಹತ್ತಿಕ್ಕಿ ಕೊಂಡು ರವಿ ಬಲವಂತದ ನಗೆ ತಂದುಕೊಂಡ.

ಒಂದು ಗಂಟೆಗಿಂತಲೂ ಅಧಿಕವಾಗಿ ಅವರು ತಮ್ಮ ತಮ್ಮ ಕುಂದುಕೊರತೆಗಳನ್ನು ಪರಸ್ಪರ ವಿಚಾರಿಸಿಕೊಂಡರು. ರವಿ ಎಲ್ಲರಿಗೂ ಸಮರ್ಪಕವಾಗಿಯೇ ಉತ್ತರ ನೀಡಿದ. ಅವನು ಜಾಸ್ತಿ ಓದಿದವನು ಎಂದು ಯಾವಾಗಲೂ ಅವನ ಬಗ್ಗೆ ಮನೆಯವರಿಗೆ ಮಮತೆ, ಗೌರವ ಜಾಸ್ತಿ. ಅವನ ಅಣ್ಣನೂ ತಂದೆಯೂ ಸಹ ಅವನ ಮಾತಿಗೆ ಬೆಲೆ ಕೊಡುತ್ತಾರೆ. ಆ ಪರಂಗಿಯವಳನ್ನು ಈತ ಕಣ್ಣಿಗೆ ಮರೆಯಾಗಿ ಹೋಗಿ ಮದುವೆ ಮಾಡಿಕೊಂಡಿದ್ದರಿಂದ ರವಿಯ ಬಗ್ಗೆ ಅವರಿಗೆ ವ್ಯಥೆಯಿದ್ದರೂ, ಮನೆಯ ಹೆಂಗಸರ ದೃಷ್ಟಿಯಲ್ಲಿ ಅದು ಅಂಥ ದೊಡ್ಡ ಅಪರಾಧವೇನೂ ಅಲ್ಲ. ಏನೋ ಮನಸ್ಸಿಗೆ ಹಿಡಿದವಳನ್ನು ಒಪ್ಪಿಕೊಂಡ ಎನ್ನುವ 'ತತ್ತ್ವ'ವನ್ನೇ ಅವರೆಲ್ಲ ಸಾಮಾನ್ಯವಾಗಿ ಹೊಂದಿದ್ದರು.

"ಹೌದು. ನಾನು ತಿಳಿಯದೇ ಕೇಳ್ತೇನೆ. ನಮ್ಮ ಹುಡುಗಿಯರ ಹಾಗೆ ಗಂಭೀರ ವಾಗಿ ನಡೆದುಕೊಳ್ಳೋಕೆ ಆ ಬಿಳೀ ತೊಗಲಿನವಳಿಗೆ ಬರುತ್ತೊ?" ಎಂದು ಕಾಮಾಕ್ಷಿ

ಕೇಳಲು, ಉಳಿದವರಿಗೂ ಆ ಸಂದೇಹ ಇದ್ದು. ಆದರೆ ಈಗ ಕಾಮಾಕ್ಷಿ ಕೇಳಿದ ರೀತಿಯನ್ನು ನೋಡಿ ಅವರೆಲ್ಲರೂ ನಕ್ಕುಬಿಟ್ಟರು.

"ಯಾಕೆ ನಗುತ್ತೀರಿ? ಅಕ್ಕ ಕೇಳಿದ್ದರಲ್ಲಿ ತಪ್ಪೇನೂ ಕಾಣಲಿಲ್ಲ. ನಿಜ ಹೇಳುವುದಾದರೆ ಆಕೆಯ ಬಣ್ಣದಲ್ಲಿಯೂ ಭಾಷೆಯಲ್ಲಿಯೂ ವ್ಯತ್ಯಾಸ ಇದೆ ಅಷ್ಟೆ. ಗುಣದಲ್ಲಿ ನಮ್ಮ ಎಲ್ಲ ಹೆಂಗಸರ ಹಾಗೆಯೇ. ಇನ್ನೂ ಸ್ವಲ್ಪ ವಿಸ್ತರಿಸಿ ಹೇಳೋದಾದರೆ ನಮ್ಮವರು ಮಾತೆತ್ತಿದರೆ ಸಾಕು ಮೂಗು ಒರೆಸುತ್ತ ಅಳೋದು, ಅವರಿವರಲ್ಲಿ ತಪ್ಪು ಕಂಡು ಹಿಡಿಯೋದು ಇಂಥ ಕೆಟ್ಟ ಚಾಳಿಗಳೆಲ್ಲ ಅವಳಲ್ಲಿ ಇಲ್ಲ. ಬೇಕಾದರೆ ನೀನು ಬಂದು ನಮ್ಮ ಮನೆಯಲ್ಲಿ ನಾಲ್ಕು ದಿನ ಇದ್ದು ನೋಡಕ್ಕ. . . . "

ತನ್ನ ಹೆಂಡತಿಯನ್ನು ರವಿ ಹೀಗೆ ಹೊಗಳುತ್ತ ಇರುವುದು ಅಲ್ಲಿನ ಹೆಂಗಸರಿಗೆ ಆಶ್ಚರ್ಯವಾಗಿತ್ತು.

"ಮಕ್ಕಳು ಗಿಕ್ಕಳು. . . . " ಎಂದು ಕಾಮಾಕ್ಷಿ ವಿಚಾರಿಸುವುದರೊಳಗೆ "ಇಲ್ಲ" ಎಂದು ರವಿ ಉತ್ತರ ಹೇಳಿದ.

"ಏನೋ. . . . "

"ಇಷ್ಟರಲ್ಲೇ ಬೇಡಾಂತ ಇರಬಹುದು. . . . " ಎಂದು ತಮ್ಮಲ್ಲಿಯೇ ಹೇಳಿಕೊಳ್ಳುತ್ತ ಆ ಹುಡುಗಿಯರು ನಗೆಯಾಡಿದರು.

ಕಾಮಾಕ್ಷಿ ಮತ್ತೆ ಹೇಳಿದಳು:

"ಅಮ್ಮ ಪ್ರಾಣ ಬಿಡೋಕೆ ಅಂತ ಪ್ರಯತ್ನಿಸಿದ್ದರಿಂದ ನಿನ್ನನ್ನು ನಾವು ನೋಡೋಕೆ ಸಾಧ್ಯವಾಯ್ತು. ಇಲ್ಲದಿದ್ದರೆ ಅಪ್ಪ ನಿನಗೆ ಕಾಗದ ಬರೆಯುತ್ತಿರಲಿಲ್ಲ. ನಾವು ನಿನ್ನನ್ನು ನೋಡುವುದೂ ಸಾಧ್ಯವಾಗುತ್ತಿರಲಿಲ್ಲ."

"ಹೌದು. ಎಂದ ಹಾಗೆ ಅಮ್ಮ ಯಾಕೆ ಹಾಗೆ ಮಾಡಿದಳು? ಅವಳಿಗೆ ಏನು ಕೊರತೆಯಾಗಿತ್ತು?" ಎಂದು ಕೇಳಿದ ರವಿ.

"ಕೊರತೆ? ನಿನ್ನದೂ ನನ್ನದೂ ಅವಳಿಗೆ ಸಾಕಲ್ಲವೋ? ಅಮ್ಮನ ಸ್ವಭಾವ ನಿನಗೆ ತಿಳಿದೇ ಇದೆಯಲ್ಲ. ಮನಸ್ಸಿನಲ್ಲಿ ಎಲ್ಲ ತುಂಬಿಟ್ಟುಕೊಂಡು ಮೂಗಿಯ ಹಾಗೆ ಮಾತಾಡದೆ ಸುಮ್ಮನೆ ಇರ್ತಾಳೆ. ಐದು ವರುಷಗಳಿಂದ ನಿನ್ನನ್ನು ಕಾಣದೆ ಅಪ್ಪನ ಹುಟ್ಟು ಹಬ್ಬಕ್ಕಾದರೂ ನೀನು ಬರ್ತಿಯ ಎಂದು ಆಕೆ ಭಾವಿಸಿಕೊಂಡಿದ್ದಳು. ಆ ನಂಬಿಕೆಯೂ ಹೊರಟುಹೋಯಿತು. ಹೀಗೇನಾದರೂ ಎಡವಟ್ಟು ಮಾಡಿದರೆ ಅಪ್ಪನ ಮನಸ್ಸು ಕರಗುತ್ತದೆ ಎಂದು ಆಕೆ ಭಾವಿಸಿದಳೋ ಏನೋ. . . . . . ಅಪ್ಪನ ಮೇಲೆ ಅಮ್ಮನಿಗೆ ಬರಬರುತ್ತ ಮನಸ್ಸು ಪೂರಾ ಕೆಟ್ಟು ಹೋಗ್ತಾ ಇದೆ. ಈಗಲೂ ಅವರನ್ನು ನೋಡಿದರೆ ಅವಳಿಗೆ ದುಃಖವೂ ಬಿಕ್ಕಳಿಕೆಯೂ ಉಂಟಾಗುತ್ತದೆ. . . . ಪಾಪ, ಅಪ್ಪ ಎಷ್ಟು ಬಿಗುಮಾನದಿಂದ ಇದ್ದರೂ ಅಮ್ಮನ ಪ್ರಾಣಕ್ಕೆ ಆಪತ್ತು ಎಂದಾಗ ತುಂಬಾ

ಗಾಬರಿಪಟ್ಟರು. ಈಗ ಅವರು ಹೊರ ದಿಣ್ಣೆಯನ್ನು ಬಿಟ್ಟು ಒಳಗೆ ಬರುವುದೇ ಇಲ್ಲ. ಒಳಗೆ ಬರುವುದಕ್ಕೆ ಹೆದರುತ್ತಾರೆ. ಏನಿದ್ದರೂ ಅಮ್ಮ ಹೀಗೆ ಮಾಡಬಾರದಿತ್ತು. ನಾಲ್ಕು ಜನ ನಮ್ಮ ಬಗ್ಗೆ ಏನು ಮಾತಾಡಿಕೊಳ್ಳುತ್ತಾರೆ? ಸೊಸೇರ ಕಾಟ ತಡೆಯ ಲಾರದೆ ಹೀಗೆ ಮಾಡಿಕೊಂಡಳು ಎನ್ನಬಹುದಲ್ಲ. ಸದ್ಯ ಅಮ್ಮನ ಪ್ರಾಣಕ್ಕೆ ಏನೂ ಅಪಾಯ ಆಗದೆ ಉಳಿದುಕೊಂಡದ್ದು ನಮ್ಮ ಪುಣ್ಯ."

ಕಾಮಾಕ್ಷಿ ಹೀಗೆ ಉದ್ದಕ್ಕೆ ಹೇಳಿಕೊಂಡು ಬಂದಾಗ, 'ಇದಕ್ಕೆಲ್ಲ ನಾನು ಹೊಣೆಯೆ?' ಎಂದು ರವಿ ತನ್ನಷ್ಟಕ್ಕೆ ಹೇಳಿಕೊಂಡ.

"ಸರಿ, ಸರಿ, ಆಯಿತು. ಬಿಸಿಲಿಗೆ ಮುಂಚೆ ನೀವು ಹೋಗಿ ಸ್ನಾನ ಮಾಡಿಬನ್ನಿ" ಎಂದಳು ಅತ್ತಿಗೆ.

ಸುಶೀಲ ತೆಗೆದುಕೊಟ್ಟ ಸಾಬೂನು ಪೆಟ್ಟಿಗೆಯನ್ನೂ, ಟವಲನ್ನೂ ಹಿಡಿದು ಹೊರಟ ರವಿ. ಈ ಐದು ವರುಷಗಳಲ್ಲಿ ಅಲ್ಲಿ ಆಗಿರುವ ಬದಲಾವಣೆಯನ್ನು ಸೂಕ್ಷ್ಮವಾಗಿ ಗಮನಿಸಿದ. ಅವನ ಮನಸ್ಸಿಗೆ ತುಂಬಾ ಉಲ್ಲಾಸವನ್ನು ತಂದದ್ದು, ಆ ಹಲಸಿನ ಮರ.

ಐದು ವರುಷಗಳಿಗೆ ಮೊದಲು ಬರಿಯ ಮರವಾಗಿದ್ದ ಆ ಹಲಸು, ಈಗ ಕೊಂಬೆ ಕೊಂಬೆಗಳಲ್ಲಿ ಕಾಯಿಗಳನ್ನು ತೂಗಬಿಟ್ಟಿದೆ. ಕೊಂಬೆಗಳಿಗಿಂತಲೂ ಕಾಯೇ ಅಧಿಕವೇನೋ ಎನ್ನುವ ಹಾಗೆ. ರವಿ ಅದರ ಕಂಪನ್ನು ಈಗ ಆಘ್ರಾಣಿಸಿದ.

"ಹೋಗುವಾಗ ಒಂದೆರಡನ್ನು ತೆಗೆದುಕೊಂಡು ಹೋಗಬೇಕು. ಅವಳಿಗೆ ಹಲಸಿನ ಹಣ್ಣು ಎಂದರೆ ತುಂಬಾ ಇಷ್ಟ' ಎಂದು ತನ್ನೊಳಗೇ ಹೇಳಿಕೊಂಡ ರವಿ.

ತನ್ನ ಸೋದರರಿಗಾಗಲೀ ಇಲ್ಲವೆ ಭಾವಂದಿರಿಗಾಗಲೀ ಯಾರಿಗೂ ತನ್ನ ಬಗ್ಗೆ ಅಸಮಾಧಾನವಿಲ್ಲ ಎನ್ನುವುದನ್ನು ಊಟಮಾಡುತ್ತ ಕುಳಿತ್ತಿದ್ದಾಗ ರವಿ ತಿಳಿದುಕೊಂಡ. ಆದರೆ ತನ್ನೊಂದಿಗೆ ಕುಳಿತು ಊಟ ಮಾಡದಿದ್ದ ತಂದೆಯ ಹಟಮಾರಿತನವನ್ನು ಆಗಲೇ ಅವನು ಕಂಡುಹಿಡಿದ.

ಮಧ್ಯಾಹ್ನದ ಊಟದ ನಂತರ ಎಲ್ಲರೂ ಮಾತಿಗೆ ಕುಳಿತರು. ಇಬ್ಬರು ಅಳಿಯಂದಿ ರೊಂದಿಗೆ ಸಿಂಗಾರಂ ಪಿಳ್ಳೈ ಹೊರಪಡಸಾಲೆಯಲ್ಲಿ ಕುಳಿತು ಏನೇನೋ ಮಾತಾಡುತ್ತ ಕುಳಿತಿದ್ದರು.

"ಆ ಪಾಪಿ ಮನುಷ್ಯ ನಿನ್ನನ್ನೂ ಬರಮಾಡಿಕೊಂಡರೋ? ಅಯ್ಯೋ ದೈವವೇ, ನನ್ನನ್ನು ಯಾಕೆ ನೀವು ಅಣುಅಣುವಾಗಿ ಕೊಲ್ಲುತ್ತಿದ್ದೀರಿ?" ಎಂದು ಅಳುವಿನ ಕೂಡ ಗಟ್ಟಿಯಾಗಿ ಮಾತು ಕೇಳಿಬರಲು, ಅಲ್ಲಿ ಕುಳಿತಿದ್ದವರೆಲ್ಲ ದಿಗ್ಭ್ರಮೆಗೊಂಡರು. ಸಿಂಗಾರಂ ಪಿಳ್ಳೈ ಒಳಗೆ ಧಾವಿಸಿದರು. ರವಿ ಬಂದರೆ ಅವನನ್ನು ನೋಡಿಯಾದರೂ ಅಲಮು ಆಚ್ಚಿಯ ಸ್ಥಿತಿ ಉತ್ತಮಗೊಳ್ಳುತ್ತದೆಂದು ಭಾವಿಸಿದ್ದ ಅವರಿಗೆ ಈಗ ಈಕೆ

ಆತನನ್ನು ಕಂಡೊಡನೆ ಮತ್ತಷ್ಟು ಸಂಕಟದಿಂದ ಹೊರಳಾಡುತ್ತಿರುವುದನ್ನು ನೋಡಿ ದಿಕ್ಕುತೋಚದಂತಾಯಿತು.

"ಅಮ್ಮಾ, ನಾನು ಎಲ್ಲಿದ್ದರೂ ನಿನ್ನ ಮಗು. ನಿನ್ನ ಪ್ರೀತಿ ನನ್ನ ಮೇಲೆ ಯಾವಾಗಲೂ ಇದ್ದೇ ತೀರುತ್ತದೆ. ಯಾಕಮ್ಮಾ ನೀನು ಇಂಥ ಕೆಲಸವನ್ನು ಮಾಡಿದೆ? ನಾನು ಈಗ ಬಂದದ್ದು ನಿನಗೆ ಹಿಡಿಸಲಿಲ್ಲವೋ ಹೇಗೆ? ನನ್ನನ್ನು ನೋಡಲು ನಿನಗೆ ಇಷ್ಟವಿಲ್ಲವೇ?" ಎಂದು ಆತ ತಾಯಿಯ ಎರಡೂ ಕೈಗಳನ್ನು ಹಿಡಿದು ಗದ್ಗದಕಂಠನಾಗಿ ಹೇಳಿದ.

ಆತನ ಮಾತುಗಳು ಆಕೆಯ ಅಳುವನ್ನೂ ಬಿಕ್ಕಳಿಕೆಯನ್ನೂ ನಿಲ್ಲಿಸಿತು. ರವಿಯನ್ನು ನೋಡುತ್ತ ನೋಡುತ್ತ ಕಣ್ಣುಗಳಲ್ಲಿ ನೀರು ತುಂಬಿದ್ದಂತೆ ಅಲಮು ಅಚ್ಚಿ ಮೌನವಾಗಿ ಕಣ್ಣೀರು ಮಿಡಿದಳು. "ನಿಮ್ಮಲ್ಲಿ ಯಾರ ಮೇಲೆಯೂ ನನಗೆ ದುಃಖವಿಲ್ಲ ಮಗೂ .....ಆದರೆ ನಾನು ಪಾಪಿ......ಪಾಪಿ......" ಎನ್ನುತ್ತ ಆಕೆ ಮೇಲೂ ಬಿಕ್ಕಳಿಸಿದಳು.

ಅವಳು ಬಿಕ್ಕಳಿಸಿ ಮೌನವಾಗುವ ವರೆಗೆ ರವಿ ಅವಳ ಬಳಿಯಲ್ಲಿಯೇ ಕುಳಿತಿದ್ದ. ತಾಯಿಯ ಮನಸ್ಸಿನಲ್ಲಿ ಉಂಟಾಗಿರುವ ತಳಮಳ, ಮಗನ ಬರವಿನಿಂದಾಗಿ ತಣಿಯುತ್ತದೇನೋ ಎಂದು ಸಿಂಗಾರಂ ಪಿಳ್ಳೈ ಮೊದಲುಗೊಂಡು ಎಲ್ಲರೂ ನಿರೀಕ್ಷಿಸುತ್ತ ಕುಳಿತಿದ್ದರು.

"ಅಮ್ಮಾ ಈಗ ನಿನ್ನ ಮಗ ಬಂದಿದ್ದಾನೆ ಎನ್ನುವುದನ್ನು ಮರೆತು ಎಲ್ಲಿ ಡಾಕ್ಟರ್ ಎನ್ನುವ ಭಾವನೆಯೊಂದಿಗೆ ಕೈನೀಡು" ಎಂದು ರವಿ ಹೇಳಿದಾಗ "ಬೇಡವೋ, ಮಗೂ" ಎಂದು ಮತ್ತೆ ಬಿಕ್ಕಳಿಸಿದಳು ಅಲಮು.

"ಹುಂ, ಮನಸ್ಸಿಗೆ ಗಾಸಿಮಾಡಿಕೊಳ್ಳಬೇಡ." ಎನ್ನುತ್ತ ರವಿ ಅವಳ ನಾಡಿಯನ್ನು ಹಿಡಿದು ಪರೀಕ್ಷಿಸಿದ. ಮತ್ತೆ ಅವಳ ಕಣ್ಣುಗಳನ್ನು ಅಗಲಿಸಿ ನೋಡಿದ. ಬಾಗಿಲಲ್ಲಿ ನಿಂತಿದ್ದ ಸುಶೀಲೆಯನ್ನು ಕೈಸನ್ನೆ ಮಾಡಿ ಅತ್ತ ಹೋಗೆಂದು ಹೇಳಿದ. ಕೊಟಡಿಯ ಬಾಗಿಲನ್ನು ಅರೆಮುಚ್ಚಿ ತಾಯಿಯೊಂದಿಗೆ ಏನೋ ಅಂತರಂಗವನ್ನು ವಿಚಾರಿಸಿದ.

ಆ ಕೊಟಡಿಯಿಂದ ಬಿಕ್ಕುವಿಕೆಯೂ ನರಳುವಿಕೆಯೂ ರವಿಯ ಸಮಾಧಾನದ ಮಾತೂ ಹೊರಗೆ ಕೇಳಿಬರುತ್ತಿತ್ತು.

"ರವಿ, ನನ್ನ ಮಾನ ಕಾಪಾಡಪ್ಪಾ. ದೇವರೇ ಈಗ ನಿನ್ನನ್ನು ಇಲ್ಲಿ ಕಳಿಸಿದ್ದಾನೆ."

"ಸುಮ್ಮನಿರಮ್ಮಾ, ಕಂಡಕಂಡ ಹಾಗೆ ಮಾತಾಡಬೇಡ. ಈಗ ಮಾನ ಹೋದದ್ದಾದರೂ ಏನು? ಇದಕ್ಕಾಗಿ ಹೋಗಿ ಜೀವ ಬಿಡುತ್ತಿದ್ದೆಯಲ್ಲ. ಬೇರೆ ದೇಶದಲ್ಲಾದರೆ ಇದು ಎಷ್ಟು ಗೌರವವಾದ ವಿಷಯ ಗೊತ್ತೇ? ನೀನು ಬಹಳ ಪುಣ್ಯಮಾಡಿದವಳು. ಹೊಟ್ಟೆಕಿಚ್ಚಿನಿಂದ ಯಾರಾದರೂ ಅಪಹಾಸ್ಯ ಮಾಡಿದರೆ ಮಾಡಿಕೊಂಡು ಹೋಗಲಿ, ನಿನ್ನ ತಾಯ್ತನ ತುಂಬಾ ಶ್ರೇಷ್ಠವಾದದ್ದು. ಇದಕ್ಕಾಗಿ ನೀನು ಎಂಥ ಪೆಚ್ಚುಕೆಲಸ

ಮಾಡಿದ್ದೀಯಾ?" ಎಂದು ಹೊರಗೆ ಬರಲು, ಸಿಂಗಾರಂ ಪಿಳ್ಳೈ ಆ ಜಾಗವನ್ನು ಬಿಟ್ಟು ತೋಟದ ಕಡೆ ನಡೆದುಬಿಟ್ಟರು.

ಈ ವಿಷಯ ಅಲ್ಲಿ ನೆರೆದಿದ್ದವರಿಗೆಲ್ಲ ತಿಳಿಯಿತೋ ಎಂದು ಶಂಕೆಪಡುತ್ತ ರವಿ "ಒಂದು ಗುಡ್ ನ್ಯೂಸ್. . . .ನಮ್ಮ ಅಮ್ಮ ನಮಗೆ ಒಬ್ಬ ತಮ್ಮನನ್ನೋ ತಂಗಿಯನ್ನೋ ಕೊಡುವವಳಿದ್ದಾಳೆ" ಎಂದು ಹೇಳುತ್ತಲೇ ಅಲ್ಲಿದ್ದ ಎಲ್ಲರಿಗೂ ಒಂದು ಅಸಹ್ಯವಾದ ಮೌನ ವ್ಯಾಪಿಸಿಕೊಂಡು ಬಿಟ್ಟಿತು. ಆ ಕಡೆ ಬೆಂಚಿನ ಮೇಲೆ ಕುಳಿತಿದ್ದ ಇಬ್ಬರೂ ಅಳಿಯಂದಿರೂ ಪರಸ್ಪರ ನೋಡುತ್ತ ನಗೆಯಾಡಿಕೊಂಡರು. ಅವರ ಆ ನಗೆ ಅಲಮು ಆಚ್ಚಿಯ ದೇಹದಲ್ಲಿ ಸೂಜಿಯನ್ನು ಚುಚ್ಚಿದಷ್ಟು ಯಾತನೆಯನ್ನು ತಂದಿತು.

ಅಳಿಯಂದಿರಲ್ಲಿ ಒಬ್ಬ ಹೇಳಿದ:

"ಸರಿ, ಸರಿ, ಮದುವೆಯಾಗಿ ಎರಡು ತಿಂಗಳಾಗಿದೆ. ಇನ್ನು ಸ್ವಲ್ಪ ದಿನಗಳಲ್ಲಿ ಬಳೆತೊಡಿಸುವ ಕಾರ್ಯ ಆಗಬೇಕು."

"ಇದರಲ್ಲಿ ಪರಿಹಾಸ್ಯಕ್ಕೋ ನಗೆಗೋ ಅವಕಾಶವಿಲ್ಲ . . . . ಎಷ್ಟೋ ಕುಟುಂಬಗಳಲ್ಲಿ ತಾಯಿ ಮತ್ತು ಮಗಳ ಪ್ರಸವ ಒಟ್ಟಿಗೇ ನಡೆಯುವುದಿಲ್ಲವೇ? ಸುಶೀಲೆಯಾದ ನಂತರ, ಹತ್ತು ವರ್ಷಗಳು ಕಳೆದ ಮೇಲೆ, ಅಮ್ಮ ಮತ್ತೆ ಗರ್ಭವತಿಯಾಗಿರುವುದರಿಂದ ನಿಮಗೆಲ್ಲರಿಗೂ ಆಶ್ಚರ್ಯವಾಗಿರಬಹುದು. ಅಮ್ಮ ಮತ್ತು ನೀವು 'ಇನ್ನು ಮೇಲೆ ಇಲ್ಲ' ಎಂದು ತೀರ್ಮಾನಮಾಡಿದ್ದೇ ಈ ಆಶ್ಚರ್ಯಕ್ಕೆ ಕಾರಣ. ಇರುವುದನ್ನು ಇಲ್ಲ ಎಂದು ತೀರ್ಮಾನಿಸಲು ನಾವು ಯಾರು? ನಮ್ಮ ತೀರ್ಮಾನ ತಪ್ಪಾದ್ದರಿಂದ ನಾವೇ ಅದಕ್ಕೆ ವ್ಯಥೆಪಡಬೇಕು. ನನ್ನ ತಾಯಿ ಇಷ್ಟು ದಿನಗಳ ಮೇಲೆ ಮತ್ತೆ ಗರ್ಭವನ್ನು ಧರಿಸಿರುವುದಕ್ಕೆ ನನಗೆ ವ್ಯಥೆಗೆ ಬದಲು ಸಂತೋಷವೇ ಆಗಿದೆ. . . ." ಎಂದು ರವಿ ಹೋದಾಗ, ತನ್ನ ಅತ್ತಿಗೆ ಮುಖತಿರುಗಿಸಿಕೊಂಡು ಹೋದುದನ್ನು ಆತ ಗಮನಿಸಿದ.

"ಲೇಯ್. . . .ನನ್ನ ಹತ್ತಿರ ಬಂದು ಆಟ ಆಡಿದರೆ ಬೆತ್ತ ಮುರಿದು ಹೋಗುತ್ತೆ . . . ."ಎನ್ನುತ್ತ ತೋಟದಲ್ಲಿ ತಂದೆ ಸೋಮುವನ್ನೂ ಮೊಮ್ಮಕ್ಕಳನ್ನೂ ಗದರಿಸಿಕೊಳ್ಳುತ್ತ ಇದ್ದರು.

"ಸೋಮು ಅಪ್ಪನ ಹತ್ತಿರ ಯಾವಾಗಲೂ ಧಾರಾಳವಾಗಿ ಇರ್‍ತಾನೆ. ಆದರೂ..."

"ಯಾಕೋ ಸೋಮು?" ಅಪ್ಪನ ಬಳಿ ನಿನಗೇನು ತಮಾಷೆಯೋ?" ಎಂದು ರವಿ ಕೂಗನ್ನು ಹಾಕಿದ. "ಏನೂ ಇಲ್ಲ" ಎನ್ನುತ್ತ ಸೋಮು ಅಲ್ಲಿಂದ ಕಾಲುಕಿತ್ತ.

ಎರಡು ದಿನಗಳು ಕಳೆದುವು.

ಮನೆಯಲ್ಲಿ ಹಟಾತ್ತನೆ ಒಂದು ವಿಧದ ಸಂಕಟ ಮೌನ ವ್ಯಾಪಿಸಿತ್ತು. ಯಾರೂ ಒಬ್ಬರಿಗೊಬ್ಬರು ಮಾತಾಡಿಕೊಳ್ಳಲಿಲ್ಲ. ಆ ಮೌನದಲ್ಲಿ ಪ್ರತಿಯೊಬ್ಬರ ಕಣ್ಣುಗಳೂ ಕುಚೇಷ್ಟೆಯ ಕಿಡಿಗಳನ್ನು ಉದುರಿಸಿದುವು. ತನಗೆ ತಾನೇ ನಗೆಯಾಡುತ್ತಿರುವ ಮನೆಯ

ಚಿಕ್ಕ ಸೊಸೆಯನ್ನೂ ರವಿ ಗಮನಿಸಿದ. ಅಲಮು ಆಚ್ಚಿಗಿಂತಲೂ ಹೆಚ್ಚಿಗೆ ನಾಚಿಕೆಪಟ್ಟು ಕೊಂಡವರೆಂದರೆ ಕಾಮಾಕ್ಷಿ ಮತ್ತು ಸುಶೀಲ.

ಮೌನ, ಮೌನ, ಮೌನ. ಅಬ್ಬಬ್ಬಾ, ಅದು ಎಷ್ಟು ಕೆಟ್ಟ ಭಾಷೆ!

'ಊರವರನ್ನು ಹೇಳಿದರೆ ಸಾಕೋ? ಬಂಧುಗಳ ಮಾತಿರಲಿ. . . . ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳೂ ಸಹ. . . . ತಾಯಿಯನ್ನು ನೋಡಿ ಪರಿಹಾಸ್ಯ ಮಾಡುವ ಮಕ್ಕಳು' ಎಂದು ರವಿ ತನ್ನೊಳಗೇ ಹೇಳಿಕೊಂಡ.

ಇಂಥಾದ್ದೊಂದು ಎಂದು ಭಾವಿಸಯೇ ಅಮ್ಮ ಆತ್ಮಹತ್ಯೆಗೆ ಪ್ರಯತ್ನಿಸಿದಳು ಎನ್ನುವಾಗ ರವಿಯ ಕಣ್ಣುಗಳು ತೇವಗೂಡಿದುವು. ಮನೆಯಲ್ಲಿ ಪ್ರತಿಯೊಬ್ಬರೂ ಮೌನವನ್ನು ತಾಳಿ ಆಕೆಯನ್ನು ಕೊಲ್ಲುತ್ತಿರುವುದು ಅವನಿಗೆ ಸಹಿಸಲಿಲ್ಲ. ಆತ ಈಗ ತನ್ನ ತಂದೆಯ ಬಳಿ ನಡೆದ.

"ಅಪ್ಪಾ, ನನ್ನನ್ನು ಕ್ಷಮಿಸಿ. ಅಮ್ಮನ ಮನಸ್ಸಿನ ವೇದನೆ ನನಗೆ ತಿಳಿದಿದೆ. ನಮ್ಮ ಜನ ಇನ್ನೂ ಎತ್ತರಕ್ಕೆ ಬೆಳೆದಿಲ್ಲ. ತಾಯ್ತನಕ್ಕೆ ಕೂಡ ಗೌರವ ಸಲ್ಲಿಸಲು ಅರಿಯದ ಸ್ಥಿತಿಯಲ್ಲಿ ಇದ್ದಾರೆ. ಇಲ್ಲಿ ಅಮ್ಮ ಇರುವುದು ತುಂಬಾ ಕಷ್ಟವಾಗಿದೆ. ಆಕೆ ನನ್ನೊಂದಿಗೆ ಬರಲಿ."

ರವಿ ಹೀಗೆ ಹೇಳುತ್ತಲೇ ಸಿಂಗಾರಂ ಪಿಳ್ಳೈಗೆ ಏನೂ ತೋಚದಂತಾಯಿತು. ಬಳಿಕ ಅವರು ಮೆಲ್ಲಗೆ ಹೇಳಿದರು:

"ಆಗಲಪ್ಪ. ನನ್ನದೇನು ಅಡ್ಡಿ? ಅವಳು ಬಂದರೆ ಕರೆದುಕೊಂಡು ಹೋಗು."

ರವಿ ಒಂದು ದಿನ ಪೂರಾ ತಾಯಿಯ ಬಳಿ ಕುಳಿತಿದ್ದು ಆಕೆಗೆ ಸಮಾಧಾನ ಹೇಳಿದ

"ಆಕೆ ತುಂಬಾ ಒಳ್ಳೆಯವಳಮ್ಮ, ನೀನು ಪ್ರತ್ಯೇಕವಾಗಿಯೇ ಇರಬಹುದು. ಅವರ ದೇಶಗಳಲ್ಲಿ ಇದೆಲ್ಲ ಸಹಜ. ಹೆಮ್ಮೆಪಡುವ ವಿಷಯ. ನೀನು ಅವಳನ್ನು ಒಮ್ಮೆ ನೋಡಿದರೆ ಸಾಕು, ಮತ್ತೆ ಅವಳನ್ನು ಅಗಲಿರಲು ಮನಸ್ಸೇ ಬರುವುದಿಲ್ಲ."

"ಏನೋ? ಇನ್ನು ಭಾಷೆ ತಿಳಿಯದೆ ಅವಳ ಬಳಿಯೂ ಬಂದು ಅಪಮಾನಪಡ ಬೇಕು ಹಾಗಂತ ನಿನಗೆ ಇಷ್ಟವೋ?" ಎಂದು ಗಳಗಳ ಅತ್ತಳು ಅಲಮು ಆಚ್ಚಿ.

"ಏನಮ್ಮಾ, ಇಲ್ಲಿ ಈಗ ನಿನ್ನ ಕೂಡ ಮಾತಾಡುತ್ತಿರುವವರೆಲ್ಲ ಯಾವ ಭಾಷೆಯಲ್ಲಿ ಮಾತಾಡುತ್ತಿದ್ದಾರೆ? ಬಾಯಿತೆರೆಯದೆ ತಾನೇ ಎಲ್ಲ ನಡೆಯುತ್ತಿದೆ. ಒಬ್ಬರನ್ನು ಪ್ರೀತಿಸುವುದಕ್ಕೂ ಗೌರವಿಸುವುದಕ್ಕೂ ಭಾಷೆ ಯಾಕಮ್ಮಾ ಬೇಕಾಗಿದೆ. . . ."

ಮಗನ ಮಾತುಗಳು ಅರ್ಥವಾದ ಮೇಲೆ ಅಲಮು ಆಚ್ಚಿ ರವಿಯ ಕೈಗಳನ್ನು ಭದ್ರವಾಗಿ ಹಿಡಿದುಕೊಂಡು ಮೇಲೂ ಬಿಕ್ಕಿದಳು.

ಬೀದಿಯಲ್ಲಿ ಗಾಡಿ ಬಂದು ನಿಂತಿತು.

ಎಲ್ಲರ ಬಳಿಯೂ ಹೇಳಿಯಾದ ಮೇಲೆ ಅಲಮು ಆಚ್ಚಿ ಆ ಗಾಡಿಯಲ್ಲಿ ಹೋಗಿ

ಕುಳಿತಳು. ಅವಳನ್ನು ಗಾಡಿಯಲ್ಲಿ ಕುಳ್ಳಿರಿಸಿ ಹಿಂದಿರುಗಿ ಬಂದ ರವಿ ತನ್ನ ಅತ್ತಿಗೆ ರಾಜಂ ಎದುರಿಗೆ ಬಂದು ನಿಂತ.

ಆಗ ಹಾಲು ಸುರಿಯುತ್ತಿರಲು ಎರಡು ಹಲಸಿನ ಹಣ್ಣುಗಳನ್ನು ಹೊತ್ತು ಬಂದ ಸೋಮು "ಯಾಕಣ್ಣಾ, ಹಲಸಿನ ಹಣ್ಣು ಕೇಳಿದವನು ತೆಗೆದುಕೊಂಡು ಹೋಗದೆ ಹಾಗೆಯೇ ಹೋಗುತ್ತಿದ್ದೀಯಲ್ಲ" ಎಂದವನೆ ಅವುಗಳನ್ನು ಗಾಡಿಯಲ್ಲಿ ಹಾಕಿದ.

ರವಿಯ ಮನಸ್ಸಿನಲ್ಲಿ ಆಗ ಹಲವು ಫಲಗಳನ್ನು ಹೊತ್ತ ಆ ತಾಯಿಮರದ ನೆನಪು ಬಂದಿತು. ಆತ ಹೇಳಿದ:

"ಅತ್ತಿಗೆ ನಮ್ಮ ತೋಟದ ಹಲಸಿನ ಮರವನ್ನು ಗಮನಿಸಿದೆಯೇನು? ಅದರಲ್ಲಿ ಪ್ರತಿವರ್ಷವೂ ಫಲ ಬಿಟ್ಟುಕೊಂಡೇ ಇರುತ್ತದೆ. ಅದರಿಂದ ಆ ಮರಕ್ಕೇನೂ ತೊಂದರೆ ಯಾಗಿಲ್ಲ. . . ." ಎನ್ನುತ್ತ ಕ್ಷಣಕಾಲ ಮಾತನ್ನು ನಿಲ್ಲಿಸಿ ಮತ್ತೆ ಮುಂದುವರಿಸಿದ:

"ಸರಿ, ನೀನು ಬೇಗ ಅಣ್ಣನನ್ನು ಕರೆದುಕೊಂಡು ಬಾ. ಹೌದು, ನೀನು ತಿಳಿದು ಕೊಂಡಿರುವ ಹಾಗೆ ಇದು ನಾಚಿಕೆಗೇಡಿನ ಸಂಗತಿಯೇನೂ ಅಲ್ಲ."

ಆಗ ಗಾಡಿಯಲ್ಲಿ ಕುಳಿತಿದ್ದ ಅಲಮು ಆಚ್ಚಿಯೊಂದಿಗೆ ಏನು ಮಾತಾಡುವುದೆಂದು ತಿಳಿಯದೆ ಸಿಂಗಾರಂ ಪಿಳ್ಳೈ ಒದ್ದಾಡುತ್ತಿದ್ದರು, ಅವರಿಬ್ಬರೂ ಮಾತಾಡದೆ ಪರಸ್ಪರ ಮೌನವಾಗಿ ನೋಡಿಕೊಂಡರು.

"ಅಪ್ಪ, ನಾನು ಹೋಗಿದ್ದು ಬರಲೇನು? ಅಮ್ಮನ ಬಗ್ಗೆ ಚಿಂತೆ ಬೇಡ. ನಾನು ಗಮನಿಸಿಕೊಳ್ಳುತ್ತೇನೆ. ಬರಲಾ?" ಎನ್ನುತ್ತ ರವಿ ಗಾಡಿಯಲ್ಲಿ ತಾನೂ ಹತ್ತಿ ಕುಳಿತ.

ಸಿಂಗಾರಂ ಪಿಳ್ಳೈ ಆಗಲೂ ಏನೂ ಮಾತಾಡಲಿಲ್ಲ. ಮಾತಾಡಲು ಅವರಿಗೆ ವಾರ್ತೆಗಳೇ ಇರಲಿಲ್ಲವೋ ಏನೋ? ಆದರೆ ಆ ಗಾಡಿ ಅಲ್ಲಿಂದ ಹೊರಟು ಆ ಬೀದಿಯ ತಿರುವಿನಲ್ಲಿ ಕಣ್ಮರೆಯಾಗುವ ವರೆಗೂ ಸಿಂಗಾರಂ ಪಿಳ್ಳೈ ಮೌನವಾಗಿ ಆ ಗಾಡಿಯನ್ನೇ ನೋಡುತ್ತ ನಿಂತುಬಿಟ್ಟರು.

# ಶಬ್ದಗಳು

ನಾಲ್ಕು ದಿಕ್ಕುಗಳಲ್ಲಿಯೂ ಬೆಟ್ಟದ ಕೋಡುಗಳು ಕೈಚಾಚಿದ್ದ ಆ ಜಲಾಶಯದ ದಂಡೆಯಲ್ಲಿ, ಇರುಳು ಕವಿಯುವ ಸಮಯದಲ್ಲಿ, ಏಕಾಂತತೆ ತನ್ನ ಬಲೆಯನ್ನು ಬೀಸಿತ್ತು. 'ಪವರ್ ಹೌಸ್' ಎಂದು ಬೋರ್ಡು ಹಾಕಿಕೊಂಡು ಯಾವಾಗಲೋ ಒಂದು ಸಲ ಇಣುಕುನೋಟ ಬೀರುವ ಊಟಿ ಬಸ್ ಸಹ ಬಂದು ಹೋಗಿದೆ ಎಂದು ಕಾಣುತ್ತದೆ. ನೀರ್ತೋಟ್ಟಿಯ ದಕ್ಷಿಣಕ್ಕಿರುವ ಆ ಅಂಗಡಿಯಲ್ಲಿ ಯಾರನ್ನೂ ಈಗ ಕಾಣುತ್ತ ಇಲ್ಲ.

ಬಳಸಿ ಬಳಸಿ ಹಾದು ಬರುವ ಆ ಸಣ್ಣ ಹೊಳೆಯೂ ಅದರ ಆಚೆ ದಂಡೆಯಲ್ಲಿ ಬೆಳಕನ್ನು ಚೆಲ್ಲುತ್ತ ಜಾಜ್ವಲ್ಯಮಾನವಾಗಿ ಪ್ರಕಾಶಿಸುವ ಆ ವಿದ್ಯುತ್‌ಕೇಂದ್ರವೂ ಮನೆಯಲ್ಲಿದ್ದಂತೆಯೇ ದೂರದ ನೋಟವಾಗಿ ಸಂಪತ್ತುವಿಗೆ ಕಾಣಿಸುತ್ತದೆ. ನೋಡಿ ಅಭ್ಯಾಸವಾದ ಅವನ ಕಣ್ಣುಗಳಿಗೆ ಕೆಲವೊಮ್ಮೆ ಅಲೆ ಹಾಯ್ದುಬರುವ ಪ್ರವಾಹದ ಆರ್ಭಟವೂ ಮಾಮೂಲಿನ ಸಂಗತಿಯೇ.

ಕಂಬಳಿ ಕೋಟಿನ ಜೇಬಿನೊಳಗೆ ಕೈಯನ್ನು ಇಳಿಬಿಟ್ಟು ಆ ದಂಡೆಯಲ್ಲಿ ಉದ್ದಕ್ಕೂ ಹೆಜ್ಜೆಹಾಕಿ ಮತ್ತೊಂದು ವಿದ್ಯುತ್‌ನಿಲಯಕ್ಕೆ ಹೋಗುವ ವರೆಗೆ ಅವನ ಕೈಗಳು ಕೆನ್ನೆಗಳ ಮೇಲಿರುತ್ತದೆ. ಆರು ಸಾವಿರ ಅಡಿಗಳಿಗೂ ಮೀರಿದ ಎತ್ತರ. ಹಿಮ ಬೀಳುತ್ತಿರುವ ಆ ದಿನಗಳಲ್ಲಿ ಜಿಲ್ ಎಂದು ತೀಡುವ ಕುಳಿರ್ಗಾಳಿ. ಇನ್ನು ಪರಿಸ್ಥಿತಿ ಹೇಗಿರುತ್ತದೆ? ನೀರ್ತೊಟ್ಟಿಯಲ್ಲಿಯೂ ಜಿಲ್ಲೆನ್ನುವ ಶಾಂತಿ. ಅಲ್ಲಿ ಕೆಲಸಮಾಡುವ ಕಾವಲರು ಮಾತಾಡಿಕೊಳ್ಳುವ ಮಾಮೂಲು ಶಬ್ದ. ಹಸಿರು ಜಮಖಾನದ ಆ ದಂಡೆಯ ಮೇಲುಗಡೆ, ವಿದ್ಯುತ್ ಸ್ಟೇಷನನ್ನು ಆತ ತಲಪುತ್ತಾನೆ. ಸಾವಿರ ಸಾವಿರ ಕಿಲೊವಾಟ್ ಶಕ್ತಿಯುಳ್ಳ ಆ ನಿಲಯದಲ್ಲಿ, ನಾಲ್ಕು ದಿಕ್ಕುಗಳಿಗೂ ಕೈಚಾಚಿದ ತಂತಿಗಳ ಮೂಲಕ ವಿದ್ಯುತ್ತು ಹರಿಯುತ್ತದೆ. ಬೆಳಕನ್ನು ನೀಡುತ್ತದೆ. ಅಲ್ಲಿನ ಶಬ್ದ ನೂರು ನೂರು ಹೆದ್ದುಂಬಿಗಳು ಸೇರಿ ಉಂಟುಮಾಡಿರುವ ಹಾಗೆ:

'ರ್. . . . ಮ್. . . . ರ್. . . . ಮ್. . . .'

ಅಲೆಕ್ಸಾಂಡರ್ ಮತ್ತು ಶರವಣ ರಾತ್ರಿ ಕೆಲಸಕ್ಕೆ ಸಿದ್ಧವಾಗಿ ಬಂದಿದ್ದಾರೆ ಎಂದು ಕಾಣುತ್ತದೆ. ಅರುಣಾಚಲಂ ಬಾಗಿಲಿನಲ್ಲಿ ಅವರಿಗಾಗಿ ಕಾದು ನಿಂತಿದ್ದಾನೆ.

"ಬಸ್ಸು ಹೊರಟು ಹೋಯಿತೋ ಬ್ರದರ್?"

"ಗೊತ್ತಾಗಲಿಲ್ಲ. ಹೋಗಿದೆ ಎಂತ ಕಾಣುತ್ತೆ. ಅಂಗಡಿಯಲ್ಲಿ ಶಬ್ದವೇ ಇಲ್ಲ."

ಒಳಗೆ ಕಾಲಿಡುವುದಕ್ಕೆ ಮೊದಲೇ ಅಲ್ಲಿನ ಶಬ್ದ ಕಿವಿಯನ್ನು ಮೊಳಗುತ್ತದೆ.

ನಿಸರ್ಗದ ಆ ಮೋಹಕ ತಾಣದಲ್ಲಿ ಎತ್ತರವಾಗಿ ನಿಂತಿದೆ ಆ ಕಟ್ಟಡ. ಮಾನವರಿಗೆ

ಬೆಳಕನ್ನು ನೀಡಲು ಅಲ್ಲಿ ತಕ್ಕ ಏರ್ಪಾಡು ಆಗಿದೆ. ಅಲ್ಲೆಲ್ಲ ತಂತಿಗಳ ಮಾಲೆ ಮಾಲೆ. ಅವುಗಳಿಂದ ಹೊರಡುವ ಶಬ್ದ ಕಿವಿಗಳನ್ನು ಭೇದಿಸುತ್ತ ಇದೆ.

ಹಗಲಿನಲ್ಲಿ ಇವುಗಳ ಶಬ್ದ ಒಂದು ತೆರನದು. ಹಿಮಗಡ್ಡೆ ಬೀಳುತ್ತಿರುವ, ಮಾನವ ಕಂಠ ಕಲೆತ, ಇಂಥದು ಎಂದು ಹೇಳಲು ಸಾಧ್ಯವಿಲ್ಲದ ಶಬ್ದ. ಒಟ್ಟಿನ ಮೇಲೆ ಈ ಕೇಂದ್ರದಿಂದ ಮೊಳಗುವ ಶಬ್ದವನ್ನು ಇಂಥದೆ ಹೀಗಿಯೇ ಎಂದು ಹೇಳಲು ಸಾಧ್ಯವಿಲ್ಲ.

ಕೆಲವು ಸಮಯಂಗಳಲ್ಲಿ ಎಲ್ಲ ಚೆನ್ನಾಗಿ ಕೆಲಸ ಮಾಡುತ್ತದೆ ಎಂದು ತೋರಿಸಲು ಎತ್ತರದಲ್ಲಿ ಕೆಂಪು ದೀಪ ಕಣ್ಣುತೆರೆಯುತ್ತದೆ. ಓಕೇ.

ಅಲೆಕ್ಸಾಂಡರ್ ಒಂದು ಚಾಪೆಯನ್ನೂ ದಿಂಬನ್ನೂ ಸುತ್ತಿಕೊಂಡು ಹೊರಗೆ ಹೋಗುತ್ತಾನೆ. ಸಂಪತ್ತು ಅರುಣಾಚಲನನ್ನು ಆವೊತ್ತಿನ ಕೆಲಸದಿಂದ ಬಿಡುಗಡೆ ಮಾಡಲು ಬಾಗಿಲಿಗೆ ಧಾವಿಸುತ್ತಾನೆ.

"ಹಿಮಂ ಬಿದ್ದ ಹಾಗೆ ಚಳಿಯಾಗ್ತಾ ಇದೆ ಅಲ್ಲ, ಬ್ರದರ್?"

"ಹೌದು. ತುಂಬಾ ಚಳಿ."

"ಹುಂ, ಗಡಗಡ ಎನ್ನುತ್ತೆ. ಇವೊತ್ತು ಯಾಕೆ ಬಸ್ಸು ಬರಲಿಲ್ಲ? ನಾನು ಐದು ಗಂಟೆಯಿಂದಲೂ ನೋಡ್ತಾ ಅದೀನಿ."

"ಗೊತ್ತಾಗಲಿಲ್ಲ."

ಅರುಣಾಚಲಂಗೆ ಸಿನಿಮಾ ಹುಚ್ಚು. ಆ ಬಸ್ಸಿನಲ್ಲಿ ಊಟಿಗೆ ಹೋಗಿ, ರಾತ್ರಿ ಸಿನಿಮಾ ನೋಡಿ, ಬೆಳಗ್ಗೆ ಅವನು ಹಿಂದಿರುಗುವುದು ರೂಢಿ. ಅವನಿಗೆ ಮದುವೆಯೂ ಆಗಿದೆ. ಆದರೆ ಹೆಂಡತಿ ಊರಿಗೆ ಹೋಗಿದ್ದಾಳಂತೆ.

ಈಗ ಈ ಕೇಂದ್ರಕ್ಕೆ ಎದುರಾಗಿ ಯಾರೋ ಒಬ್ಬರು ಇತ್ತ ಬರುತ್ತಿರುವ ಹಾಗಿದೆ. ಯಾರದು?

ಖಾಕಿ ಉಡುಗೆ. ತಲೆಯಲ್ಲಿ ಎನ್‌ಸಿಸಿ ಟೋಪಿಯಂಥದು. ವೃದ್ಧಾಪ್ಯ ಸಮೀಪಿಸಿ ರುವ ವಯಸ್ಸು. ಹೌದು, ಅವನ ಕೆನ್ನೆಗಳು ಬತ್ತಿವೆ. ದೃಷ್ಟಿಮಾಂದ್ಯ ಇರುವ ಹಾಗಿದೆ.

"ಗುಡ್ ಇವಿನಿಂಗ್. ಸಾರ್" ಎಂದು ಬಂದವನು ಕೂಗನ್ನು ಹಾಕಿದ.

"ಗುಡ್ ಇವಿನಿಂಗ್. ಓಹೋ, ಏನು ನಾಯ್ಡು? ಎಲ್ಲಿ ಈ ಕಡೆ ಈಗ ಬಂದದ್ದು !"

"ಸುಮ್ಮನೆ ಸಾರ್. ಏನು ಈ ಸಾರ್ ಹೊಸಬರೋ?"

"ಹೊಸದು? ಬಂದು ಒಂದು ತಿಂಗಳಾಯ್ತುಯ್ಯ. ಎಲ್ಲಿ ನೀನು ಕಾಣಿಸುತ್ತಾನೇ ಇಲ್ಲವಲ್ಲ."

"ಆರೋಗ್ಯ ಚೆನ್ನಾಗಿಲ್ಲ ಸ್ವಾಮಿ. ನಿನ್ನೆತಾನೇ ಹಾಸಿಗೆಯಿಂದ ಎದ್ದೆ. ಮನೆಬಿಟ್ಟು ಎಲ್ಲಿ ಹೋಗಲು ಸಾಧ್ಯ?"

"ಗೌಡರ್‌ಷೋಲದ ಬಳಿ ರಿಪೇರಿಯಂತೆ. ರ‍್ರಾಮಯ್ಯ ಲಾರಿಯಲ್ಲಿ ಬಂದಿದ್ದ."

"ಥೂ, ಇವರ ಮನೆ ಹಾಳಾಗ" ಎಂದು ಹೊಣಗಿಕೊಂಡ ಅರುಣಾಚಲಂ.

"ಇವರು . . . . !" ಎನ್ನುತ್ತ ನಾಯುಡು ಸಂಪತ್ತುವನ್ನು ನೋಡಿದ,

"ಹೌದು . . . . ಒ . . . . ಬ್ಬರೇ. ಹೊಸದಾಗಿ ಬಂದಿದ್ದಾರೆ. ಚೆನ್ನಾಗಿ ಗಮನಿಸಿಕೋ" ಎಂದವನೇ ನಗುತ್ತ ಅರುಣಾಚಲಂ ಸಂಪತ್ತುವಿನ ಕೆನ್ನೆಯನ್ನು ಹಿಂಡಿದ.

"ಏನು ಸಾರ್? ಈ ಚಳೀಸೀಮೇಲಿ ನೀವುಗಳೆ ನಮಗೆ ದೇವರ ಹಾಗೆ. ಅಂದ ಹಾಗೆ ಸಾರ್ ಮದರಾಸಿನವರೋ?"

"ಹೌದು, ಇವರು ಯಾರು ಗೊತ್ತಾಗಲಿಲ್ಲ!" ಎಂದು ಕೇಳಿದ ಸಂಪತ್ತು.

"ನಾಯುಡು, ಹೇಳು. ನಾನು ಬರ್ತೇನೆ. ಬಸ್ ಬರೋ ಹಾಗೆ ಕಾಣ್ತಾ ಇದೆ. ಓ. ಕೇ. ಬಾಯ್, ಗುಡ್‌ನೈಟ್" ಎನ್ನುತ್ತ ಅರುಣಾಚಲಂ ನೀಳವಾದ ಕೋಟನ್ನು ಕೊಟ್ಟವನೇ ಹೊರನಡೆದ.

"ವಾರದಲ್ಲಿ ಮೂರು ದಿನವಾದ್ರೂ ಈ ಸಾರ್ ಸಿನಿಮಾ ನೋಡಲೇಬೇಕು......" ಎನ್ನುತ್ತ ನಾಯುಡು ನಕ್ಕ. "ಈ ಜಾಗ ನಾಲ್ಕು ವರ್ಷದ ಹಿಂದೆ ನೀವು ನೋಡಿರಬೇಕಿತ್ತು. ನೋಡಿ ಸಾರ್, ಜೇ ಜೇ ಅಂತ ಜಾತ್ರೆ ಗುಂಪು. ಹಣ ನೀರಿನ ಹಾಗೆ ಖರ್ಚಾಗಿದೆ. ಡ್ಯಾಂ ಕಟ್ಟಿ ಪವರ್ ಹೌಸೂ ಆಗಿ ಹೋಯ್ತು. ಸಾರ್ ಇದಕ್ಕೆ ಮೊದಲು......"

"ನಾನು ಕಳೆದ ಮೇನಲ್ಲಿ ವಿದ್ಯಾಭ್ಯಾಸ ಮುಗಿಸಿದೆ. ಇದು ಪ್ರಥಮ......"

"ಅಡೇಯಪ್ಪ, ಪಟ್ಟಣದ ಮಧ್ಯದಲ್ಲಿ ಬೆಳೆದವರಿಗೆ ಈ ಜಾಗ ತುಂಬಾ ಬೇಜಾರಾಗುತ್ತೆ. ನಾನು ಇಲ್ಲಿ ಮೂವತ್ತು ವರ್ಷಗಳಿಂದ ಇದ್ದೇನೆ, ಸಾರ್. ಫಾರೆಸ್ಟ್ ಡಿಪಾರ್ಟ್‌ಮೆಂಟಿನಿಂದ ಪೆನ್ಸನ್ ತೆಗೆದುಕೊಳ್ತಾ ಇದ್ದೇನೆ. ಅಲ್ಲಿ ಕಾಣುತ್ತೆ ನೋಡಿ, ಡ್ಯಾಮಿಗೆ ಮೇಲೆ ಮನೆ. ನಾಯುಡು ಎಂದರೆ ಎಲ್ಲರಿಗೂ ಗೊತ್ತು. ಎಸ್ಟೇಟ್ ಆಸ್ಪತ್ರೇಲಿ ನಮ್ಮ ಹುಡುಗಿ ಕೆಲಸ ಮಾಡ್ತಾಳೆ. ಬನ್ನಿ ಸಾರ್, ನಮ್ಮ ಮನೆಗೆ. ನಿಮ್ಮಂಥ ಫ್ರೆಂಡ್ಸ್ ಅಂದ್ರೆ ನನಗೆ ಪ್ರಾಣ. ಇಸ್ಪೀಟ್ ಆಡಲು ಎಲ್ಲರೂ ಬರ್ತಾರೆ."

"ಹುಂ."

"ಹೌದು. ನಮ್ಮ ಹುಡುಗಿಗೆ ತುಂಬಾ ಪುಸ್ತಕದ ಹುಚ್ಚು. ಬೇಕಾದಷ್ಟು ಇದೆ, ನಮ್ಮ ಮನೇಲಿ. ಸಾರ್‌ಗೆ ಊಟ?"

"ನಾನು ಶೈವ. ಮೆಸ್ಸಿನಲ್ಲಿ ಒಂದು ಹೊತ್ತು. ಮತ್ತೊಂದು ಸಮಯ ನಾನೇ ಮಾಡಿಕೊಳ್ತೇನ."

"ಒಬ್ಬ ಹುಡುಗನನ್ನು ಇಟ್ಟುಕೊಳ್ಳಬಹುದಲ್ಲ. ಕೆಲಸ ಮಾಡೋದಲ್ದೇ ಅಡಿಗೇನೂ ಮಾಡಿಕೊಳ್ತಾನೆ. ಓ. ಕೇ. ಆ ಮೇಲೆ ಬರ್ತಿನಿ ಸಾರ್. ನಾಳೆಗೆ ನೋಡೋಣ. ಗುಡ್‌ನೈಟ್."

ಅವನು ದೂರದಿಂದ ಬರುತ್ತಿರುವ ಬಸ್ಸನ್ನು ನೋಡಿಯೇ ಅಷ್ಟು ಬೇಗ ಹೊರಟ ನೆಂದು ಕಾಣುತ್ತದೆ. ರಾತ್ರಿ ತನಿಖೆಗೆ ಮೇಲಧಿಕಾರಿ ಬರುತ್ತಾರೆ. ಒಂದು ಸಲ ತನಿಖೆ ಮಾಡಿ ಹೋಗುತ್ತಾರೆ. ಕೆಲವು ದಿನ ಆರು ಗಂಟೆಗೇ ಬರುತ್ತಾರೆ. ಮತ್ತೆ ಕೆಲವು ದಿನಗಳು ಒಂಬತ್ತು ಗಂಟೆಗೇ ಬರುತ್ತಾರೆ.

"ಏನ್ರೀ, ನಾಯುಡು ಸ್ನೇಹ ಹಿಡಿದಿರೋ?"

"ಹಿಡಿದೆ? ಈಗ ತಾನೇ ಸಾರ್ ಅವರನ್ನು ನಾನು ನೋಡಿದ್ದು, ಅವರ ಸ್ನೇಹ ಒಳ್ಳೆಯದ್ದೊ, ಕೆಟ್ಟದ್ದೊ ಗೊತ್ತಾಗಲಿಲ್ಲ."

" ಸರಿ, ಸರಿ. ಒಳ್ಳೆಯವರ ಹಾಗೆ ಕಾಣ್ತೇರಿ ಅದಕ್ಕೇ ಎಚ್ಚರಿಕೆ ಹೇಳಿದೆ. " ಎನ್ನುತ್ತ ಬಂದಂತೆಯೇ ಶರ್ಮ ಬಸ್ಸನ್ನು ಹಿಡಿಯಲು ಧಾವಿಸುತ್ತಾರೆ.

ಸಂಪತ್ತುವಿನ ಸಹೋದ್ಯೋಗಿಗಳಾದ ಶರ್ಮ ಒಳ್ಳೆಯ ಅನುಭವಸ್ಥರು. ಸಾಮಾನ್ಯ ವಾಗಿ ಹೇಳಿದ ಸಮಯ ಕಳೆದ ಮೇಲೆ ಬರುತ್ತಾರೆ. ಮನೆಯಲ್ಲಿ ಅವರ ಹೆಂಡತಿ ಸದಾ ಹಾಸಿಗೆ ಹಿಡಿದಿರುತ್ತಾಳಂತೆ. ಮದುವೆಯಾಗುವ ವಯಸ್ಸಿನ ಇಬ್ಬರು ಹೆಣ್ಣು ಮಕ್ಕಳೂ ಅವರಿಗೆ ಇದ್ದಾರಂತೆ. ಮೇಲೂ ಇಬ್ಬರು ಊರಿನಲ್ಲಿ ಓದುತ್ತಿದ್ದಾರಂತೆ.

"ಬಾಲನ್ ಬಂದು ಹೊರಟು ಹೋಗಿರುವ ಹಾಗೆ ಕಾಣುತ್ತದೆ" ಎಂದು ಹೇಳಿ ಕೊಂಡು ಎಷ್ಟೋ ಸಮಯ ಕಳೆದ ಮೇಲೆ, ಮತ್ತೆ ಶರ್ಮ ಅಲ್ಲಿಗೆ ಪ್ರವೇಶಿಸಿದರು.

ಶರ್ಮರಿಗೆ ಮಾತು ಹೆಚ್ಚು ಹಿಡಿಸುವುದಿಲ್ಲ. ದೊಡ್ಡವರು ಚಿಕ್ಕವರು ಎಂದು ಮರ್ಯಾದೆ ಕೊಡದೆ ಸಿಗರೇಟ್ ಸೇದುವ ಈಗಿನ ಯುವಕರನ್ನು ಕಂಡರೆ ಅವರಿಗೆ ದ್ವೇಷ. ಅಂಥವರನ್ನು ಕಂಡರೆ ತಾವೇ ಜಾರಿಬಿಟ್ಟು ಹೋಗುತ್ತಾರೆ. ಈ ಕಾರಣಗಳಿಂದ ಸಂಪತ್ತುವಿನ ಮೇಲೆ ಅವರಿಗೆ ಮಮತೆ ಜಾಸ್ತಿ. ಸಂಪತ್ತುವಿಗೆ ಯಾವ ಚಟಗಳೂ ಇರಲಿಲ್ಲ.

"ಏನಪ್ಪ, ಎಲ್ಲ ಓ.ಕೆ. ತಾನೆ? ಎಲ್ಲೋ ಲೋಡು ಜಾಸ್ತಿಯಾಗಿರುವ ಹಾಗಿದೆಯಲ್ಲ."

ಹದಿನೆಂಟು ವರುಷಗಳ ಕೆಲಸದ ಅನುಭವದಿಂದ ಶಬ್ದಗಳಲ್ಲಿ ಸ್ವಲ್ಪ ಹೆಚ್ಚು ಕಡಿಮೆಯಾದರೆ ಸಾಕು, ಅವರಿಗೆ ಎಲ್ಲವೂ ತಿಳಿದುಹೋಗುತ್ತದೆ. ಅವುಗಳ ಸ್ಥಾಯಿ ಯನ್ನೂ ಮಿಡಿತವನ್ನೂ ಅವರು ಚೆನ್ನಾಗಿ ಗುರುತುಹಿಡಿಯಬಲ್ಲರು.

ಒಡನೇ ದೂರವಾಣಿಯನ್ನು ಸುತ್ತುಹಾಕಿ, ಎಲ್ಲಿಯೋ ತೊಂಬತ್ತು ಮೈಲುಗಳಾಚೆ ಒಂದು ಕೈಗಾರಿಕಾ ನಗರದ ಎಲ್ಲೆಯಲ್ಲಿ ಆ ಪಟ್ಟಣವನ್ನೇ ಬೆಳಗಲು ನೆರವಾಗಿರುವ ವಿದ್ಯುತ್ ಕೇಂದ್ರದೊಂದಿಗೆ ಈಗ ಅವರು ಸಂಪರ್ಕ ಬೆಳೆಸುತ್ತಾರೆ.

"ಹಲೋ......ಹಲೋ......ಪವರ್‌ಹೌಸ್ ಒನ್ ಕಾಲಿಂಗ್.........ಸಿಂಗಂಪಟ್ಟಿ ಸಬ್‌ಸ್ಟೇಷನ್ನೋ?" ಎಂದು ಅವರ ಧ್ವನಿ ಅಲ್ಲಿ ಮೊಳಗುವ ಶಬ್ದವನ್ನು ಮೆಟ್ಟಿ ಕೂಗು ಹಾಕುತ್ತದೆ.

ಇಪ್ಪತ್ತೆರಡು ದಿನಗಳ ಅವಧಿಯಲ್ಲಿಯೇ ಇಂಥ ಶಬ್ದಗಳ ಜಾಲದಲ್ಲಿ, ಮೇಳದಲ್ಲಿ, ಏತ್ತರಿದಲ್ಲಿ, ಅದುರುವಿಕೆಯಲ್ಲಿ ಆ ಪವರ್‌ಹೌಸ್ ಪಕ್ವವಾಗುತ್ತ ಇರುವುದು ನಿಜಕ್ಕೂ ಹೆಮ್ಮೆಪಡುವಂಥ ಸಂಗತಿಯೇ ಸರಿ. ಹೊಸ ಹಾಡನ್ನು ಕಲಿತರೆ ಉಂಟಾಗುವಂಥ ಆನಂದ; ಕಲಿತ ಮೇಲೆ ಅದನ್ನು ಗುಣುಗುಣಿಸುವ ರೀತಿ.

ಗಣಗಣವೆಂದು ಒಂದೇ ಸಮನೆ ಹೊಡೆದುಕೊಳ್ಳುತ್ತಿರುವ ಈ ಶಬ್ದಗಳ ಮೇಲಣ ಸಂತೆಯಲ್ಲಿಯೇ ಕುಳಿತು ಶರ್ಮ ರಾಮನಾಮ ಬರೆಯುತ್ತಾನೆ. ಅಲೆಕ್ಸಾಂಡರ್, ರಾಮನ್‌ಕುಟ್ಟಿ ಮತ್ತು ಶರವಣ ಹೊರಗೆ ಎದ್ದುಹೋಗಿ ಧೂಮಪಾನ ಮಾಡುತ್ತಾರೆ.

ಸಂಪತ್ತು ಈ ಶಬ್ದಗಳಲ್ಲಿಯೇ ಪೂರ್ಣವಾಗಿ ಲೀನನಾಗುತ್ತಾನೆ. ಪೇರುಲಿಯ ರಭಸದೊಂದಿಗೆ ನೀರು ಆ ಹಲ್ಲುಚಕ್ರಗಳ ನಡುವೆ ಪ್ರವಾಹವಾಗಿ ಸುತ್ತುತ್ತಿರುವ ಈ ನೀರಿನ ಶಬ್ದ. ಚಿತ್ರಗಳಲ್ಲಿ ಜಲಾಶಯಗಳನ್ನು ಗುರುತಿಸಲು ನೀಲಿ ಬಣ್ಣ ಹಾಕಿ ತೋರಿಸುತ್ತಾರಲ್ಲ, ಹಾಗೆ, ಅಂಥದೇ ನೋಟ. ಈ ಶಬ್ದವನ್ನು ಮೂಲವಾಗಿ ಇಟ್ಟುಕೊಂಡು ಗಿಂಯ್ ಗಿಂರ್ ಎಂದು ಗತಿತಪ್ಪದೆ ರಾಟೆಗಳು ಸುತ್ತುತ್ತವೆ. ಒಂದು ಆಧಾರ, ಮತ್ತೊಂದು ಶಬ್ದ. ಒಂದು ವ್ಯಾಪಿಸಿರುವ ನೀರಿನ ವ್ಯಾಪ್ತಿ. ಮತ್ತೊಂದು ಆ ನೀರನ್ನು ಕುಲುಕುತ್ತ ಮಿಂಚು ಹುಟ್ಟಿಸುವ ಜಾಲ. ಆ ಆಧಾರದೊಂದಿಗೆ ಸುತ್ತು ಹಾಕಿ ಜೀವ ಸಮೀಪಿಸುತ್ತ ಇರುವಾಗ, ಬಣ್ಣಬಣ್ಣದ ಹೂಬಳೆಗಳಾಗಿ—

ಓ, ಇವಳು ಯಾರು?

ಆತ ಹದಿನೈದು ತಿಂಗಳ ಕಾಲ ಕೆಲಸವಿಲ್ಲವೆ ಮನೆಯಲ್ಲಿದ್ದಾಗ, ಆ ದಿನಗಳಲ್ಲಿ ಎದುರು ಮಹಡಿ ಮನೆಯ ಸಂಗೀತ ವಿದ್ಯಾನಿಲಯದಲ್ಲಿ, ಸಂಜೆ ನಾಲ್ಕು ಗಂಟೆಯ ಸುಮಾರಿಗೆ ಸುಂದರಿಯೊಬ್ಬಳ ಮುಖ ಕಿಟಕಿಯಲ್ಲಿ ಇಣುಕುತ್ತದೆ. ಈಕೆ ಅವಳೋ ಎಂದು ಈತ ದಿಟ್ಟಿಸಿ ನೋಡುತ್ತಾನೆ. ಉಹೂಂ, ಇವಳು ಅವಳಲ್ಲ. ಈಕೆ ರಕ್ತ ಮಾಂಸ ತುಂಬಿ ದಷ್ಟಪುಷ್ಟವಾಗಿರುವ ಮತ್ತೊಂದು ಯುವತಿ.

ಇಂಥ ಯುವತಿಯರನ್ನು ಪ್ರಾಯದ ವಯಸ್ಸಿನಲ್ಲಿ ನೋಡುವುದೇ ತಪ್ಪು ಎಂದು ಅವನು ತನ್ನೊಳಗೇ ಒಂದು ನಿಬಂಧನೆಯನ್ನು ವಿಧಿಸಿಕೊಳ್ಳುವುದು ಬರಿಯ ಸಮಾಧಾನದ ಮಾತಷ್ಟೆ? ಈಗ ಆಕೆ ಮಿಂಚಿನ ಹೂಗಳಂತೆಯೆ ಅವನಿಗೆ ಕಾಣುತ್ತಾಳೆ.

"ನೀನು ಯಾರು? ಯಾವಾಗಲೂ ಇಲ್ಲಿ ಅರಳುವ ಆ ಹೂವಿಗೆ ಸಮಾನಳೊ? ನೀಲಳ ಹಲವು ಸಖಿಯರಲ್ಲಿ ಒಬ್ಬಳೊ? ಹಾಗಲ್ಲವೆ ಬೆಳದಿಂಗಳಲ್ಲಿ ಇಳಿದುಬಂದ ಚಿಗುರೊ?"

ಆಕೆ ಮಾತಾಡದೆ ಕೋಮಲವಾದ ತನ್ನ ಕರಗಳಿಂದ ಅವನ ಕತ್ತನ್ನು ಬಳಸುವುದು ತುಂಬಾ ಹಿತವಾಗಿದೆ. ಆದರೆ ಬಹಿರಂಗವಾಗಿ ಹೀಗೆ ಒಪ್ಪಿಕೊಳ್ಳಲು ಅವನು ಸಿದ್ಧನಿಲ್ಲ.

ಆತ ಅವಳ ಕೈಗಳನ್ನು ಅತ್ತ ಬಿಡಿಸಿ ಹೇಳುತ್ತಾನೆ:

"ಇಂಥ ಆಟ ಎಲ್ಲ ಬೇಕಾಗಿಲ್ಲ. ಹೋಗು, ದೂರ ಹೋಗು."

"ಓಹೋ, ತುಂಬಾ ಕೋಪಿಸ್ಕೊಳ್ತಾ ಇದ್ದೀರಲ್ಲ, ನಾನು ಬಂದದ್ದು ನಿಮಗೆ ಸಂತೋಷ ಆಗಿಲ್ಲವೊ?"

ಅದನ್ನು ಹೇಗೆ ಹೇಳುವುದು?

ನೀಲ ಬೆಳಿಗ್ಗೆ ಎಂಟೂವರೆ ಗಂಟೆಗೆ ಹೊರಟು ಸಮುದ್ರದಂಡೆಯಲ್ಲಿರುವ ಒಂದು ಕಾರ್ಯಾಲಯದಲ್ಲಿ ಕೆಲಸಮಾಡಲು ಹೋಗಿ, ಸಂಜೆ ಆಯಾಸದಿಂದ ಮನೆಗೆ ಹಿಂದಿರುಗಿ ಬರುತ್ತಾಳೆ. ಕಮಲ ಸಹ ಅಕ್ಕನನ್ನು ಹಿಂಬಾಲಿಸಲು ಸಿದ್ಧವಾಗಿದ್ದಾಳೆ........ ರಾಜ ಇನ್ನೂ ಮೂರು ವರ್ಷಗಳು ಕಾಲೇಜಿನಲ್ಲಿ ಓದಬೇಕಾಗಿದೆ. ಅಮ್ಮನ ಕೊರಳಿನಲ್ಲಿರುವ ಮೂವತ್ತು ಸವರನ್ ಚಿನ್ನದ ಒಡವೆಗಳು ಬ್ಯಾಂಕಿನಲ್ಲಿ ಇವೆ. ಮಾವನ ಮದುವೆಗೆ ತೆಗೆದ ಸಾಲಕ್ಕಾಗಿ ಅಪ್ಪನ ಪೆನ್ಷನ್ ಎಪ್ಪತ್ತೆಂಟು ರೂಪಾಯಿಗಳು ಸಾಲಕ್ಕೆ ಹೊರಟು ಹೋಗುತ್ತದೆ. ಅರ್ಥವಾಯಿತೋ? ಹದಿನೈದು ತಿಂಗಳಲ್ಲಿ ಕೆಲಸ ಸಿಕ್ಕದೆ ಉತ್ಸಾಹ ಕಳೆದುಕೊಂಡ ಮೇಲೆ, ನರಕಯಾತನೆಯನ್ನು ಅನುಭವಿಸಿದ ಮೇಲೆ, ಈ ಏಕಾಂತ ವಾದ ಚಳಿಪ್ರದೇಶಕ್ಕೆ ಬಂದದ್ದು ಆಗಿದೆ.

ಅವಳು ಮುಖವನ್ನು ತನ್ನ ಕೈಗಳಿಂದ ಮುಚ್ಚಿಕೊಂಡಿದ್ದಾಳೆ. ಆದರೂ ಅವಳ ಕಣ್ಣುಗಳು ಅವನನ್ನೇ ದಿಟ್ಟಿಸುತ್ತ ಇವೆ.

"ಹಾಗಾದರೆ, ನಾನು ಹೋಗುತ್ತೇನೆ."

"ಹೋಗಕೂಡದು. ಕೋಪವೊ? ಹೌದು, ನೀನು ಯಾರೆಂದು ಹೇಳಲೇ ಇಲ್ಲವಲ್ಲ."

"ನಾನು......ನಾನು......ನಿಮ್ಮೊಂದಿಗೇ ಇರುವವಳು......."

ಅವನ ಕೈಹಿಡಿಯಿಂದ ಆಕೆ ತಪ್ಪಿಸಿಕೊಳ್ಳುತ್ತಾಳೆ. ಅವಳು ಅವನೊಂದಿಗೇ ಇರುವವಳು. ಹಾಗಾದರೆ.......

"ಸಾರ್........"

ರಾಮುನ್‌ಕುಟ್ಟಿ ಈಗ ಚಹಾವನ್ನು ತೆಗೆದುಕೊಂಡು ಬಂದಿದ್ದಾನೆ.

ಲೂಬ್ರಿಕೇಟ್ ಎಣ್ಣೆಯಲ್ಲಿ ಜಾರುವ ಹಿತ, ಕಂಬಳಿಕೋಟಿನ ಬಿಸಿಬಿಸಿ, ಚಹಾಪಾನದ ಲೋಯ್ ಲೋಯ್ ಲೋಯ್ ಎಂದು ಸೀರುತ್ತ ಹಾಯುವ ನೀರಿನ ಶಬ್ದ. ಹಂಸ ದೋಣಿಯ ಮೇಲೆ ಕುಳಿತಿದ್ದಂತೆ ಹೂಕನಸು. ರೀಂಕಾರ, ಅವನ ಬಾಳಿನ ಚಿಂತೆಯನ್ನೂ ಆಯಾಸವನ್ನೂ ಕಡಿಮೆಮಾಡುವಂಥ ಶಬ್ದಜಾಲ.

"ಸಂಪತ್ತು, ಹೋಗಿದ್ದು ಬರ್ತೀಯಾ? ಜಾಗ್ರತೆಯಾಗಿ ಇರಪ್ಪಾ. ಹೋದೊಡನೆ ಕಾಗದ ಹಾಕು.........."ಎನ್ನುತ್ತ ಅವನ ತಂದೆ ಆತ ಗಾಡಿಯೇರುವಾಗ ತಮ್ಮ ಕಣ್ಣು ಗಳನ್ನು ಒರಸಿಕೊಂಡರು.

"ಹದಿನೈದು ತಿಂಗಳಿಂದ ಕೆಲಸ ಇಲ್ಲದೆ ಮಗು ಮನೆಯಲ್ಲಿದ್ದಾಗ ಭಾರವಾದ ಹಾಗಿತ್ತು. ಈಗ........." ಎನ್ನುವಾಗ ಅಮ್ಮನ ಕೊರಳು ಬಿಗಿದು ಬಂದಿತ್ತು.

ನೀಲಗಿರಿ ಎಕ್ಸ್‌ಪ್ರೆಸ್ಸಿಗೆ ಹೊರಟದ್ದೂ ಆಯಿತು.

"ಇಲ್ಲಿ ಎಷ್ಟು ಧಾರಾಳವಾಗಿ ಖರ್ಚುಮಾಡಿದರೂ ನೂರು ರೂಪಾಯಿಗಳಿಗೆ ಮೇಲೆ ಆಗೊಲ್ಲ. ನನಗೆ ಕೆಲಸ ಅಭ್ಯಾಸವಾಗಿದೆ. ಹಿಡಿಸಿದೆ. ಹಗಲು ಮೆಸ್ಸಿನಲ್ಲಿ ಊಟ ಮಾಡುತ್ತೇನೆ. ರಾತ್ರಿ ಮನೆಯಲ್ಲಿಯೇ ಅಡಿಗೆಮಾಡಿಕೊಳ್ಳುತ್ತೇನೆ. ಎಲ್ಲ ಸೌಕರ್ಯ ವಾಗಿದೆ. ನೀಲಳಿಗೆ ಒಬ್ಬ ವರನನ್ನು......" ಎಂದು ಕಾಗದ ಬರೆದದ್ದು ಆಗಿದೆ.

ನಾಲ್ಕು ತಿಂಗಳಲ್ಲಿ ಅವನು ಸಾವಿರ ರೂಪಾಯಿಗಳನ್ನಾದರೂ ಉಳಿಸಬಹುದು. ಈ ವರ್ಷ ನೀಲಳಿಗೆ ಮದುವೆಮಾಡಿ ಮುಗಿಸಿದರೆ, ಮುಂದಿನ ವರ್ಷ ಕಮಳಲಿಗೆ ಒಬ್ಬ ವರನನ್ನು ನೋಡಬಹುದು. ರಾಜನ ವಿದ್ಯಾಭ್ಯಾಸವೂ ಮೂರು ವರ್ಷಗಳಲ್ಲಿ ಮುಗಿದು ಹೋದರೆ....... ಆ ಮೇಲೆ....... ಆ ಮೇಲೆ.....

ಡಿರ್, ಢಿರ್ ಎಂದು ಭಾರೀ ಶಬ್ದವಾಗುತ್ತದೆ. ಆ ಶಬ್ದದೊಂದಿಗೇ ಎರಡೂ ಕೈಗಳನ್ನು ಜೋಡಿಸಿಕೊಂಡು ನಾಯುಡು ಅವನ ಮುಂದೆ ಬಂದು ನಿಲ್ಲುತ್ತಾನೆ.

"ಓ, ಬನ್ನಿ.......ಬನ್ನಿ."

"ಸಾರ್‌ಗೆ ಇವೊತ್ತು ಹಾಫ್ ಡ್ಯೂಟಿ. ಬಿಸಿಲು ಭೇರೆ ಜಾಸ್ತಿ. ಒಂದು ಸಮಯ ಊಟಗೆ ಹೋಗಿದ್ದೀರೇನೋ ಎಂದು ಭಾವಿಸಿದೆ."

"ಹೋಗಲಿಲ್ಲ."

"ಹಾಗಾದರೆ ನಾನು ಬಂದದ್ದು ಒಳ್ಳೆಯದೇ ಆಯಿತು. ಬನ್ನಿ, ನಮ್ಮ ಮನೆಗೆ ಹೋಗೋಣ ನಮ್ಮ ಗಾರ್ಡನಿನಲ್ಲಿ ಕುಳಿತು ಇಸ್ಪೀಟಾಟ ಆಡಲು ಪ್ರೆಂಡ್ಸ್‌ಗಳೆಲ್ಲ ಬಂದಿದ್ದಾರೆ."

"ನಾನು ಆ ಆಟ ಆಡುವುದಿಲ್ಲ. ನನಗೆ ಬರುವುದಿಲ್ಲ. ಪುಸ್ತಕಗಳು ಇದ್ದರೆ ಮಾತ್ರ ನೋಡಬಹುದು."

"ಓ, ತುಂಬಾ ಇದೆ ಸಾರ್, ಬನ್ನಿ."

ತುಂಬುತೋಳಿನ ಸ್ವೆಟರನ್ನು ಹಾಕಿಕೊಂಡು ಬಾಗಲಿಗೆ ಬೀಗವನ್ನು ಹಾಕಿ ಸಂಪತ್ತು ನಾಯುಡುವಿನ ಹಿಂದೆ ಹೊರಡುತ್ತಾನೆ. ಒಂದು ಸಮಯ ಈತ ಹಣ ಕಟ್ಟಿ ಜೂಜಾಡ ಲೆಂದೆ ಕರೆಯುತ್ತಿದ್ದಾನೋ ಹೇಗೆ? ಹಾಗಲ್ಲದೆ ಮತ್ತೇನಾದರೂ.......ಛೇ......ಯಾಕೋ ಸಂಪತ್ತುವಿಗೆ ಒಂದು ಬಗೆಯ ಅಳುಕು. ಆತ ತಲೆತುಂಬಾ ಜವಾಬ್ದಾರಿಯನ್ನು ಹೊತ್ತಿರುವ ಕೆಲಸಗಾರ. ಸಂಪಾದಿಸಿ ತನ್ನ ಕುಟುಂಬವನ್ನು ರಕ್ಷಿಸುವ ತೋಳಬಲ ಅವನಿಗೆ ಬಂದಿದೆ. ಹಾಗಿರುವಾಗ ಯಾತಕ್ಕೆ ಭಯಪಡಬೇಕು?

ಆ ಜಲಾಶಯದ ಕೇಂದ್ರವನ್ನು ಬಿಟ್ಟು, ಟೀ ಗಿಡಗಳ ಮಧ್ಯೆ ನುಸುಳಿ ಅವರು

ಹೆಜ್ಜೆ ಹಾಕುತ್ತಿದ್ದಾರೆ. ಅದರಾಚೆ ಓಕ್ ಮರಗಳು ಸುತ್ತುವರಿದಿದ್ದಂತೆ ಸುಂದರ ವಾದ ಒಂದು ಚಿಕ್ಕ ಮನೆ. ಅದರ ಬಾಗಿಲಲ್ಲಿ ಎಂಥದೊ ಗಿಡ ದೊಡ್ಡ ದೊಡ್ಡ ಹೂ ಗಳನ್ನು ಅರಳಿಸಿದೆ. ಇದು ವಸಂತ ಮಾಸದಲ್ಲಿ ಮಾತ್ರ ಅರಳುತ್ತದೆ ಎಂದು ನಾಯುಡು ಹೇಳುತ್ತಾನೆ. ಬೇರೆ ಹೂಗಿಡಗಳು ಅವರ ತೋಟದಲ್ಲಿ ಇಲ್ಲ. ಅಲ್ಲಿನ ಹುಲ್ಲು ಹಾಸಿಗೆಯ ಮೇಲೆ ಯದ್ವಾತದ್ವಾ ಖಾಲಿ ಸಿಗರೇಟ್ ಪ್ಯಾಕುಗಳು ಚೆಲ್ಲಾಡಿವೆ. ಐದಡಿ ಅಗಲದ ಆ ಮನೆಯ ಒಂದು ವರಾಂಡದಲ್ಲಿ ಗಾಜಿನ ಕಿಟಕಿಗಳ ಹಿಂದೆ ಒಂದು ಗುಂಪು. ಅವರೆಲ್ಲ ಇಸ್ಪೀಟು ಭಕ್ತರು. ಕಪ್ಪು ಬಣ್ಣದ ಟೈಟ್ ಪ್ಯಾಂಟುಗಳನ್ನೂ, ಸ್ವೆಟರುಗಳನ್ನೂ ಹಾಕಿರುವ ಯುವಕರು. 'ಗ್ಲಾಡ್ ಟು ಮೀಟ್ ಯು' ಎಂದು ಹೇಳುತ್ತ ಬಂದು ಸಂಪ್ರದಾಯ ದಂತೆ ಪರಸ್ಪರ ಕೈ ಕುಲುಕಿ ಅವರು ಆಟದಲ್ಲಿ ಭಾಗವಹಿಸುತ್ತಿದ್ದಾರೆ.

"ಗ್ಲಾಡ್ ಟು ಮೀಟ್" ಎನ್ನುವ ಕೋಮಲವಾದ ದನಿಯೊಂದಿಗೆ, ಅತ್ತರು ಚೆಲ್ಲಿದಂತೆ ಅಲ್ಲಿ ಸುವಾಸನೆಯೂ ಹರಡಲು, ಸಂಪತ್ತು ತಲೆಯೆತ್ತಿ ನೋಡಿದ.

"ನಮ್ಮ ಹುಡುಗಿ ಸಾರ್. ಸರಸ್ವತಿ ಎಂತಲೇ ಹೆಸರಿಟ್ಟದ್ದು. ಆದರೆ ಇಲ್ಲಿ ರೋಸಿ ಎಂದರೇ ಎಲ್ಲರಿಗೂ ಗೊತ್ತಾಗೋದು" ಎಂದು ನಗುತ್ತ ಹೇಳಿದ ನಾಯುಡು.

ಆಕರ್ಷಕವಾದ ಮುಖ, ಅಗಲವಾದ ಹಣೆ, ಮಲೆನಾಡಿನ ಹೆಣ್ಣು ಮಗಳಾದುದ ರಿಂದ ಆ ಬಣ್ಣವೊ ಎಂದು ಅವನಿಗೆ ತಿಳಿಯಲಿಲ್ಲ. ನೀಲವಾದ ತಲೆ ಕೂದಲು, ಮುಡಿದಿರುವುದು ಒಂದೇ ಗುಲಾಬಿ, ಅದೇ ಬಣ್ಣದ ಸೀರೆ, ತೋಳಿಲ್ಲದ ರವಕೆ. ಒಟ್ಟಿನ ಮೇಲೆ ಆಕೆ ಸೌಂದರ್ಯ ರಾಣಿ. ವರಾಂಡದಲ್ಲಿರುವ ಒಂದು ಚಿಕ್ಕ ಮೇಜಿನ ಮೇಲೆ ರಿಕಾರ್ಡು ಪ್ಲೇಯರ್ ಸಹ ಇದೆ.

"ಸಾರ್‌ಗೆ ಇಸ್ಪೀಟಾಟ ಗೊತ್ತಿಲ್ಲ, ರೋಸ್. ಪುಸ್ತಕಗಳು ಮಾತ್ರ ಹಿಡಿಯುತ್ತೆ" ಎಂದ ನಾಯುಡು.

"ಓ........ಹಾಗಾದರೆ, ನನ್ನ ಹಾಗೇ, ಕುಳಿತುಕೊಳ್ಳಿ ಸಾರ್. ನಿಮಗೆ ಬೀಟ್ಲಿನ ಸಂಗೀತ ಹಿಡಿಸುತ್ತೊ?"

ಅವನ ಭಾವನೆಗಳು ಈಗ ಗರಿಗೆದರುತ್ತ ಇವೆ. ಒಂದು ಚಿಕ್ಕ ಸೋಫಾ. ಆ ಮೆತ್ತೆಯ ಮೇಲೆ 'ಬೀ ಹಾಪ್ಪಿ' ಎಂದು ಹೂಗಳಲ್ಲಿ ಅಕ್ಷರಗಳನ್ನು ಬಿಡಿಸಿದೆ.

"ಕುಳಿತುಕೊಳ್ಳಿ ಸಾರ್".

ಸಿಹಿ ಮಿಠಾಯಿಯನ್ನು ಬಾಯಿಗೆ ಹಾಕಿದರೆ ಅದನ್ನು ಹೇಗೆ ಥೂ ಎಂದು ಉಗುಳಲು ಸಾಧ್ಯ.

ಅವನು ಕುಳಿತುಕೊಳ್ಳುತ್ತಾನೆ. "ಈಗ ಬಂದೆ" ಎನ್ನುತ್ತ ನಾಯುಡು ಒಳಗೆ ಧಾವಿಸುತ್ತಾನೆ.

ರೋಸಿ ಟೇಪ್ ರಿಕಾರ್ಡಿನ ಮೇಲೆ ಕೈಯಾಡಿಸುತ್ತಾಳೆ. ಒಂದಕ್ಕೊಂದು ಸಂಬಂಧ

ವಿಲ್ಲದ ಎರಡು ಮೂರು ಹಾಡುಗಳು. ಹಿನ್ನೆಲೆಯಲ್ಲಿ ಕೆಲವು ವಿಚಿತ್ರವಾದ ಶಬ್ದಗಳು ಆ ಶಬ್ದಗಳಿಗೆ ಅಲ್ಲಿ ಕುಳಿತ್ತಿದ್ದವರು ಕೈಕಾಲುಗಳನ್ನೂ ತಲೆಯನ್ನೂ ಆಡಿಸುವ ಹಾಗಿದೆ.

"ಈ ಮ್ಯೂಸಿಕ್ ನನಗೆ ತುಂಬಾ ಇಷ್ಟ" ಎಂದವಳೇ ರೋಸಿ ಆ ಹಾಡಿಗೆ ತಾಳ ಹಾಕುತ್ತಾಳೆ.

"ಸಂಪತ್ತು, ಜಾಗ್ರತೆಯಾಗಿ ಇರಪ್ಪ" ಎನ್ನುವ ತಂದೆಯ ದನಿ ಆ ಗೊರಗೊರ ಶಬ್ದಗಳನ್ನೂ ಮೆಟ್ಟಿ ಪ್ರತಿಧ್ವನಿಸುತ್ತದೆ.

ಕೆಲವು ತಿಂಗಳ ಹಿಂದೆ ಅವನ ದೊಡ್ಡಪ್ಪನ ಮಗ ರಂಗಮಣಿ ಅಮೇರಿಕಾಕ್ಕೆ ಹೋಗಿದ್ದು, ಟೇಪ್ ರೆಕಾರ್ಡ್ ಮುಂತಾದ ಇತರ ಸಾಮಾನುಗಳೊಂದಿಗೆ ಅವರ ಮನೆಯಲ್ಲಿ ಇಳಿದುಕೊಂಡಿದ್ದ. ಆಗ ಅವರ ಮನೆಯಲ್ಲಿ ಗುಂಪೇ ಗುಂಪು. ಬೇಸಿಗೆ ರಜೆ ಬೇರೆ. ಅವನ ಅಕ್ಕನ ನಾಲ್ಕು ಮಕ್ಕಳು, ತಂಗಿ ಭಾನು, ಯಾವಾಗಲೂ ಗೊರಕೆ ಹೊಡೆಯುವ ದೊಡ್ಡಪ್ಪ. ಇಂಥವರೆಲ್ಲ ಅದಕ್ಕೆ ಮುತ್ತಿಗೆ ಹಾಕಿದ್ದಾರೆ. ಯಾಯಾ ಚಾಚಾ— ಎಂದು ರಂಗಮಣಿ ಯಾರಿಗೂ ಅರ್ಥವಾಗದ ಹಾಗೆ ಈ ಸಂಗೀತದ ಆಸ್ವಾದನೆಯಲ್ಲಿ ಉಲ್ಲಾಸದಿಂದಿದ್ದಾನೆ.

ಒಂದು ದಿನ ಆತ ಎಲ್ಲಿಯೋ ಹೊರಗೆ ಹೋಗಿದ್ದಾಗ ಸಂಪತ್ತು ಒಂದು ಕೆಲಸ ಮಾಡಿದ.

"ರಂಗಮಣಿ, ನನ್ನ ಸ್ನೇಹಿತನಿಂದ ತೆಗೆದುಕೊಂಡು ಬಂದಿದ್ದೇನೆ. ತುಂಬಾ ಟೇಸ್ಟು ಈ ಬಾಬ್ ಮ್ಯೂಸಿಕ್". ಎಂದವನೇ ಒಂದು ಹಳ್ಳಿ ಹಾಡಿನ ಪ್ಲೇಟನ್ನು ಹಾಕಿದ. "ಎಲ್ಲಿ ಈ ಮೇಳಕ್ಕೆ ಯಾವ ಯಾವ ವಾದ್ಯಗಳು ಸೇರಿವೆ ಹೇಳು ನೋಡೋಣ" ಎಂದ.

ರಂಗಮಣಿ ತುಂಬಾ ಹೊತ್ತು ಆಲಿಸಿದ. "ಡಿರ್‌ರ್‌..... ಡಿರ್‌ರ್‌...."

"ಅಹ್ಹಹ್ಹಾ, ಸಿತಾರ್ ಕೂಡ ಇದೆ" ಎಂದವನೇ ಅವನು ಎದ್ದು ಕುಣಿದ. ಸಂಪತ್ತುವಿಗೆ ತಿಳಿಯದ ಅನೇಕ ವಾಕ್ಯಗಳನ್ನು ಇದರೊಂದಿಗೆ ಹೋಲಿಸಿದ. "ವಾಂಡರ್‌ಫುಲ್, ನನ್ನ ಕಲೆಕ್ಷನ್‌ನಲ್ಲಿ ಇದನ್ನೂ ಸೇರಿಸಿಕೊಳ್ಳುತ್ತೇನೆ" ಎಂದ.

"ಧಾರಾಳವಾಗಿ ಸೇರಿಸಿಕೋ. ಆದರೆ ಹತ್ತು ಡಾಲರ್ ಈ ಕಡೆ ತಳ್ಳಿಬಿಡು" ಎಂದು ನಗೆಯಾಡಿದ ಸಂಪತ್ತು.

"ಲೋ, ನೀನು ತುಂಬಾ ಸಂಗೀತ ರಸಿಕ ಕಣೋ" ಎನ್ನುತ್ತ ರಂಗಮಣಿ ಸಂಪತ್ತುವನ್ನು ಹೊಗಳಿದ.

ಈಗ ಆ ಹಾಡು ಸಂಪತ್ತುವಿನ ನೆನಪಿಗೆ ಬರುತ್ತ ಇದೆ.

"ಒಳಗೆ ಬಂದು ಬುಕ್ಸ್ ನೋಡುತ್ತೀರಾ ಸಾರ್? ತುಂಬಾ ಶೇಖರಿಸಿದ್ದೇನೆ, ಅದು ನನಗೆ ಹಾಬಿ............"

ಇಸ್ಪೀಟು ಆಡಲು ಬರುತ್ತದೆ ಎಂದಿದ್ದರೇ ಚೆನ್ನ ಇರುತ್ತಿತ್ತೇನೋ ಎಂದು ಕೊಳ್ಳುತ್ತ ಸಂಪತ್ತು ಮನೆಯೊಳಗೆ ಪ್ರವೇಶಿಸಿದ.

ಆ ಮನೆಯೊಳಗೆ ಅಂದವಾದ ಒಂದು ಕೊಠಡಿ. ಅಲ್ಲಿಯೂ ಸೋಫಾ, ಮೇಜು ಇತ್ಯಾದಿಗಳು ಇವೆ. ಒಂದು ಕನ್ನಡಿ ಬೀರುವಿನ ತುಂಬಾ ಪುಸ್ತಕಗಳು ಸೇರಿಸಿವೆ. ಸಾಮಾನ್ಯ ದರ್ಜೆಯ ಹೊಳಪು ರಟ್ಟಿನ ಪುಸ್ತಕಗಳು, ಸೆಕ್ಸ್, ಕ್ರೈಮ್ ಇಂಥವಕ್ಕೇ ಜಾಸ್ತಿ ಸಂಬಂಧಪಟ್ಟದ್ದು.

"ಕುಳಿತುಕೊಳ್ಳಿ ಸಾರ್" ಎಂದು ಅವಳು ಹೇಳುತ್ತಲೆ ಸಂಪತ್ತು ಆ ಸೋಫಾವಿನ ಮೇಲೆ ಕುಳಿತುಕೊಂಡ. ರೋಸಿ ಪುಸ್ತಕಗಳನ್ನು ಎಳೆದು ಎಳೆದು ಅವನ ಮುಂದೆ ರಾಶಿ ಹಾಕುತ್ತಿದ್ದಳು.

ಸಂಪತ್ತುವಿಗೆ ದಾರಿ ತಪ್ಪಿದ ಮಗುವಿನ ಹಾಗೆ ಒಂದು ಕಡೆ ಭಯ. ಮತ್ತೊಂದು ಕಡೆ ಅದನ್ನು ಎದುರಿಸುವ ಧೈರ್ಯ. ಆತ ಪುಸ್ತಕಗಳನ್ನು ತಿರುಗಿಸಿ ತಿರುಗಿಸಿ ನೋಡು ತ್ತಾನೆ. ಎಲ್ಲವೂ...... ಅದೆಲ್ಲವೂ..... ಅವನಿಗೆ ಆ ಅಕ್ಷರಗಳೇ ಅರ್ಥವಾಗಲೊ ಲ್ಲದು.

"ಹೇಗಿದೆ ಸಾರ್?" ಎಂದು ಆಕ್ ಒಂದೊಂದನ್ನೇ ಅವನ ಮುಂದೆ ನೀಡುತ್ತ ಕೇಳುತ್ತಾಳೆ.

ಸಾಮಾನ್ಯವಾಗಿ ಆತ ಕಾದಂಬರಿಗಳನ್ನು ಓದುವುದೇ ಇಲ್ಲ. ದಿನಪತ್ರಿಕೆಗಳ ತಲೆ ಬರಹವನ್ನೂ ಕ್ರೀಢಾವಿಭಾಗವನ್ನೂ ಕಣ್ಣಾಡಿಸುವುದೇ ಅವನ ರೂಢಿ.

ರೋಸಿ ಆ ಸಂಗೀತವನ್ನು ನಿಲ್ಲಿಸುವುದೇ ಇಲ್ಲ. ಕರಕರವೆಂದು ಆ ಶಬ್ದ ನಿನದಿಸಿ ಕೊಂಡೇ ಇದೆ. ಎಂಥದೊ ಅಲೆಗಳನ್ನು ಎಬ್ಬಿಸುತ್ತ ಇದೆ.

'ಸಂಪತ್ತು, ಜಾಗ್ರತೆಯಾಗಿ ಇರಪ್ಪಾ.....' ಎಂದು ಅಪ್ಪ ಯಾತಕ್ಕಾಗಿ ಹೇಳಿದರು? ಪುಸ್ತಕಗಳನ್ನು ಮುಚ್ಚಿಟ್ಟು ಆತ ಮೇಲೆದ್ದ.

"ಏನು ಸಾರ್, ತೋಟದ ಕಡೆ ಹೋಗೋಣವೊ?" ಆತ ಹೊರಬರುವಾಗ ಅವನೊಂದಿಗೇ ಹೆಜ್ಜೆಹಾಕುತ್ತ ಆಕೆ ಕೇಳುತ್ತಾಳೆ.

"ನಾಯುಡು ಎಲ್ಲಿ?"

"ಹಿ ಹಿ ಹೀ" ಎಂದು ನಗೆಯಾಡುತ್ತಾ ಅವಳು ಹೇಳಿದಳು:

"ಹೀಗೆ ಎಲ್ಲಾದರೂ ಸುತ್ತಿಕೊಂಡು ಬರಲು ಅವರು ಹೋಗುತ್ತಾರೆ. ನಾವು ಎಲ್ಲಿಗೆ ಹೋಗೋಣ?"

"ಇಲ್ಲ, ನಾನು ಅವಸರವಾಗಿ ಒಂದು ಕಾಗದ ಹಾಕಬೇಕಾಗಿದೆ. ನಾನು ಬಂದು....

"ಏನು ಸಾರ್, ಕೊಂಚ ಹಾಯಾಗಿ ಕಾಲ ಕಳೆಯೋಣ ಎಂದು ಭಾವಿಸಿದೆ. ನಿಮಗೆ ಇಲ್ಲಿ ಹಿಡಿಸಲಿಲ್ಲವೊ?"

"ಓ ಅದೆಲ್ಲ ಇಲ್ಲ. ಬಾಕ್ಸ್‌ನಿಂದ ತೆಗೆದು ಬಿಟ್ಟರೆ ನನ್ನ ಟಪ್ಪಾಲು ಇಂದು ಹೋಗಲು ಸಾಧ್ಯವಿಲ್ಲ, ಅಷ್ಟೇ"

"ನಾಳೆಗೆ?"

"ಹೌದು ನಾಳೆ. ಅಪ್ಪ ಇವರ ಸಂಗಡ ಹೊರಗೆ ಹೋಗಿರುತ್ತಾರೆ. ನೀವು ಬಾರದಿದ್ದರೆ ನನ್ನ ಆಸೆಗೆ ನಿಶ್ಚಯವಾಗಿಯೂ....."

"ಹುಂ, ನಾಳೆಗೆ ನನಗೆ ಕೆಲಸ ಇದೆ. ಇನ್ನು ಬರ್ತೇನೆ.".

ಆಕೆ ಸಿಟ್ಟಿನಿಂದ ಅತ್ತ ಹೆಜ್ಜೆ ಹಾಕಿದಳು.

"ಛೀ, ನೀನೂ ಒಬ್ಬ ಗಂಡಸೊ?"

ರೋಸಿ ಮಹಡಿಯ ಮೇಲೆ ನಿಂತವಳೆ ಅವನನ್ನು ನೋಡಿ ನಗುತ್ತಿದ್ದಾಳೆ. ಅವಳು ಮಾತ್ರವಲ್ಲ, ಆ ಬೆಟ್ಟವೇ ನಗೆಯಾಡುತ್ತಿದೆ.

ಈಗ ರಸ್ತೆಯಲ್ಲಿ ಸಂಪತ್ತು ಹೆಜ್ಜೆ ಹಾಕುತ್ತಾನೆ. ಅವನ ಎದುರಿಗೆ ಅಧಿಕಾರಿಯ ಜೀಪು ಬರುತ್ತಿದ್ದು, ಅದು ಹಾರ್ನ್ ಮಾಡಿದ ಮೇಲೆಯೇ ಅವನಿಗೆ ತಿಳಿದದ್ದು. ಥಟ್ಟನೆ ಆತ ಬದಿಗೆ ಸರಿದ. ಅಧಿಕಾರಿ ಅವನನ್ನು ದಿಟ್ಟಿಸಿ ನೋಡಿದರು ಎಂದು ಕಾಣುತ್ತದೆ.

'ನಾಯುಡು ಸ್ನೇಹ ಸಂಪಾಸಿದ್ದೀಯೊ?' ಎಂದು ಅವರು ಅವೊತ್ತು ಕೇಳಿದರಲ್ಲ. ಈಗ ಅವರು ತನ್ನನ್ನು ಕುರಿತು ಏನೆಂದು ಭಾವಿಸಿರಬಹುದು?

ಅವೊತ್ತು ಅವನು ಮನೆಯಲ್ಲಿ ತನ್ನ ದೇಹವನ್ನು ಗೇಣುದ್ದ ಮಾಡಿಕೊಂಡಿದ್ದರೂ ರೋಸಿಯ ನಗೆ ಅವನನ್ನು ಹುಚ್ಚೆಬ್ಬಿಸಿದೆ. ಕಂಪೆನಿ ರಗ್ಗಿನಿಂದ ದೇಹವನ್ನು ಹೊದೆದು ಕೊಂಡಿದ್ದರೂ ಏಕಾಂತತೆ ಅವನನ್ನು ಬಾಧಿಸುತ್ತ ಇದೆ. ನಗೆ, ನಗೆ, ಆ ನಗೆಯ ಅಲೆ, ಅವನ ನಿದ್ದೆಯನ್ನು ಬಿರುಗಾಳಿಯಂತೆ ಚೆದರಿಸುತ್ತ ಇದೆ.

ಬೆಳಗಿನ ಜಾವ ಮಾತ್ರ ಅವನು ನಿದ್ದೆ ಮಾಡಿದ್ದಾನೆ. ಎಚ್ಚರವಾದಾಗ, 'ಉರ್‌ರ್‌ರ್' ಎನ್ನುತ್ತ ಕರೆಗಂಟೆ ದೀರ್ಘವಾಗಿ ಹೊಡೆದುಕೊಳ್ಳುತ್ತ ಇದೆ.

ಅಲೆಅಲೆಯಂತೆ ನಾಯುಡುವಿನ ನೆನಪೇ ಈಗಲೂ ಬೆಳಗೆಯೇ ನನ್ನನ್ನು ಭೂತ ದಂತೆ ಬೆನ್ನಟ್ಟಿ ಬಂದಿದ್ದಾನೊ?

ಸಂಪತ್ತು ಮಿಸುಕಾಡಲಿಲ್ಲ. ಆದರೆ ಕರೆಗಂಟೆಯೊಂದಿಗೆ ಕಿಟಕಿಯ ಕನ್ನಡಿ ಗಾಜಿನ ಬಳಿ ಶಬ್ದವೂ ಆಗುತ್ತದೆ. ಕೈಗಳನ್ನು ಹಿಂದಕ್ಕೆ ಮಡಚಿ ಮೆಲ್ಲಗೆ ಎದ್ದು ಬಂದು ಬಾಗಿ ನೋಡಿದರೆ ಅರುಣಾಚಲಂ.

"ಏನು ಬ್ರದರ್, ಆರೋಗ್ಯವು ಚೆನ್ನಾಗಿಲ್ಲವೊ? ಫೋನಿನಿಂದ ಕೂಗಿ ಕೂಗಿ ನೋಡಿದೆ. ರಿಸೀವರ್ ಎತ್ತಲೇ ಇಲ್ಲ. ಸರಿ, ಹೋಗಿ ನೋಡೋಣ ಎಂದು ಬಂದೆ. ನಾನು ಬಂದು ಹತ್ತು ನಿಮಿಷ ಆಯ್ತು. ಏನು ಸಮಾಚಾರ?"

"......ಒಂದೂ ಇಲ್ಲ. ಒಳಗೆ ಬನ್ನಿ, ಬ್ರದರ್. ನನಗೇ ತಿಳಿಯದಂತೆ ಹೆಚ್ಚು ನಿದ್ರೆ ಮಾಡಿದ್ದೇನೆ, ಅಷ್ಟೇ."

"ನಿದ್ದೆ? ಗಂಟೆ ಈಗ ಎಷ್ಟು ಗೊತ್ತೊ? ಹತ್ತೂವರೆ. ಅದು ಸರಿ, ಈಗ ನನಗೆ ಒಂದು ಕೆಲಸ ಮಾಡಿಕೊಡಬೇಕಲ್ಲ."

"ಹೇಳಿ."

"ನಮ್ಮ ಮನೆಯವರು ಬರ್ತಾರೆ. ನಾನು ಊಟಿಗೆ ಹೋಗಬೇಕಾಗಿದೆ. ನಾಲ್ಕು ಗಂಟೆಯ ವರೆಗೆ ನೀವೇ ನೋಡಿಕೊಳ್ಳಬೇಕು."

"ಓ, ಧಾರಾಳವಾಗಿ".

ಅರುಣಾಚಲಂ ನಿರ್ಗಮಿಸುತ್ತಾನೆ.

ಅಲ್ಲಿಗೆ ಎದುರಾಗಿ ಎತ್ತರದ ಕಟ್ಟಡ ಪವರ್‌ಹೌಸ್ ಗಂಭೀರವಾಗಿ ಕಾಣುತ್ತ ಇದೆ. ನೀರಕಾಲುವೆಯ ದಂಡೆಯಲ್ಲಿ ಆ ಜಲಾಶಯದತ್ತ ಆತ ಹೆಜ್ಜೆ ಹಾಕುತ್ತಿದ್ದಾನೆ. ಟೀ ಗಿಡಗಳ ಬದಿಯಲ್ಲಿ ಸರಸರ ಶಬ್ದ. ಎಂಥದೊ ನಗೆ.

ಬೇಗ ಬೇಗ ಹೆಜ್ಜೆಯನ್ನು ಹಾಕಿ ಆತ ತನ್ನ ಕಾರ್ಯಾಗಾರವನ್ನು ಹೋಗಿ ಸೇರು ತ್ತಾನೆ.

ಲೂಬ್ರಿಕೇಂಟ್ ಎಣ್ಣೆ...:.. ವೇಸ್ಟ್......

ಹಾಗೆಯೇ ಎಲ್ಲವನ್ನೂ ಪರೀಕ್ಷಿಸುತ್ತಾನೆ. ಎಲ್ಲವೂ ಸರಿಯಾಗಿದೆ. ಓ. ಕೇ. ಅಲೆಹಾಯುತ್ತ ನೀರು ಗಿಂಯ್ ಗಿಂಯ್ ಎಂದು ಶಬ್ದಮಾಡುತ್ತಿದೆ. ಅವನು ಹೊರಗೆ ಬಂದು ಹಾಗೆಯೇ ನಿಂತುಕೊಳ್ಳುತ್ತಾನೆ.

ಸಂಪತ್ತುವಿನ ಸಹಾಯಕ ಶರವಣ ಎಣ್ಣೆ ಗಿಂಡಿಯೊಂದಿಗೆ ತನ್ನ ಕಾರ್ಯದಲ್ಲಿ ಲೀನನಾಗಿದ್ದಾನೆ. ಅಧಿಕಾರಿ ಒಂದು ಸಲ ಬಂದು ಹೋಗಿದ್ದಾರೆ. ಮೆಸ್ಸಿಂದ ದೋಸೆ ಯನ್ನು ತೆಗೆದುಕೊಂಡು ಬರಲು ರಾಮನ್ ಕುಟ್ಟಿಯನ್ನು ಕಳಿಸಿದ್ದು ಆಗಿದೆ. ಸಂಪತ್ತು ರಾತ್ರಿ ಕೆಲಸವನ್ನೂ ಮುಗಿಸಿಕೊಳ್ಳುತ್ತಾನೆ.

ಶರ್ಮ ರಾಮನಾಮ ಬರೆಯುವಾಗ, ಸಂಪತ್ತುವಿನ ಕಲ್ಪನೆ ಶಬ್ದಗಳೊಂದಿಗೆ ಹಾರಾಡುತ್ತದೆ. ಅವಳೂ ಮೆಲ್ಲಗೆ ತೇಲಿಬರುತ್ತಾಳೆ.

ಆ ನಗೆ, ಲಕ್ಷಣವಾದ ಮುಖ, ದುಂಡಾದ ಕೈಗಳು. ಛೆ ಛೆ ಛೆ.

ಅವನು ತಲೆಯನ್ನೂ ಹೀಗೆ ತಿರುಗಿಸಿಕೊಳ್ಳುತ್ತಾನೆ. ಆದರೆ ಅವಳ ನಗೆ ಮೇಲೂ ಅಧಿಕವಾಗುತ್ತದೆ.

ಅಯ್ಯೋ, ಈ ನಗೆ. ಅವನು ಕಿವಿಗಳನ್ನು ಭದ್ರವಾಗಿ ಮುಚ್ಚಿಕೊಳ್ಳುತ್ತಾನೆ.

ಧಡ ಧಡ ಧಢ ಎಂದು ಎಕ್ಸ್‌ಪ್ರೆಸ್ ರೈಲು ಓಡುತ್ತ ಇದೆ. ಹಾಳು ಶಬ್ದವೇ.

"ಟೀ ತಂದಿದ್ದೀನಿ ಸಾರ್. ಯಾಕೆ ತಲೆನೋವೇನು?" ಎಂದು ರಾಮನ್ ಕುಟ್ಟಿ ಕೇಳುತ್ತಾನೆ.

ಅವನಿಗೆ ಉತ್ತರ ಆ ಎನ್ನುತ್ತ ಒಂದು ಸ್ವಲ್ಪ ದೀರ್ಘವಾಗಿ ಆಕಳಿಕೆ.

"ಯಾಕಯ್ಯಾ? ಹಿಮದಲ್ಲಿ ನೆನೆದಿದ್ದೀಯೊ? ಹೊಸಬ ತುಂಬಾ ಜಾಗ್ರತೆಯಾಗಿರಬೇಕು."

ರಾಮನಾಮ ಬರೆಯುತ್ತಿದ್ದಂತೆಯೇ ಮಧ್ಯೆ ಶರ್ಮ ಹೀಗೆ ಹೇಳುತ್ತಾರೆ:

"ಇಲ್ಲ, ಸಾರ್."

"ಕೈಗಳನ್ನು ನೋಡಿದರೆ ಗೊತ್ತಾಗೊಲ್ವೆ! ನೀನು ಹೋಗಿ ವಿಶ್ರಾಂತಿ ತೆಗೆದುಕೋ ಹೋಗು. ನಾನು ನೋಡಿಕೊಳ್ಳುತ್ತೇನೆ. ನಿನ್ನ ಅವಶ್ಯಕತೆ ಬೇಕಾದರೆ ಕೂಗುತ್ತೇನೆ. ಹೋಗಯ್ಯ"

"ಅದೆಲ್ಲ ಏನೂ ಇಲ್ಲ, ಸಾರ್."

"ನೀನು ಇವೊತ್ತು ಮೂರು ಗಂಟೆಗೇ ಡ್ಯೂಟಿಗೆ ಬಂದಿದ್ದೀ ಎಂತ ಕಾಣುತ್ತದೆ. ತುಂಬಾ ಆಯಾಸಗೊಂಡಿದ್ದೀ" ಎಂದು ಹೇಳಿ, ಏಣಿಗಳನ್ನು ಹತ್ತಿ, ವಿಶ್ರಾಂತಿ ತೆಗೆದುಕೊಳ್ಳಲು ಇರುವ ಮೇಲಿನ ಒಂದು ಜಾಗಕ್ಕೆ ಅವನನ್ನು ಹೋಗೆಂದು ಹೇಳುತ್ತಾರೆ.

ಅಲ್ಲಿ ಎರಡು ಮರದ ಬೆಂಚು. ಕಂಬಳಿಯೂ ತಲೆದಿಂಬೂ ಇದೆ.

ಏಕಾಂತವಾಗಿ ದಿಂಬಿಗೆ ತಲೆಕೊಟ್ಟು ಮಲಗಿದರೂ ಶಬ್ದಗಳು ಮರೆಯಬೇಕಲ್ಲ. ಅಲ್ಲಿನ ಆ ಶಬ್ದಗಳ ನಡುವೆ...... ರೋಸಿ...... ಸೇಬಿನ ಹಣ್ಣಿನ ಮೈಬಣ್ಣದವಳು....

'ಛಿ, ಶನಿ, ದೂರ ಹೋಗು' ಎನ್ನುತ್ತ ಕಂಬಳಿಯನ್ನು ಜಾಳಿಸಿ ಸಂಪತ್ತು ಎದ್ದು ಕುಳಿತುಕೊಳ್ಳುತ್ತಾನೆ. ಆ ಮೂಲೆಯಲ್ಲಿ ಒಂದು ಪತ್ರಿಕೆ ಬಿದ್ದಿದೆ. ಅದರಲ್ಲಿ ದೊಡ್ಡ ಅಕ್ಷರದ ಶೀರ್ಷಿಕೆ ಎದ್ದು ಕಾಣುತ್ತ ಇದೆ. ತನ್ನ ಚಿಂತೆಯ ಗಮನವನ್ನು ಬೇರೆ ಕಡೆಗೆ ಹರಿಸಲು ಆತ ಆ ಪತ್ರಿಕೆಯನ್ನು ಕೈಗೆತ್ತಿಕೊಂಡು ಅದರ ಮೇಲೆ ಕಣ್ಣಾಡಿಸುತ್ತಾನೆ.

'ಪವರ್ ಹೌಸಿನ ಬಳಿ ಒಂದು ಆನೆ ಬಂದು ವಿದ್ಯುಕ್ತಿಗೆ ಈಡಾಗಿದೆ'—ಹಳೆಯ ಸುದ್ದಿ. ಇಲ್ಲಿ ಅಲ್ಲ, ಬೇರೆ ಕಡೆ ನಡೆದದ್ದು. ಆನೆ ಸಿಕ್ಕಿಹಾಕಿಕೊಂಡಿರುವುದು, ಅದನ್ನು ಕ್ರೇನ್‌ಗಳ ಮೂಲಕ ಎತ್ತಿ ರಕ್ಷಿಸುವ ಕೋಲಾಹಲದ ದೃಶ್ಯ—ಸಂಪತ್ತು ಭದ್ರವಾಗಿ ಕಣ್ಣುಗಳನ್ನು ಮುಚ್ಚಿಕೊಳ್ಳುತ್ತಾನೆ.

ಎರಡು ಕ್ರೇನ್‌ಗಳು. ಆನೆ ಘೀಳಿಡುತ್ತಿರುವ ಶಬ್ದ; ಆಲೆದಾಯುತ್ತ ಇದೆ, ಎಲ್ಲಿಯೊ ಏನೊ ತಪ್ಪಾಗಿದೆ. ಭಾರೀ ಕೂಗಿನೊಂದಿಗೆ ಆನೆ ಜಾರುತ್ತ ಇದೆ. ಯಾರದು? ಏನಾಯಿತು? ಆನೆ ಜಾರಿ ಕೆಳಗೆ ಬಿದ್ದುಬಿಟ್ಟಿದೆ. ಭೂಮಿ ಕಂಪನವಾದ ಹಾಗಾಗಿದೆ.

ಛೆ, ಆನೆಯಲ್ಲ. ಅವಳು. ಹಂಸದಾಕಾರದ ದೋಣಿಯಲ್ಲಿ ಕುಳಿತು ಮಿಂಚಿನ ಬಳ್ಳಿಯ ಹಾಗೆ ಬಂದವಳು.

ಒಂದೇ ಕ್ಷಣ. ಮತ್ತೆ ಆ ನಗೆ. ಅದು ರೋಸಿಯ ನಗೆಯೇ. ಅವನ ನರನಾಡಿಗಳೆಲ್ಲ ಶಬ್ದವಾದ ಹಾಗಾಗುತ್ತದೆ. ಬೆಂಚು ಅಲ್ಲಾಡುತ್ತದೆ. ತಕ್ಷಣ ಅವನಿಗೆ ತನ್ನ ಕೆಲಸದ ಅರಿವು ಮೂಡುತ್ತದೆ.

"ಸ್ವಿಚ್ ಆಫ್‌ಮಾಡಿ.....ಆಫ್‌ಮಾಡಿ....." ಎಂದು ಕೂಗಿಕೊಳ್ಳುತ್ತ ದಡದಡ ವೆಂದು ಅವನು ಏಣಿಯ ಮೆಟ್ಟಲುಗಳಿಂದ ಕೆಳಗಿಳಿದು ಬಂದಿದ್ದಾನೆ.

"ಏನು? ಏನಯ್ಯಾ ಸಂಪತ್ತು? ಯಾಕೆ ಹೀಗೆ ಗಾಬರಿಯಾಗಿದ್ದೀಯೆ?"

"ನೋಡಿ ಶಬ್ದ, ಏನೋ ಶಬ್ದ......."

"ಎಲ್ಲ ಸರಿಯಾಗಿದೆ, ನೋಡು. ಎಲ್ಲ ಓ. ಕೇ."

ಕೆಂಪು ದೀಪ ಇಲ್ಲ, ನೀರು ಹಾಯುತ್ತಿರುವ ಶಬ್ದ. ಚಕ್ರಗಳು ಮಾಮೂಲಿನಂತೆ ಸುತ್ತಿಕೊಂಡಿವೆ.

"ಗಂಟೆ ಎಷ್ಟಾಯಿತು ಸಾರ್?"

"ಎರಡು. ನೀನು ಮಲಗಲು ಹೋಗಿ ಕಾಲು ಗಂಟೆ ಮಾತ್ರ ಆಗಿದೆ ಅಷ್ಟೆ."

"ಈ ಶಬ್ದದಲ್ಲಿ ನಿದ್ದೆ ಎಲ್ಲಿ ಬರುತ್ತೆ ಸಾರ್? ತಲೆನೋವು."

"ಅದೇ ತೊಂದರೆ. ಅಭ್ಯಾಸ ಆಗುವ ವರೆಗೆ ಹೀಗೆಯೇ. ಕಿವಿಗಳಿಗೆ ಹತ್ತಿ ತುರುಕಿ ಕಣ್ಣುಮುಚ್ಚು. ಹೋಗು. ಎಲ್ಲ ಸರಿಹೋಗುತ್ತೆ. ಏನು? ಇಷ್ಟರಲ್ಲಿಯೇ ಕೆಟ್ಟ ಕನಸು ಕಂಡೆಯೊ ಹೇಗೆ?"

ಅವನು ಅವರ ಮಾತಿಗೆ ಏನು ಉತ್ತರ ಹೇಳಬಲ್ಲ!

"ಆ ಕಾಲದಲ್ಲಿ ಪವರ್‌ಹೌಸ್ ಅಪರೇಶನ್ನಿಗೆ ಮೊದಮೊದಲು ನಾನು ಬಂದಾಗ ಹೀಗೆಯೇ ಆಗುತ್ತಿತ್ತು. ಈಗಿನ ಹಾಗೆ ಆಗ ಆಟೋಮಾಟಿಕ್ಕೂ ಇಲ್ಲ, ಏನೂ ಇಲ್ಲ. ಮನೆಗೆ ಹೋದರೂ ಶಬ್ದ ನಿಲ್ಲುವ ಹಾಗಿಲ್ಲ. ಭ್ರಮೆ ಹಿಡಿದ ಹಾಗೆಯೇ. ಈ ಭಾರೀ ಶಬ್ದ ಕೇಳಿ ಕೇಳಿ ಮನೆಗೆ ಹೋದರೆ ಬೇಜಾರು. ಮುಂದಿನ ತಿಂಗಳು ಒಂದು ಕೆಲಸ ಮಾಡಿದೆ......."

ಅವರ ಮಾತುಗಳನ್ನು ಕೇಳುತ್ತಿದ್ದಂತೆ ಸಂಪತ್ತುವಿನ ತುಟಿಗಳ ಮೇಲೆ ತಿಳಿನಗೆಯ ಲಾಸ್ಯ. ಮತ್ತೆ ಆತ ಮಲಗಲು ಹೋಗಲಿಲ್ಲ. ಕಣ್ಣುಗಳನ್ನು ಭದ್ರವಾಗಿ ಮುಚ್ಚಿ ಕುಳಿತು, ನಾಳೆ ಊರಿಗೆ ಬರೆಯ ಬೇಕಾದ ಕಾಗದದ ಒಕ್ಕಣೆಯನ್ನು ಕುರಿತು ಮೆಲ್ಲಗೆ ಮೆಲುಕು ಹಾಕುತ್ತಿದ್ದಾನೆ.

"ಇಲ್ಲಿ, ಮೆಸ್ಸಿನಲ್ಲಿ ಊಟ ಸರಿಯಿಲ್ಲ. ಹೊಟ್ಟೆನೋವು. ಒಳ್ಳೆಯ ಊಟವೂ ಇಲ್ಲಿ ಇಲ್ಲ. ಒಂದು ಮದುವೆ ಮಾಡಿಕೊಂಡು ಬಿಡು ಎಂದು ಎಲ್ಲರೂ ಇಲ್ಲಿ ಹೇಳು ತ್ತಿದ್ದಾರೆ. ನನಗೆ ತಕ್ಕ ಹಾಗೆ ಚೆನ್ನಾಗಿರುವ ಒಂದು ಹುಡುಗಿ ಸಿಕ್ಕಿದರೆ......"

# ಕುಮಾರಪುರಂ ನಿಲ್ದಾಣ

ಕುಮಾರಪುರ ಎನ್ನುವುದು ಕಾಡಿನ ಮಧ್ಯೆ ಇರುವ ಒಂದು ರೈಲ್ವೆ ನಿಲ್ದಾಣ. ಅರ್ಧ ಮೈಲು ಸುತ್ತಮುತ್ತ ಅಲ್ಲಿ ಯಾವ ಊರೂ ಇಲ್ಲ. ಆದರೂ ನಿಲ್ದಾಣ ಎಂದು ಒಂದನ್ನು ಕಟ್ಟಿದ ಮೇಲೆ ಅದಕ್ಕೆ ಹೆಸರಿಡದೆ ಇರಲು ಸಾಧ್ಯವೆ? ಆ ಲೆಕ್ಕದಲ್ಲಿ ಅದನ್ನು ಕುಮಾರಪುರಂ ಎನ್ನುತ್ತಾರೆಯೇ ಹೊರತು, ಅಲ್ಲಿಂದ ಒಂದು ಮೈಲು ದೂರ ದಲ್ಲಿರುವ ಆ ಹೆಸರಿನ ಊರು, ಮುಕ್ಕಾಲು ಶತಮಾನಗಳಿಂದಲೂ ಇದನ್ನು ಬಹಿಷ್ಕಾರ ಹಾಕಿಬಿಟ್ಟಿಂತಿದೆ.

ಧಾತು ನಾಮ ಸಂವತ್ಸರದ ಕ್ಷಾಮದ ಸಮಯದಲ್ಲಿ, ಬರಗಾಲ ನಿವಾರಣೆಗಾಗಿ, ತಿರುಚಿನಾಪಳ್ಳಿಯಿಂದ ತಿರುನಲ್ವೇಲಿಯ ವರೆಗೆ ಈ ರೈಲುಮಾರ್ಗ ಹಾಕಿದ್ದೆಂದು ಹೇಳುತ್ತಾರೆ. ಆ ಮಾರ್ಗದಲ್ಲಿ ಕೋವಿಲ್‌ಪಟ್ಟಿಯಿಂದ ದಕ್ಷಿಣಕ್ಕೆ ಏಳು ಮೈಲುಗಳ ದೂರದಲ್ಲಿ ಈ ನಿಲ್ದಾಣ ಇದೆ. ಇದರ ಸುತ್ತುಮುತ್ತು ಇರುವ ಹಳ್ಳಿಯ ಮಕ್ಕಳು ವರ್ಷಕ್ಕೆ ಒಂದು ದಿನವೋ ಎರಡು ದಿನವೋ ಮಾತ್ರ ಗುಡಿ, ತೀರ್ಥ ಎಂದು ಯಾತ್ರೆ ಹೊರಡುತ್ತಾರೆ. ಆ ಹತ್ತು ಮೈಲುಗಳ ವಿಸ್ತಾರದಲ್ಲಿ ಒಂದು ಮಾರಿಗುಡಿಯೋ, ಒಂದು ಕಾಳಿಕಾ ದೇವಾಲಯವೋ ಇರುತ್ತದೆ. ಅಲ್ಲಿಗೆ ಹೋಗಿ ಪೂಜೆ ಮಾಡಿಸಿ ಬಂದ ರಾಯಿತು. ಈ ಕ್ಷೇತ್ರ ಯಾತ್ರೆಗಳಿಗೆ ರೈಲು ಬೇಕಾಗಿಲ್ಲ; ಮೋಟಾರೂ ಬೇಕಾಗಿಲ್ಲ. ಅಲ್ಲಿಗೆಲ್ಲ ಅವರಿಗೆ ಕಾಲ್ನಡಗೆಯೇ ಸರಿ. ಯಾರು ರೈಲಿನಲ್ಲಿ ಕುಳಿತು ಹಣವನ್ನು ಪೋಲುಮಾಡುತ್ತಾರೆ?

ಈ ನಿಲ್ದಾಣದ ಚರಿತ್ರೆಯಲ್ಲಿ ಪ್ರಥಮವಾಗಿ ರೈಲಿನಲ್ಲಿ ಪ್ರಯಾಣಮಾಡಿ ಬಂದಿಳಿ ದವರು ಸುಬ್ಬರಾಮ ಐಯ್ಯರ್ ಎಂದೇ ಹೇಳಬೇಕು. ಕೋವಿಲ್‌ಪಟ್ಟಿಯಿಂದ ಅವರು ಮೂರು ದಿನಗಳಿಗೆ ಮೊದಲು ಎಂದು ಬಂದಿದ್ದರು. ಹೊಸದಾಗಿ ವರ್ಗವಾಗಿ ಬಂದಿ ರುವ ಸ್ಟೇಷನ್‌ಮಾಸ್ಟರಿಗೆ ಅವರು ಬಾಲ್ಯ ಸ್ನೇಹಿತರು. ಸ್ವಲ್ಪಕಾಲದ ವರೆಗೆ ಸಹ ಪಾಠಿಯೂ ಕೂಡ. ದೂರದ ಸಂಬಂಧ ಬೇರೆ.

ಸ್ಟೇಷನ್ ಮಾಸ್ಟರ್ ತನ್ನ ಸ್ನೇಹಿತರಿಗೆ ಈ ಕಾಡಿನ ನಿಲ್ದಾಣದಲ್ಲಿ ಬರಮಾಡಿ ಕೊಂಡು ಅವರನ್ನು ಉಪಕಾರ ಮಾಡಲು ಈಗ ಒಂದು ಸಂದರ್ಭ ಬಂದಿದೆ. ಅವರ ಮಗನಿಗೆ ಈಗ ಆರು ವರ್ಷಗಳು ತುಂಬಿದ. ಅದನ್ನು ಒಂದು ಕಾರಣವಾಗಿ ಮಾಡಿ ಕೊಂಡು ಅವರು ಸ್ನೇಹಿತರನ್ನು ಆಹ್ವಾನಿಸಿದರು. ಸುಬ್ಬರಾಮ ಅಯ್ಯರ್ ಸಹ ನಾಲ್ಕು ದಿನ ಹಾಯಾಗಿ ಇದ್ದುಬರೋಣ ಎಂದವರೇ ಇಲ್ಲಿಗೆ ಬಂದರು.

ಮಗುವಿನ ಹುಟ್ಟುಹಬ್ಬಕ್ಕೆ ಬಂದ ನೆಂಟರು ಸುಬ್ಬರಾಮ ಅಯ್ಯರ್ ಒಬ್ಬರೇ. ಬಾಲ್ಯಸ್ನೇಹಿತರಾದ ಅವರು ಈಗ ತಮ್ಮ ಹಳೆಯ ನೆನಪುಗಳನ್ನು ತಮ್ಮೊಳಗೇ ವರ್ಗ

ವಾಗಿ ಬಂದ ಬಗೆಯನ್ನೂ, ಕುಟುಂಬದ ಕಷ್ಟಸುಖಗಳನ್ನೂ ಕುರಿತು ರಾತ್ರಿಯೆಲ್ಲ ಮಾತಾಡಿಕೊಳ್ಳುತ್ತಿದ್ದವರು, "ಕೋವಿಲ್‌ಪಟ್ಟಿಯಲ್ಲಿ ಸೌಕರ್ಯ ಹೇಗಿದೆ?" ಎಂದು ಸ್ಟೇಷನ್ ಮಾಸ್ಟರ್ ಕೇಳಿದರು. "ಕುಮಾರಪುರಂ ಸ್ಟೇಷನಿನಲ್ಲಿ ದಿನಗಳನ್ನು ಹೇಗೆ ಕಳೆಯುತ್ತೀರಿ?" ಎಂದು ಸುಬ್ಬರಾಮ ಐಯ್ಯರ್ ಕೇಳಿದರು.

ಹೀಗೆ ಒಂದು ದಿನ ಕಳೆಯಿತು.

ಮಾರನೆಯ ದಿನ ಆ ಸ್ಟೇಷನ್ ಮಾಸ್ಟರ್ ಆಗಾಗ್ಗೆ ತಮ್ಮ ಕೆಲಸವನ್ನು ಗಮನಿಸಲು ಸ್ನೇಹಿತರ ಹತ್ತಿರ ಅಪ್ಪಣೆ ತೆಗೆದುಕೊಂಡು ಹೋಗುತ್ತಿದ್ದರು. ಮಧ್ಯಾಹ್ನ ಮಿತ್ರರಿಲ್ಲದ ಸಮಯದಲ್ಲಿ ಅವರ ಮಗನ ಕೂಡೆ ತಮಾಷೆಮಾಡಿಕೊಂಡಿದ್ದರು ಸುಬ್ಬರಾಮ ಅಯ್ಯರ್.

ಮಕ್ಕಳೊಂದಿಗೆ ಆಟವಾಡುವುದೋ ಅವರನ್ನು ತಮ್ಮತ್ತ ಸೆಳೆದುಕೊಳ್ಳುವುದೋ ಅವರಿಗೆ ಅಭ್ಯಾಸವಿಲ್ಲದ ಕೆಲಸ. ಅವರ ಕೆಲಸವೆ ಇದಕ್ಕೆ ಕಾರಣವೊ ಏನೊ! ಇದ್ದರೂ ಅವರಿಗೆ ಮಾತಿನ ಸಹಾಯಕ್ಕೆ ಅವನೊಬ್ಬನೇ ಅಲ್ಲಿ ಇದ್ದವನು. ಅವನೊಂದಿಗೆ ಮಧ್ಯಾಹ್ನದ ವರೆಗೆ ಒಂದು ವಿಧವಾಗಿ ಅವರು ಕಾಲತಳ್ಳಿದರು. ಊಟವಾದ ಮೇಲೆ ಎರಡು ಗಂಟೆ ಸುಖವಾಗಿ ಮಲಗಿ ನಿದ್ದೆಮಾಡಿದರು. ಮೂರು-ಮೂರೂವರೆ ಗಂಟೆಗೆ ತಾವು ತೆಗೆದುಕೊಂಡು ಬಂದಿದ್ದ ಒಂದು ಪುಸ್ತಕವನ್ನು ಹಿಡಿದು ನಿಲ್ದಾಣಕ್ಕೆ ಬಂದು ಬಿಟ್ಟರು.

ಅಲ್ಲಿನ ಪ್ಲಾಟ್‌ಫಾರಂನಲ್ಲಿ ಐದಾರು ಬೇವಿನ ಮರಗಳು ಇದ್ದುವು. ಬೇಸಗೆಯಾದುದರಿಂದ ಅವುಗಳು ಹೂಬಿಟ್ಟು ಮರಗಳ ಸುತ್ತಲೂ ಉದುರಿ ಮನೋಹರವಾಗಿದ್ದುವು. ಮೆಲ್ಲಮೆಲ್ಲನೆ ಬೀಸಿ ಬಂದ ತಂಗಾಳಿಯಿಂದ ನಿಲ್ದಾಣ ಪರಿಮಳ ಸೂಸಿದಂತಿತ್ತು. ಆದುದರಿಂದ ಸ್ಟೇಷನ್ ಮಾಸ್ಟರ್ ಕೊಠಡಿಯಲ್ಲಿ ಗಾಳಿ ಬೀಸಿ ಬರುವ ಕಿಟಕಿಯ ಕಡೆ ಸುಬ್ಬರಾಯ ಅಯ್ಯರ್ ಆ ಪುಸ್ತಕವನ್ನು ಹಿಡಿದು ಬೆಂಚಿನ ಮೇಲೆ ಕುಳಿತರು.

ಸ್ವಲ್ಪ ಸಮಯದಲ್ಲಿ ದಕ್ಷಿಣದಿಂದ ಬಂದ ಒಂದು ಎಕ್ಸ್‌ಪ್ರೆಸ್ ಗಾಡಿ, ಮಾಮೂಲಿನಂತೆ ಆ ನಿಲ್ದಾಣದಲ್ಲಿ ನಿಲ್ಲದೆ ಹೊರಟು ಹೋಯಿತು. ಇನ್ನು ಮುಂದೆ ಸಂಜೆ ಆರು ಗಂಟೆಯ ಮೇಲಷ್ಟೆ ಗಾಡಿಗಳು ಬರುತ್ತವೆ. ಆದುದರಿಂದ ಸ್ಟೇಷನ್ ಮಾಸ್ಟರ್ ಈಗ ಮಿತ್ರರ ಬಳಿ ಬಂದು ಕುಳಿತರು. ಓದುತ್ತಿದ್ದ ಪುಸ್ತಕವನ್ನು ಮುಚ್ಚಿರದ ಸುಬ್ಬರಾಮ ಅಯ್ಯರ್ "ಈ ಸ್ಟೇಷನ್ನಿಗೆ ಪ್ರಯಾಣಿಕರು ಬರುವುದು ಉಂಟಲ್ಲವೊ?" ಎಂದು ಎಂದು ನಗುತ್ತ ಕೇಳಿದರು.

"ಬರದೇ ಏನು, ನಿನ್ನೆ ಕೂಡ ಒಬ್ಬ ಪ್ರಯಾಣಿಕರು ಬಂದು ಇಳಿದಿದ್ದಾರೆ" ಎಂದರು ಸ್ಟೇಷನ್ ಮಾಸ್ಟರ್.

ಸುಬ್ಬರಾಮ ಅಯ್ಯರ್ ದೀರ್ಘವಾಗಿ ನಗತೊಡಗಿದರು. ಯಾಕೆಂದರೆ, ನಿನ್ನೆ ಬಂದು ಇಳಿದ ಆ ಪ್ರಯಾಣಿಕ ಅವರೇ ಆಗಿದ್ದರು.

"ಇಂಥ ಸ್ಟೇಷನುಗಳು ಹತ್ತು ಇದ್ದರೆ ಸಾಕು. ಪ್ರತಿ ವರ್ಷ ರೈಲ್ವೆ ಬಜೆಟಿನಲ್ಲಿ ಕೊರತೆ ಬಿದ್ದುಕೊಂಡೇ ಇರುತ್ತದೆ."

"ಹಾಗೆ ಹೇಳುವುದಕ್ಕೂ ಸಾಧ್ಯವಿಲ್ಲ. ನಾಳೆ ಕೋವಿಲ್‌ಪಟ್ಟಿಯಲ್ಲಿ ಸಂತೆ ಇದೆ. ಹತ್ತು ಟಿಕೆಟ್‌ಗಳಾದರೂ ಖರ್ಚಾಗಬಹುದು."

"ಹಾಗಾದರೆ ನಾಳೆ ಸ್ಟೇಷನಿಗೆ ಎರಡು ರೂಪಾಯಿ ವರಮಾನ ಇದೆ ಎಂದ ಹಾಗಾಯಿತು."

ಇಬ್ಬರೂ ನಗೆಯಾಡಿದರು. ಆಗ ಪೋರ್ಟರ್ ಕರುಪ್ಪಯ್ಯ ಇವರಿಗೆ ಸಮೀಪವಾಗಿ ಬಂದು ಈ ಮಾತುಕತೆಗಳನ್ನು ಕೇಳುತ್ತಿದ್ದ.

"ಯಾತಕ್ಕಾಗಿ ಇಂಥ ಒಂದು ಸ್ಟೇಷನ್ ಎಂದು ಇಲ್ಲಿ ಕಟ್ಟಿದರೋ? ಇದು ಇಲ್ಲ ಎಂದು ಯಾರು ಅಳುತ್ತಿದ್ದರು?"

"ಈ ಸ್ಟೇಷನ್‌ನಿಂದ ನೆರೆಯ ಹಳ್ಳಿಗಳ ಜನರಿಗೆ ಬೇರೊಂದು ರೀತಿಯಲ್ಲಿ ಪ್ರಯೋಜನವಾಗುತ್ತ ಇದೆ. ಹೀಗೆ ಆಗುತ್ತ ಇದೆ ಎನ್ನುವುದನ್ನು ಇಲ್ಲಿಗೆ ವರ್ಗವಾಗಿ ಬಂದ ಮೇಲೆ ನಾನು ತಿಳಿದುಕೊಂಡಿದ್ದೇನೆ."

ಸುಬ್ಬರಾಯ ಅಯ್ಯರ್ ಕೇಳುತ್ತ ಕುಳಿತಿದ್ದರು. ಸ್ಟೇಷನ್ ಮಾಸ್ಟರ್ ಮುಂದುವರಿಸಿದರು:

"ಈಗ ಬೇಸಗೆಕಾಲವಾದುದರಿಂದ ಸುತ್ತಮುತ್ತಲಿನ ಹೊಲಗಳೆಲ್ಲ ಪೈರುಗಳಿಲ್ಲದೆ ಒಣಗಿ ನಿಂತಿವೆ. ಬೇರೆ ಸಮಯಗಳಲ್ಲಿ ಹೀಗೆ ಇರುವುದಿಲ್ಲ. ಇಲ್ಲಿನವು ನವಧಾನ್ಯಗಳೂ ಬೆಳೆಯುವ ಭೂಮಿಗಳು. ಹೊಲಗಳಲ್ಲಿ ಕೆಲಸಮಾಡುವವರು ಕುಡಿಯುವ ನೀರಿಗಾಗಿ ಮಣ್ಣಿನ ಪಾತ್ರೆಗಳನ್ನು ಹಿಡಿದು ಇಲ್ಲಿಗೆ ಬರುತ್ತಾರೆ. ಇಪ್ಪತ್ತು ಹರವೆ ನೀರಾದರೂ ಅವರಿಗೆ ಇಲ್ಲಿ ಸಿಕ್ಕುತ್ತದೆ. ಆ ಬಗೆಯಿಂದಾದರೂ ಈ ಸ್ಟೇಷನ್ ಪ್ರಯೋಜನಕ್ಕೆ ಬಂದಿದೆ."

"ಹಾಗಾದರೆ ಅರವಟ್ಟಿಗೆಗೆ ಬದಲಾಗಿ ಒಂದು ಸ್ಟೇಷನ್ ಕಟ್ಟಿದ್ದಾರೆ ಎಂದು ಹೇಳಿ."

ಸ್ಟೇಷನ್ ಮಾಸ್ಟರ್ ಈಗ ತಮಾಷೆಯನ್ನು ಬಿಟ್ಟು ಮನಃಪೂರ್ವಕವಾಗಿಯೇ ಹೇಳತೊಡಗಿದರು:

"ಹೀಗೆಯೆ ಒಂದು ಇರಬೇಕಾದ ಜಾಗದಲ್ಲಿ ಈ ಮನುಷ್ಯ ಮತ್ತೊಂದನ್ನು ಕಟ್ಟುತ್ತಾನೆ. ಯಾವುದೋ ಒಂದು ಪ್ರಯೋಜನಕ್ಕೆ ಎಂದದ್ದು, ಮತ್ತೊಂದು ರೀತಿಯಲ್ಲಿ ಉಪಯೋಗವಾಗುತ್ತದೆ. ನ್ಯಾಯವಾಗಿ ಕೆಲವು ಸಮಯ ಖರ್ಚುಮಾಡಿದ್ದು

ವಿಪರೀತವಾಗಿ ಬಿಡುತ್ತದೆ. ಪ್ರಪಂಚವೇ ಹೀಗಿರುವಾಗ ಈ ಸ್ಟೇಷನ್ ಬಗ್ಗೆ ಹೇಳಿದರೆ ಏನು ಪ್ರಯೋಜನ?"

"ಹೌದು. ಪ್ರಪಂಚವನ್ನೇ ನೀವು ಈ ಸ್ಟೇಷನ್ನಿನ ಕಿಟಕಿಯ ಮೂಲಕ ನೋಡು ತ್ತಿದ್ದೀರಿ. ಆರು ತಿಂಗಳ ಅವಧಿಯಲ್ಲಿ ಈ ಕಲ್ಲುಕಟ್ಟಡದ ಮೇಲೆ ನಿಮಗೆಂಥದೋ ಬಂಧ ಉಂಟಾಗಿದೆ. ಅದರಿಂದ ನನಗೆ ಆಶ್ಚರ್ಯವೂ ಆಗಿದೆ."

ಸ್ಟೇಷನ್ ಮಾಸ್ಟರ್ ಈಗ ಆವೇಶವಾಗಿ ಮಾತಾಡತೊಡಗಿದರು:

"ಕೋವಿಲ್‌ಪಟ್ಟಿಯಲ್ಲಿ ಒಂದು ಶಾಲೆ ಕಟ್ಟಿದ್ದಾರಲ್ಲ, ಯಾತಕ್ಕಾಗಿ ಕಟ್ಟಿದ್ದಾರೆ ಹೇಳಿ?"

"ಶಾಲೆಯನ್ನು ಯಾತಕ್ಕಾಗಿ ಕಟ್ಟುತ್ತಾರೆ? ನೂರು ಹುಡುಗರು ಓದಲಿ ಎಂದು."

"ಸರಿ, ಒಪ್ಪಿಕೊಳ್ಳುತ್ತೇನೆ. ನೂರು ಹುಡುಗರು ಯಾತಕ್ಕಾಗಿ ಓದುತ್ತಾರೆ?"

ಇಂಥ ಪ್ರಶ್ನೆಯನ್ನು ಯಾತಕ್ಕಾಗಿ ಕೇಳುತ್ತೀರಿ?" .

"ಬೇಕೆಂದೇ ಕೇಳುತ್ತಿದ್ದೇನೆ. ಹೇಳಿ."

"..................."

"ಮಕ್ಕಳ ವಿಕಾಸಕ್ಕೆ, ಅವರ ಬೆಳವಣಿಗೆಗೆ ಎಂದು ತಾನೇ ಹೇಳುತ್ತೀರಿ!"

"ನೀವು ಏನು ಕಾರಣ ಹೇಳುತ್ತೀರೋ?"

"ಯಾವ ಹುಚ್ಚನೂ ಈ ದೃಷ್ಟಿಯಿಂದ ತನ್ನ ಮಗನನ್ನು ಓದಿಸುವುದೇ ಇಲ್ಲ. ನಾನೂ ನೀವೂ ಜ್ಞಾನಾರ್ಜನೆಗಾಗಿ ಓದಿದೆವೊ? ಓದದವನಿಗೂ ಕೆಲಸ ಸಿಕ್ಕುತ್ತದೆ ಎಂದು ಸರಕಾರ ಸಾರಲಿ. ಯಾರಾದರೂ ಕಣ್ಣಲ್ಲಿ ಕಣ್ಣಿಟ್ಟು ಹುಡುಕಿದರೂ ನಿಮಗೆ ಸಿಗುವುದಿಲ್ಲ."

ಸುಬ್ಬರಾಮ ಅಯ್ಯರ್ ಈಗ ಮಾತಾಡಲಿಲ್ಲ. ಒಂದು ಸಲ ಪೋರ್ಟರನ ಕಡೆ ನೋಡಿದರು. ಮತ್ತೆ ಪುಸ್ತಕದ ಹಾಳೆಗಳನ್ನು ಮಗುಚಿದರು.

"ಯಾಕೆ ಮಾತಾಡದೆ ಇದ್ದೀರಾ?"

"ನಿಮ್ಮೊಂದಿಗೆ ಮಾತಾಡಿ ಜಯಿಸಲು ಸಾಧ್ಯವೊ? ಈ ಕುಮಾರಪುರಂ ಸ್ಟೇಷನು ಚಂದ್ರಸೂರ್ಯರು ಇರುವ ವರೆಗೆ ದೀರ್ಘವಾಗಿ ಬಾಳಲಿ" ಎಂದರು ಅಯ್ಯರ್.

ಸ್ಟೇಷನ್ ಮಾಸ್ಟರ್ ಈಗ ಪೋರ್ಟರನನ್ನು ಕರೆದು "ಕರುಪ್ಪಯ್ಯಾ, ಮನೆಗೆ ಹೋಗಿ ಕಾಫಿ ಮಾಡುವುದಕ್ಕೆ ಹೇಳು" ಎಂದರು.

"ನಾವೇ ಹೋಗಬಹುದಲ್ಲ" ಎಂದರು ಅಯ್ಯರ್.

ಬಳಿಕ ಅವರೀರ್ವರೂ ಎದ್ದು ಮನೆಯ ಕಡೆ ಹೆಜ್ಜೆ ಹಾಕತೊಡಗಿದರು.

ಮೂರನೆಯ ದಿನ ಬೆಳಗಿನ ಎಂಟು ಗಂಟೆಗೆ ಉತ್ತರಕ್ಕೆ ಹೋಗುವ ಒಂದು ಪಾಸೆಂಜರ್ ಗಾಡಿ ಇತ್ತು. ಆವೊತ್ತು ಸೋಮವಾರ. ಕೋವಿಲ್‌ಪಟ್ಟಿ ಸಂತೆಗೆ

ಹೋಗಲು ನಾಲ್ಕಾರು ಜನ ಅಂದು ಏಳು ಗಂಟೆಗೇ ಸ್ಟೇಷನ್ನಿಗೆ ಬಂದಿದ್ದು, ಗೋಣೀ ಚೀಲ ಸುತ್ತಿದ ಸುರುಳಿಯನ್ನು ಹೊತ್ತು ಅಲ್ಲಿದ್ದ ಕಲ್ಲುಬೆಂಚಿನ ಮೇಲೆ ಕುಳಿತು ಎಲೆ ಅಡಿಕೆ ಹೊಗೆಸೊಪ್ಪು ಹಾಕಿಕೊಳ್ಳುತ್ತ ಅದು ಇದು ಮಾತಾಡುತ್ತ ಕುಳಿತುಕೊಂಡಿದ್ದರು. ಏಳೂಕಾಲು ಗಂಟೆಗೆ ಸುಬ್ಬರಾಮ ಅಯ್ಯರ್ ಸಹ ಫಲಾಹಾರ ಮುಗಿಸಿ, ಆ ಪ್ಲಾಟ್ ಫಾರಮ್ಮಿನಲ್ಲಿ ಬೇವಿನ ಮರದ ಕೆಳಗೆ, ಕಲ್ಲುಬೆಂಚಿನ ಮೇಲೆ ಕುಳಿತು, ನಿನ್ನೆ ನಿಲ್ಲಿಸಿದ್ದ ಜಾಗದಿಂದ ಓದಲು ಪ್ರಾರಂಭಿಸಿದರು. ಆದರೆ ಹಳ್ಳಿಯವರ ಸ್ವಾಭಾವಿಕವಾದ ಮಾತುಕತೆಗಳಿಂದ ಅವರ ಓದಿಗೆ ಭಂಗಬಂದಿತು. ಸುಗಂಧವಾದ ಬೇವಿನ ಮರದ ಗಾಳಿಯೂ ಅವರ ಗಮನವನ್ನು ಬೇರೆಡೆಗೆ ಹರಿಸಿತು.

"ಈ ಕಾಡಿನಲ್ಲಿಯೂ ಇಂಥ ಸೌರಭ! ಹಿತವಾದ ತಂಗಾಳಿ, ಸುತ್ತ ನೋಡಿದರೆ ಕಪ್ಪು ಮಣ್ಣಿನ ಭೂಮಿ. ಈ ಮಣ್ಣಿನಲ್ಲಿ ಕೆಲವು ಮರಗಳು ಬೆಳೆದು ಸುಗಂಧವನ್ನು ಬೀರುತ್ತಿವೆ. ಈ ಸುಗಂಧ ಸಹ ಈ ಮಣ್ಣಿನಲ್ಲಿಯೇ ಉತ್ಪತ್ತಿಯಾಗಿದೆ."

ಅವರ ನೋಟ ದೂರದಲ್ಲಿರುವ ಗ್ರಾಮಗಳತ್ತ ಹರಿಯಿತು.

'ಈ ಗ್ರಾಮಗಳಲ್ಲಿ ವಾಸಿಸುವ ನೂರಾರು ಗಂಡಸರೂ ಹೆಂಗಸರೂ ಈ ಮಣ್ಣನ್ನು ನಂಬಿಯೇ ಜೀವಿಸುತ್ತಾರೆ. ಇದು ಅವರಿಗೆ ಅನ್ನವನ್ನೂ ಜೀವವನ್ನೂ ಕೊಡುತ್ತಿದೆ......'

ಅಯ್ಯರ ಚಿಂತೆಗಳೆಲ್ಲವೂ ಅವರು ಓದುತ್ತಿದ್ದ ಪುಸ್ತಕಗಳ ವಾಕ್ಯಗಳಂತೆಯೇ ಇದ್ದುವು. ಪುಸ್ತಕವನ್ನು ಓದುತ್ತಿದ್ದ ಹಾಗೆಯೇ ಅವರ ಭಾವನೆಗಳು ಗರಿಗೆದರಿದುವು. ಆಗ ಪೂರ್ವದ ದಿಕ್ಕಿನಿಂದ ನಾಲ್ಕಾರು ಜನ ಈ ನಿಲ್ದಾಣದ ಕಡೆ ಓಡುತ್ತೋಡುತ್ತ ಬರುತ್ತಿರುವುದು ಕಂಡುಬಂದಿತು.

'ಗಾಡಿ ಹೊರಡಲು ಇನ್ನೂ ಸಮಯವಿದೆ. ಇವರು ಯಾಕೆ ಹೀಗೆ ಓಡಿಬರುತ್ತಿದ್ದಾರೆ?' ಎಂದು ಅಯ್ಯರ್ ಭಾವಿಸಿದರು. ಅವರಿಗೆ ಇದು ವಿಚಿತ್ರವಾಗಿ ಕಾಣಿಸಿತು. ಕೆಲವರು ಗಾಡಿ ಹೊರಡುವುದಕ್ಕೆ ಮೊದಲೇ ಒಂದು ಗಂಟೆಯಿಂದಲೂ ಕಾದು ಕುಳಿತಿರುತ್ತಾರಲ್ಲ.

'ಕಪಟವರಿಯದ ಮಕ್ಕಳು' ಎಂದು ಅಯ್ಯರ್ ತಮಗೆ ತಾವೇ ಹೇಳಿಕೊಂಡರು.

ಬೇವಿನ ಗಾಳಿ ಹಿತವಾಗಿ ಬೀಸಿಕೊಂಡೇ ಇತ್ತು. ಈ ಗಾಳಿಗಾಗಿ ಬೇಸಿಗೆಯನ್ನು ಇಲ್ಲಿಯೇ ಕಳೆಯಬಹುದಲ್ಲ ಎಂದೂ ಅವರಿಗೆ ಎನ್ನಿಸಿತು. ಈ ಕಾರಣದಿಂದ, ಅಲ್ಲಿನ ಗಿಡ ಮರಗಳೆಲ್ಲ ಹೂಬಿಟ್ಟು ಚಿಗುರಾಗುವುದನ್ನು ನೋಡಿ ಅವರಿಗೆ ಹೆಮ್ಮೆಯೆನಿಸಿತು. ಇನ್ನು ಸ್ವಲ್ಪ ಸಮಯದಲ್ಲಿ ರೈಲು ಹತ್ತಿ ಇಲ್ಲಿಂದ ಹೊರಟುಬಿಡುತ್ತೇನಲ್ಲ ಎನ್ನುವ ಸಂಕಟವೂ ಆಯಿತು.

'ಮಾನವರು ಎಲ್ಲೆಲ್ಲಿಯೋ ಬಾಳಿ ಬದುಕುತ್ತಾರೆ. ಕೆಲವರು ಮಾನವರಾಗಿಯೂ ಬಾಳುತ್ತಾರೆ.'

ಇಬ್ಬರು ಮೂವರು ಈಗ ಅಲ್ಲಿ ಬಂದವರೆ ಆ ಸಿಗ್ನಲ್‌ಗೆ ಅನತಿ ದೂರದಲ್ಲಿ ಕುಳಿತರು. ಅವರಲ್ಲೊಬ್ಬ ತಾನು ದನ ತೆಗೆದುಕೊಂಡ ವಿಷಯವನ್ನು ವಿಸ್ತಾರವಾಗಿ ಹೇಳುತ್ತಿದ್ದ. ಉಳಿದವರು ಹೂಂಗುಟ್ಟುತ್ತಿದ್ದರು.

ಸುಬ್ಬರಾಮ ಅಯ್ಯರ್ ಅವರ ಮಾತನ್ನು ಕಿವಿಯಿಟ್ಟು ಆಲಿಸಿದರು. ಆ ಮಾತು ಗಳಲ್ಲಿ ನಿಜ ಅಷ್ಟೇ ಅಲ್ಲ, ಸ್ವಾರಸ್ಯವೂ ಅಡಗಿದೆ ಎನ್ನುವುದನ್ನು ಅವರು ಕಂಡುಹಿಡಿದರು. ಅವರನ್ನು ಸಮೀಪ ಬರಮಾಡಿಕೊಂಡು ಅವರ ಜೀವನ ವಿಧಾನವನ್ನೂ ಕೇಳಿ ತಿಳಿದುಕೊಳ್ಳಬೇಕು ಎಂದೂ ಅವರಿಗೆ ಅನ್ನಿಸಿತು.

ಅರ್ಧ ಮೈಲಿ ದೂರದಿಂದ ಬಿಳಿಯ ಬಟ್ಟೆಗಳನ್ನು ಧರಿಸಿ ಧಾವಿಸಿ ಬಂದವರಲ್ಲಿ ನಾಲ್ವರು ಹುಡುಗರೂ ಒಬ್ಬ ಹಿರಿಯರೂ ಇದ್ದರು. ಈ ಹಿರಿಯರು ಈಗ ಏದುತ್ತ ಏದುತ್ತ "ಟಿಕೆಟ್ ಕೊಟ್ಟಾಯಿತೊ?" ಎಂದು ಕೇಳಿದರು.

ಮಾತಾಡುತ್ತ ನಿಂತಿದ್ದವರಲ್ಲಿ ಒಬ್ಬ "ಇಲ್ಲ" ಎಂದ.

ಎಲ್ಲರೂ ಉಸ್ ಎಂದು ನಿಡುಸುಯ್ದರು. ಆ ನಾಲ್ವರು ಬಾಲರ ಕಣ್ಣುಗಳೂ ಈಗ ಬೇವಿನ ಮರದಡಿಯಲ್ಲಿ ಕುಳಿತಿದ್ದ ಅಯ್ಯರನ್ನು ದಿಟ್ಟಿಸಿದುವು. ನೋಡಿದೊಡನೆ ಮರ್ಯಾದೆ ಸಲ್ಲಿಸುವ ರೀತಿಯಲ್ಲಿ ಅಯ್ಯರ್ ಇದ್ದರು. ಇಂಥವರನ್ನು ಆ ಬಾಲರು ವರ್ಷಕ್ಕೊಮ್ಮೆಯೂ ನೋಡುವುದು ಅಪರೂಪ. ಯಾವಾಗಲಾದರೊಮ್ಮೆ ಬರುವ ಸ್ಕೂಲ್ ಇನ್ಸ್‌ಪೆಕ್ಟರು ಹೀಗೆಯೇ ಇರುತ್ತಾರೆ. ಕಾಲಲ್ಲಿ ಬೂಟು, ಕೂಲಿಂಗ್ ಗ್ಲಾಸು, ಮೇಲು ಅಂಗವಸ್ತ್ರ, ಅಯ್ಯರಿಗೆ ತಲೆಕೂದಲು ಸಹ ಪೂರಾ ಇಲ್ಲದೆ ಅದೂ ಲಕ್ಷಣವಾಗಿಯೇ ಇದೆ.

ತಮ್ಮನ್ನೆಲ್ಲ ದಿಟ್ಟಿಸುವ ಆ ಬಾಲಕರನ್ನು ಅಯ್ಯರೂ ಗಮನಿಸಿದರು. ಆ ನಾಲ್ವರೂ ಹೆಚ್ಚುಕಡಿಮೆ ಒಂದೇ ಪ್ರಾಯದವರು. ಅವರು ಪ್ರತಿಯೊಬ್ಬರ ಕೈಯಲ್ಲಿಯೂ ಎರಡು ಮೂರು ಪುಸ್ತಕಗಳೂ ಬಿಳಿಯ ಹಾಳೆಗಳೂ ಇದ್ದುವು. ಜೇಬುಗಳಲ್ಲಿ ಪೆನ್ನು, ಪೆನ್ಸಿಲು. ಅವರನ್ನು ಶಾಲೆಯ ಬಾಲಕರು ಎಂದು ಧಾರಾಳವಾಗಿ ಹೇಳಬಹುದು.

ಆ ಬಾಲಕರೂ ಅಯ್ಯರೂ ಪರಸ್ಪರ ನೋಡಿಕೊಂಡರೂ ಮಾತಾಡಿಸುವುದಕ್ಕೆ ಪ್ರಯತ್ನಿಸಲಿಲ್ಲ. ಈ ಸಮಯದಲ್ಲಿ ತೋಳುಮರ ಕೆಳಗಿಳಿಯಿತು. ಸ್ಟೇಷನ್ ಮಾಸ್ಟರ್ ಬಂದು ಟಿಕೆಟ್ಟಿನೊಂದಿಗೆ ಅಯ್ಯರ ಬಳಿ ಬಂದರು.

"ಈ ಜಾಗ ನಿಮಗೆ ತುಂಬಾ ಹಿಡಿಸಿದೆ ಎಂದು ಕಾಣುತ್ತದೆ. ಬಹಳ ಹೊತ್ತಿನಿಂದ ಇಲ್ಲಿಯೇ ಕುಳಿತುಬಿಟ್ಟಿರಲ್ಲ."

"ಒಳ್ಳೆಯ ಗಾಳಿ" ಎಂದರು ಅಯ್ಯರ್. ಟಿಕೆಟ್ಟನ್ನೂ ತೆಗೆದುಕೊಂಡರು.

"ಹಾಗಾದರೆ ಮುಂದಿನ ರಜೆಗೆ ಇಲ್ಲಿಗೇ ಬಂದುಬಿಡಿ. ಮೂರು ದಿನಗಳಲ್ಲಿ ಹೊರಟು ಬಿಡುವ ಹಾಗಿರದೆ ಸೇರಿದ ಹಾಗೆ ಒಂದು ಹತ್ತು ದಿವಸ ಬಂದು ಇದ್ದು ಹೋಗುವಿರಂತೆ."

"ಹಾಗೆಯೇ ಆಗಲಿ. ಹತ್ತು ದಿನಗಳು ತಾನೆ? ಶ್ರೀರಾಮ ಹದಿನಾಲ್ಕು ವರ್ಷಗಳು ಸೇರಿದ ಹಾಗೆ ವನವಾಸ ಮಾಡಿರುವಾಗ, ನಾನು ಹತ್ತು ದಿನಗಳು ಇಲ್ಲಿರಲು ಆಗದೇ ಹೋಗುತ್ತದೇನು?"

"ಆ ವನವಾಸದಲ್ಲಿ ಅಲ್ಲವೊ ಶ್ರೀರಾಮ ತನ್ನ ಪ್ರಾಣಸಖರನ್ನು ಸಂಪಾದಿಸಿದ್ದು. ಹಾಗೂ ಅಲ್ಲದೆ ಶ್ರೀರಾಮನ ವ್ಯಕ್ತಿತ್ವ ಬೆಳಗಿದುದೇ ಆ ವನವಾಸದಿಂದ."

"ಅಂತೂ ಶಾಲೆಬಿಟ್ಟ ಮೇಲೆ ನೀವು ಪುರಾಣ ಕತೆಗಳನ್ನು ಚೆನ್ನಾಗಿ ಅಭ್ಯಾಸ ಮಾಡಿದ್ದೀರಿ" ಎಂದರು ಸುಬ್ಬರಾಮ ಅಯ್ಯರ್. ಆದರೂ ತಮ್ಮ ಮಿತ್ರರ ಮಾತಿನಲ್ಲಿ ಸತ್ಯಾಂಶವಿದೆ ಎಂದೇ ಅವರಿಗನ್ನಿಸಿತು.

ಮತ್ತೆ ಮಾತಾಡಲು ಅವಕಾಶವಿಲ್ಲ. ಗಾಡಿ ಬರುವ ಸಮಯವಾದುದರಿಂದ ಸ್ಟೇಷನ್ ಮಾಸ್ಟರ್ ಒಳಗೆ ನಡೆದರು. ಆ ಬಾಲಕರನ್ನು ಇಲ್ಲಿ ಬಿಟ್ಟು ಹಿರಿಯರು ಟಿಕೆಟ್ಟುಗಳನ್ನು ಕೊಂಡುಬಂದರು. ಎಲ್ಲ ಪ್ರಯಾಣಿಕರೂ ಈಗ ಟಿಕೆಟ್ಟುಗಳನ್ನು ತೆಗೆದುಕೊಂಡು ಪ್ಲಾಟ್‌ಫಾರಮ್ಮಿನಲ್ಲಿ ಸಿದ್ಧವಾಗಿ ನಿಂತಿದ್ದರು.

ಸಮಯಕ್ಕೆ ಸರಿಯಾಗಿ ಗಾಡಿಯೂ ಬಂದುಬಿಟ್ಟಿತು. ಅಯ್ಯರ್ ಹತ್ತಿದ ಬೋಗಿಯಲ್ಲಿಯೆ ಆ ದೊಡ್ಡವರೂ ಬಾಲಕರೂ ಒಬ್ಬರ ಹಿಂದೆ ಒಬ್ಬರು ಹತ್ತಿಕೊಂಡರು. ಬೋಗಿಯಲ್ಲಿ ತುಂಬಾ ಖಾಲಿ ಜಾಗ ಇದೆ. ಕಿಟಕಿಯ ಬಳಿ ಒಂದೆಡೆ ಅಯ್ಯರ್ ಹೋಗಿ ಕುಳಿತರು. ಅದರ ಎದುರು ಬೆಂಚಿನಲ್ಲಿ ಆ ಬಾಲಕರು ಕುಳಿತರು. ಆ ಕಡೆ ಒಬ್ಬ ಹೆಂಗಸು. ಅವಳ ಬಳಿ ಎಂಥೆಂಥದೊ ಗಂಟುಮೂಟೆಗಳು.

ಕುಮಾರಪುರಂ ನಿಲ್ದಾಣವನ್ನು ಬಿಟ್ಟು ಗಾಡಿ ಹೊರಟಿತು.

ಆ ಬಾಲಕರು ಎರಡೂ ಕಡೆಯ ಕಿಟಕಿಗಳಲ್ಲಿ ತಲೆಹಾಕಿ ಹೊರಗಿನ ಮರಗಿಡ ಬಳ್ಳಿಗಳು ಓಡಿಹೋಗುತ್ತಿರುವ ಬಗ್ಗೆ ಆಶ್ಚರ್ಯವನ್ನು ವ್ಯಕ್ತಪಡಿಸಿಯೂ ಮಾತನಾಡುತ್ತಲೂ ಇದ್ದರು. ಆ ಬಾಲಕರನ್ನು ಕಂಡು ಸುಬ್ಬರಾಮ ಅಯ್ಯರಿಗೆ ತಮ್ಮ ಬಾಲ್ಯದ ನೆನಪುಗಳು ಮರುಕಳಿಸಿ ಬಂದುವು. ಅವರೊಂದಿಗೆ ಏನಾದರೂ ಮಾತಾಡಬೇಕೆಂದು ಅವರಿಗೆ ಆಸೆ. ಆದರೆ ಚಿಕ್ಕವರೆಂದ ಮಾತ್ರಕ್ಕೆ ಕಂಡಹಾಗೆ ಏನಾದರೂ ಮಾತಾಡಲು ಸಾಧ್ಯವೆ? ಅವರಿಗೆ ಅದು ಸ್ವಲ್ಪ ತೊಂದರೆಯೇ.

ಆದರೆ ಮತ್ತೊಂದು ಕಿಟಕಿಯ ಬಳಿ ಭೂತಾಕಾರವಾಗಿ ಕುಳಿತಿದ್ದವರೊಂದಿಗೆ ಇಂಥ ತೊಂದರೆಯೇನೂ ಆಗಲಿಲ್ಲ. ಅವರು ಹುಡುಗರನ್ನು ಉದ್ದೇಶಿಸಿ ಧಾರಾಳವಾಗಿ ಮಾತಾಡಿದರು:

"ಏನ್ರೋ, ಎಲ್ಲಿಗೆ ಪ್ರಯಾಣ?"

ಅವರ ದನಿ ಶರೀರದ ಗಾತ್ರಕ್ಕೆ ಪೈಪೋಟಿಯೇನೋ ಎಂಬಂತಿತ್ತು.

ಆದಕ್ಕೆ ಉತ್ತರ ಏನು ಹೇಳಬೇಕೆಂದು ಬಾಲಕರಿಗೆ ತಿಳಿಯಲಿಲ್ಲ ಎಂದು ಕಾಣುತ್ತದೆ. ಆ ಹಿರಿಯರು ಬಾಲಕರ ಪರವಾಗಿ ಉತ್ತರಕೊಟ್ಟರು:

"ಕೋವಿಲ್‌ಪಟ್ಟಿಯಲ್ಲಿ ದೊಡ್ಡ ಸ್ಕೂಲಿನಲ್ಲಿ ಸೇರಲು ಹೋಗುತ್ತಿದ್ದಾರೆ."

ಬಾಲಕರು ಮೇಲೆ ಕೆಳಗೆ ಅವರನ್ನು ನೋಡತೊಡಗಿದರು. ಅವರ ಕಿವಿಗಳಲ್ಲಿದ್ದ ವಜ್ರದ ಕಡುಕು. ಷರ್ಟಿಗೆ ಹಾಕಿದ್ದ ಚಿನ್ನದ ಗುಂಡಿಗಳು, ಇಷ್ಟಗಲದ ಕೈಗಡಿಯಾರ ಇವೆಲ್ಲವೂ ಅವರಿಗೆ ಆಕರ್ಷಿತವಾಗಿದ್ದುವು.

"ಯಾವ ತರಗತಿಯಲ್ಲಿ ಸೇರಲು ಹೋಗುತ್ತಾರೆ?"

"ನಮ್ಮ ಊರಿನಲ್ಲಿ ಆರು ಪಾಸುಮಾಡಿದ್ದಾರೆ. ಅಲ್ಲಿ ಏಳರಲ್ಲಿ ಹೋಗಿ ಸೇರಿಸಬೇಕು-

"ಯಾವ ಊರಿನ ಹುಡುಗರು?"

"ಇಡೈಸೇವಲ್ ಗ್ರಾಮ."

"ಇಡೈಸೇವಲೊ? ಅಲ್ಲಿ ಏಳನೆಯ ತರಗತಿ ಇಲ್ಲವೊ?"

"ಇಲ್ಲ, ಸರಕಾರಕ್ಕೆ ಬರೆದುಕೊಂಡದ್ದು ಆಗಿದೆ."

"ಆರು ಪಾಸುಮಾಡಿದ್ದಕ್ಕೆ ಸರ್ಟಿಫಿಕೇಟು ಇದೆಯೋ?"

"ಇದೆ."

"ಇದ್ದರೂ ಪರೀಕ್ಷೆಮಾಡಿಯೇ ಸೇರಿಸುತ್ತಾರೆ."

"ಅದಕ್ಕಾಗಿಯೇ ಹೆಡ್ಮಾಸ್ಟರಿಂದ ಒಂದು ತಿಂಗಳು ಪುನಪಾಠ ಹೇಳಿಸಿದ್ದು ಆಗಿದೆ."

ಆ ಭೂತಾಕಾರದ ಮನುಷ್ಯ ಒಬ್ಬ ಹುಡುಗನನ್ನು ಕುರಿತು "ಲೋ. ನಾನು ಮೂರು ಪ್ರಶ್ನೆಗಳನ್ನು ಕೇಳುತ್ತೇನೆ. ನೀನು ಸಮಂಜಸವಾಗಿ ಉತ್ತರ ಹೇಳಿದರೆ ಏಳನೆಯ ತರಗತಿಗೆ ಸೇರಲು ಲಾಯಕ್ಕಾಗಿದ್ದೀಯ ಅಂತ ಎಂದವರೇ "ವಾಟ್ ಈಸ್ ಯುವರ್ ನೇಮ್?" ಎಂದು ಪ್ರಶ್ನೆಹಾಕಿದರು.

"ಮೈ ನೇಮ್ ಈಸ್ ವಿಶ್ವನಾಥನ್."

"ವಾಟ್ ಈಸ್ ಯುವರ್ ಫಾದರ್ ನೇಮ್?"

"ಮೈ ಫಾದರ್ ನೇಮ್ ಈಸ್ ರಾಮಸ್ವಾಮಿ ನಾಯಿಡು."

"ವಾಟ್ ಕ್ಲಾಸ್ ಯೂ ಪಾಸ್?"

ಅವರು ತಪ್ಪು ತಪ್ಪಾಗಿ ಇಂಗ್ಲೀಷು ಮಾತನಾಡುತ್ತಿರುವುದನ್ನು ನೋಡಿ ಸುಬ್ಬ ರಾಮ ಅಯ್ಯರ್ ತನ್ನೊಳಗೇ ನಗೆಯಾಡಿಕೊಂಡರು.

"ಸಿಕ್ಸ್ತ್ ಕ್ಲಾಸ್."

"ಸಾಕು, ಕಣೋ. ತುಂಬಾ ಹುಷಾರಾಗಿದ್ದೀಯ. ಏಳನೆಯ ಕ್ಲಾಸಿಗೆ ಧಾರಾಳವಾಗಿ ಸೇರಬಹುದು."

ಬಾಲಕರಿಗೆ ತುಂಬಾ ಸಂತೋಷ.

ಆ ಹಿರಿಯರು ಆ ಭಾರೀ ಆಸಾಮಿಯನ್ನು ಕುರಿತು ಹೇಳಿದರು:

"ಬಾಕಿ ಹುಡುಗರನ್ನು ಏನಾದರೂ ಕೇಳಿ ಸ್ವಾಮಿ."

"ನಮ್ಮ ಇಂಗ್ಲೀಷು ಅಷ್ಟೇ. ಅದಕ್ಕೆ ಮೇಲೆ ನಮ್ಮ ಮೇಷ್ಟ್ರು ಹೇಳಿಕೊಡಲಿಲ್ಲ." ಎಂದವರೇ ಆತ ಗಣಗಣವೆಂದು ನಗೆಯಾಡಿದರು.

ಅವರ ಸನಿಹದಲ್ಲಿ ಕುಳಿತಿದ್ದ ಅವರ ಪತ್ನಿಯೂ ಸುಬ್ಬರಾಮ ಅಯ್ಯರೂ ಸಹ ತಮ್ಮೊಳಗೇ ನಕ್ಕರು.

"ತಮಗೆ ಯಾವ ಊರು" ಎಂದು ವಿಚಾರಿಸಿದರು ಆ ಗ್ರಾಮದ ಹಿರಿಯ.

"ತಿರುನಲ್ವೇಲಿ ಜಂಕ್ಷನ್‌ನಲ್ಲಿ 'ಪಂಕಜ ವಿಳಾಸ ಕಾಫಿ ಕ್ಲಬ್ಬು' ಹಾಗೆಂತ ಇದೆಯಲ್ಲ. ಅದು ನಮ್ಮದೇ. ನೀವೂ ನೋಡಿರಬೇಕಲ್ಲ."

"ನಾನು ಸಣ್ಣವನಿದ್ದಾಗ ಒಂದು ಸಲ ತಿರುನಲ್ವೇಲಿಗೆ ಹೋಗಿದ್ದೆ ಅಷ್ಟೆ."

"ಅದು ನಮ್ಮ ಹೊಟೇಲೇ. ಇಂಥ ಹುಡುಗರು ನಮ್ಮಲ್ಲಿ ಸಾವಿರ ಜನ ಊಟಮಾಡಿ ಓದುತ್ತಿದ್ದಾರೆ. ಜಂಕ್ಷನ್‌ನಲ್ಲಿ ಕಾಲೇಜು ಹುಡುಗರು ನಮ್ಮ ಹೊಟೇಲನ್ನು ಬಿಟ್ಟು ಬೇರೆಲ್ಲಿಯೂ ಹೋಗುವುದಿಲ್ಲ. ಇಪ್ಪತ್ತೈದು ವರ್ಷಗಳಿಂದ ನಾವು ನಡಸ್ತಾ ಇದ್ದೇವೆ."

"ಹೌದು, ತಮ್ಮ ಹೊಟೇಲು ಬಿಟ್ಟು ಬೇರೆ ಎಲ್ಲಿಗೆ ಹೋಗ್ತಾರೆ?"

ಈಗ ಅವರು ಆ ಬಾಲಕರತ್ತ ತಿರುಗಿ "ಏನ್ರೋ ನೀವು ಕಾಲೇಜಿಗೆ ಹೋಗೋವಾಗ ನಮ್ಮ ಹೊಟೇಲಿಗೇ ಊಟಕ್ಕೆ ಬರಬೇಕು" ಎಂದರು.

ಆ ಬಾಲಕರಿಗೆ ಉಂಟಾದ ಸಂತೋಷ ಅಷ್ಟಿಷ್ಟಲ್ಲ. ತಮ್ಮ ಬಳಿ ಒಬ್ಬರು ಹೀಗೆ ಧಾರಾಳವಾಗಿ ಮಾತಾಡುತ್ತಿರುವುದರಿಂದ ಅವರಿಗೆ ತುಂಬಾ ಖುಶಿ.

"ತಮಗೆ ಎಷ್ಟು ಜನ ಮಕ್ಕಳು ಸ್ವಾಮಿ?"

"ನಮ್ಮ ಹೊಟೇಲಿನಲ್ಲಿ ಊಟಮಾಡುತ್ತಿರುವವರು ಎಲ್ಲರೂ ನಮ್ಮ ಮಕ್ಕಳೇ."

ಹಿರಿಯರಿಗೆ ಆ ಮಾತು ಸರಿಯಾಗಿ ಅರ್ಥವಾಗಲಿಲ್ಲ. ಇದನ್ನು ಆ ಹೊಟೇಲಿನವರು ಗಮನಿಸಿದರು. ಇದ್ದರೂ ಅವರ ಪ್ರಶ್ನೆಗೆ ಉತ್ತರ ಹೇಳುವ ಸಲುವಾಗಿ "ಸ್ವಂತ ಮಕ್ಕಳಿಗೆ ಹಣ ತೆಗೆದುಕೊಂಡು ಯಾರು ಊಟ ಹಾಕ್ತಾರೆ? ಎಂದು ನೀವು ಭಾವಿಸಬಹುದು. ಏನು ಮಾಡೋದು? ಹೊಟೇಲಿನವರು ಧರ್ಮ ಮಾಡೋಕೆ ಸಾಧ್ಯವಿಲ್ಲ. ಆದರೆ ನಾನು ಸಾಧ್ಯವಾದಷ್ಟೂ ಧರ್ಮಮಾಡಿಕೊಂಡೇ ಇದ್ದೇನೆ. ಎಷ್ಟೋ ಹುಡುಗರಿಗೆ ಸ್ಕೂಲು ಫೀ ಕಟ್ಟಲು ನಾನೇ ಹಣ ಕೊಟ್ಟಿದ್ದೇನೆ. ಅದರಲ್ಲಿ ಕೆಲವರು ಹಿಂದಿರುಗಿಸಿದ್ದಾರೆ. ಅನೇಕರು ಹಿಂದಿರುಗಿಸಿಲ್ಲ."

ಹಾಗೆ ಹೇಳಿದವರೆ ಆ ಹೊಟೇಲ್ ಮ್ಯಾನೇಜರು ತೃಪ್ತಿಯ ನಗೆ ಬೀರುತ್ತ ಹೆಂಡತಿಯತ್ತ ತಿರುಗಿದರು. ಮರುಕ್ಷಣದಲ್ಲಿ ಆಕೆ ತಿಂಡಿಯ ಪೊಟ್ಟಣವನ್ನು ಅವರ ಮುಂದೆ ಇಟ್ಟಳು.—ಹೌದು, ಅದನ್ನು ಅವರು ತಿನ್ನುವುದಕ್ಕಾಗಿಯೇ.

ಮತ್ತೆ ಆ ಗ್ರಾಮದ ಹಿರಿಯರು ಬಿಡಲಿಲ್ಲ. ಪ್ರಶ್ನೆ ಹಾಕಿದರು,

"ಬಹಳ ದೂರ ಪ್ರಯಾಣವೊ?"

"ಮಧುರೆಗೆ ಹೋಗುತ್ತ ಇದ್ದೇವೆ. ಅಲ್ಲಿ ನಮ್ಮವರದು ಒಂದು ಮದುವೆ."

ಮತ್ತೆ ಅದೇ ಪ್ರಶ್ನೆ:

"ತಮಗೆ ಎಷ್ಟು ಜನ ಮಕ್ಕಳು?"

"ನಾನು ಹೇಳಿದೆನಲ್ಲ. ಎಲ್ಲಾ ಮಕ್ಕಳೂ ನನ್ನ ಮಕ್ಕಳೇ. ನಮ್ಮ ಹೊಟ್ಟೆಯಲ್ಲಿ ಹುಟ್ಟಿದರೆ ಮಾತ್ರ ಮಗುವೊ? ಬೇರೆಯವರದ್ದು ಮಕ್ಕಳಲ್ಲವೊ? ಏನು ಹೇಳುತ್ತೀರಿ?"

ಆ ಹಿರಿಯರಿಗೆ ಈಗ ತಾನೇ ಅರ್ಥವಾಗಿರಬೇಕು. ಆದರೆ ಅದನ್ನು ಹೊರಗೆ ತೋರಿಸಿಕೊಳ್ಳದಂತೆ "ಅದಕ್ಕೇನು? ತಾವು ಹೇಳಿದ ಹಾಗೆ ಎಲ್ಲ ಮಕ್ಕಳೂ ನಮ್ಮ ಮಕ್ಕಳೇ. ಇಲ್ಲಿ ನೋಡಿ, ಇವರಲ್ಲಿ ಒಬ್ಬ ಮಾತ್ರ ನನ್ನ ಮೊಮ್ಮಗ. ಬಾಕಿ ಮೂವರು ಅವನ ಕೂಡೆ ಓದುತ್ತಿರುವವರು. ಎಲ್ಲರನ್ನೂ ಸ್ವಂತ ಮಕ್ಕಳ ಹಾಗೆ ಭಾವಿಸಿ ನಾನು ಕೋವಿಲ್‌ಪಟ್ಟಿಗೆ ಕರೆದುಕೊಂಡು ಹೋಗುತ್ತಿದ್ದೇನೆ. ಆ ಕೊನೆಯಲ್ಲಿ ಕುಳಿತಿದ್ದಾನಲ್ಲ ಹುಡುಗ, ಅವನ ಮನೆಯವರು ಬಡವರು. ಹೇಗೆ ಓದಿಸಲು ಸಾಧ್ಯವಾಗುತ್ತೆ ಅಂತ ಅವನ ತಂದೆ ಯೋಚಿಸುತ್ತಿದ್ದ. ಹುಡುಗರೊಂದಿಗೆ ಹುಡುಗನಾಗಿ ಓದಲಿ. ಈಗಿನ ಖರ್ಚನ್ನು ನಾನು ನೋಡಿಕೊಳ್ಳುತ್ತೇನೆ. ಮುಂದೆ ನಡೆಯುವುದನ್ನು ನೋಡೋಣ' ಎಂದು ಅವನಿಗೆ ನಾನು ಧೈರ್ಯ ಹೇಳಿದೆ. ಆ ಹುಡುಗನಿಗೆ ಓದಿನಲ್ಲಿ ತುಂಬಾ ಆಸಕ್ತಿ. ನಾನೂ ಕೋವಿಲ್‌ಪಟ್ಟಿಗೆ ಹೋಗುತ್ತೇನೆ ಅಂತ ಹಟ ಹಿಡಿದು ಮೂರು ದಿನಗಳಿಂದ ಊಟಮಾಡದೆ ಇದ್ದ....."

ಹೊಟೇಲ್ ಮ್ಹಾಲಕನ ಹೆಂಡತಿ ಫಲಾಹಾರ ಡಬ್ಬಿಯ ಮುಚ್ಚಳವನ್ನು ತೆರೆದಳು. ಅದರಲ್ಲಿದ್ದ ಭಕ್ಷಗಳು ಒಂದು ಮದುವೆಗೇ ಸಾಕಾಗುತ್ತಿತ್ತೋ ಏನೋ ! ಆಕೆ ಎಲ್ಲವನ್ನೂ ಭಾಗಮಾಡಿ ಅಲ್ಲಿದ್ದವರಿಗೆಲ್ಲ ಹಂಚಿದಳು.

"ಏನ್ರೋ, ಹೊಟ್ಟೆಗೆ ವಂಚನೆ ಮಾಡಬೇಡಿ, ಕೇಳಿ ತಿನ್ನಿ" ಎಂದರು ಮ್ಹಾಲಿಕರು.

"ಹುಂ, ತೆಗೆದುಕೊಳ್ಳಿ" ಎಂದು ಹಿರಿಯರು ಹೇಳಿದರು.

ಹುಡುಗರು ಕೈಚಾಚಿ ಮೇಲೂ ಸ್ವೀಕರಿಸಿದರು.

ಹೊಟೇಲ್ ಮ್ಹಾಲಿಕರು ಮತ್ತೊಂದು ಎಲೆಯ ಚೂರನ್ನು ಸುಬ್ಬರಾಮ ಅಯ್ಯರ್ ಮುಂದಿಟ್ಟರು. ಆಗ ಅವರು 'ಬೇಡಿ, ಬೇಡಿ. ಈಗ ತಾನೆ ನಾನು ಫಲಾಹಾರ ಮುಗಿಸಿದ್ದೇನೆ. ನೀವು ತೆಗೆದುಕೊಳ್ಳಿ' ಎಂದವರೆ ಕೋಟಿನ ಒಳಜೇಬಿನಲ್ಲಿದ್ದ ಪುಸ್ತಕವನ್ನು ಹೊರತೆಗೆದರು.

ಸುಬ್ಬರಾಮ ಅಯ್ಯರ್ ಈಗ ಪುಸ್ತಕವನ್ನು ತೆರೆದು ಓದಲು ತೊಡಗಿದರು. ಹುಡುಗರು ಎದ್ದು ಹೋಗಿ ಕೈತೊಳೆದುಕೊಂಡು ಬಂದು ಕುಳಿತರು. ಅಯ್ಯರ್ ಹಿಡಿದು

ಕೊಂಡಿದ್ದ ಪುಸ್ತಕದ ಮುಖಪುಟದಲ್ಲಿದ್ದ ಅಕ್ಷರಗಳನ್ನು ಒಂದು ಹುಡುಗ ಓದಿದ. 'ಅನ್ನಾ ಕರೇನಿನಾ, ಲಿಯೊ ಟೋಲ್ಸ್‌ಟೋಯ್.'

ಹುಡುಗ ಓದಿದ್ದು ಸುಬ್ಬರಾಮ ಅಯ್ಯರ್ ಕಿವಿಯಲ್ಲಿ ಬಿತ್ತು.

'ಟೋಲ್ಸ್‌ಟೋಯ್' ಅದು ಸರಿಯಾಗಿಯೇ ಇದೆ. ಹೇಳಿಕೊಡದೆ ಇರುವ ವರೆಗೆ ಯಾರಿಗೂ ಟೋಲ್ಸ್‌ಟೋಯ್ ಆಗುತ್ತದೆಯೆ ವಿನಾ ಟಾಲ್ಸ್‌ಟಾಯ್ ಆಗುವು ದಿಲ್ಲ.' ಎಂದು ಸುಬ್ಬರಾಮ ಅಯ್ಯರ್ ತಮ್ಮೊಳಗೇ ಹೇಳಿಕೊಂಡರು.

ಸ್ವಲ್ಪ ಸಮಯದಲ್ಲಿಯೇ ಆ ಬಾಲಕರು ತಮ್ಮ ಕೈಯಲ್ಲಿದ್ದ ಕಾಗದಗಳನ್ನು ತೆರೆದು ಅದರ ಕಡೆ ಗಮನ ಹರಿಸಿದರು.

"ಏನೊ ಅದು?" ಎಂದು ಕೇಳಿದರು ಹೋಟೆಲ್ ಮ್ಹಾಲಿಕರು.

"ನಮ್ಮ ಹೆಡ್‌ಮಾಸ್ಟರು ಬರೆದುಕೊಟ್ಟದ್ದು."

"ಏನು ಬರೆದುಕೊಟ್ಟಿದ್ದಾರೆ?"

ಒಬ್ಬ ಹುಡುಗ ಹೇಳಿದ:

"ಹಸುವಿನ ಬಗ್ಗೆ ಇಂಗ್ಲಿಷಿನಲ್ಲಿ ಒಂದು ಪ್ರಬಂಧ, ನರಿ ಮತ್ತು ದ್ರಾಕ್ಷಿ ಕತೆ. ತೋಳ ಮತ್ತು ಆಡಿನ ಮರಿ ಕತೆ, ಸ್ನೇಹಿತನಿಗೆ ಒಂದು ಕಾಗದ."

"ಎಲ್ಲ ಇಂಗ್ಲಿಷಿನಲ್ಲಿಯೇ. ದೊಡ್ಡ ಮೇಸ್ಟ್ರು ತುಂಬಾ ಓದಿದವರು. ಒಳ್ಳೇ ಮನುಷ್ಯರು. ತಂದೆಯ ಹಾಗೆ ಹಗಲೂ ರಾತ್ರೆ ನಮ್ಮ ಹುಡುಗರಿಗೆ ಪಾಠ ಹೇಳಿ ಕೊಟ್ಟಿದ್ದಾರೆ" ಎಂದರು ಆ ಹಿರಿಯ.

"ಚೆನ್ನಾಗಿ ಓದಿಕೊಳ್ರೋ. ಹೀಗೇ ಪರೀಕ್ಷೇಲಿ ಏನಾದರೂ ಪ್ರಶ್ನೆ ಕೊಟ್ಟು ಬಿಡ್ತಾರೆ" ಎಂದರು ಹೋಟೆಲ್ ಮ್ಹಾಲಿಕರು.

ಪುಸ್ತಕ ಓದುವವರಂತೆ ಭಾವನೆ. ಆದರೆ ಸುಬ್ಬರಾಮ ಅಯ್ಯರ್ ಗಮನವೆಲ್ಲವೂ ಇತ್ತಕಡೆಗೇ.

ಮ್ಹಾಲಿಕರು ಈಗ ಕಾಫಿ ಕುಡಿದು ಮುಗಿಸಿ "ಹುಡುಗರು ಚೆನ್ನಾಗಿ ಓದ್ತಾರೆ ಅಂತ ಕಾಣುತ್ತೆ ಅಂದರು.

"ಹಳ್ಳಿ ಹುಡುಗರಾದರೂ ಓದಿನಲ್ಲಿ ತುಂಬಾ ಮುಂದು. ಎಲ್ಲ ಮೇಷ್ಟರ ತರಬೇತಿ. ಅವರ ಹಾಗೆ ಒಬ್ಬ ತಂದೆ ಸಹ ಇಷ್ಟು ಪ್ರೀತಿಯಾಗಿ ಇರಲು ಸಾಧ್ಯವಿಲ್ಲ ಎಂದು ನಾನು ಹೇಳ್ತೇನಲ್ಲ."

"ಅದು ಸರಿ. ಮೇಷ್ಟರೂ ಒಬ್ಬ ತಂದೆ ತಾನೆ? ಎಂದರು ಮ್ಹಾಲಿಕರು.

ಇದನ್ನು ಕೇಳಿ ಸುಬ್ಬರಾಮಯ್ಯರ ದೇಹ ಬೆವತಂತಾಯಿತು. ಆ ಹಿರಿಯರು "ಅದರಲ್ಲಿ ಸಂದೇಹವೇನು? ಈ ಹುಡುಗರು ಓದಿನಲ್ಲಿ ಹೇಗೋ ಹಾಗೆಯೇ ಕೆಲಸ ದಲ್ಲೂ ತುಂಬಾ ಚುಟಿ" ಎಂದರು.

"ಕೆಲಸದಲ್ಲಿ?"

"ಹೌದು, ಕೆಲಸಮಾಡದೆ ಹೇಗೆ ಸ್ಕೂಲಿಗೆ ಹೋಗುವುದಕ್ಕೆ ಸಾಧ್ಯವಿದೆ? ಇವರು ಮೊದಲು ದನಗಳನ್ನು ಕಾಲಾಡಿಸಿಕೊಂಡು ಬರ್ತಾರೆ. ಹತ್ತೀ ಬೀಜ ರುಬ್ತಾರೆ. ಹೀಗೇ ಮನೆಗೆಲಸ ಮಾಡಿಯೇ ಸ್ಕೂಲಿಗೆ ಹೋಗೋದು....."

"ಭೇಷ್ ಹಾಗೇ ಇರಬೇಕು. ಅದು ಬದುಕೋವವನ ಲಕ್ಷಣ. ತೊಕ್ಕು ಹಿಡಿದವನ ವಿದ್ಯೆ ಒಂದು ವಿದ್ಯೆಯೇನು? ಅಂಥವನಿಂದ ಯಾರಿಗಾದರೂ ಪ್ರಯೋಜನ ಉಂಟೊ? ನನ್ನನ್ನು ತೆಗೆದುಕೊಳ್ಳಿ. ನಾನು ಎರಡನೇ ಕ್ಲಾಸಿನ ಮೇಲೆ ಓದಲೇ ಇಲ್ಲ. ಬಿ.ಎ., ಎಂ.ಎ., ಓದಿದ್ದರೆ ಒಂದು ಉದ್ಯೋಗಕ್ಕೆ ಹೋಗ್ತಾ ಇದ್ದೆ. ಅಷ್ಟೇ ಆಗಿದ್ದರೆ, ಇಷ್ಟು ವರ್ಷ ನಾನು ಈ ಸ್ಕೂಲು ಹುಡುಗರಿಗೆ ಮಾಡುವ ಉಪಕಾರ ಮಾಡಲು ಆಗುತ್ತಿತ್ತೊ? ನಾಲ್ಕು ಜನರಿಗೆ ಉಪಕಾರ ಆಗುವ ಹಾಗಿದ್ದರೆ ಅದೇ ಒಂದು ವಿದ್ಯೆ. ಎಲ್ಲರನ್ನೂ ಹೆದರಿಸತಕ್ಕಂಥ ವಿದ್ಯೆ ಬೇಡವೇ ಬೇಡ. ನಾನು ಹೇಳೋದು ಹೇಗ?

"ಅದರಲ್ಲಿ ಸಂದೇಹವೇನು ಸ್ವಾಮಿ?"

ಹೀಗೆಯೇ ಅವರ ಮಾತು ಸಾಗಿತ್ತು. ಗಾಡಿ ಈಗ ಕೋವಿಲ್‌ಪಟ್ಟಿ ಸ್ಟೇಷನ್ನಿಗೆ ಬಂದಿತು. ಓದುವವರ ಹಾಗೆ ಹಿಡಿದುಕೊಂಡಿದ್ದ ಪುಸ್ತಕವನ್ನು ಸುಬ್ಬರಾಮು ಅಯ್ಯರ್ ಈಗ ಕೈಚೀಲಕ್ಕೆ ತುರುಕಿಸಿದರು. ಎಲ್ಲರೂ ಹೊರಡಲು ಸಿದ್ಧರಾದರು.

"ಧೈರ್ಯವಾಗಿ ಪರೀಕ್ಷೇಲಿ ಬರೀರ್ರೋ. ನಾನು ವಯಸ್ಸಾದವನು ಎಲ್ಲರಿಗೂ ಆಶೀರ್ವಾದ ಮಾಡುತ್ತೇನೆ. ಎಲ್ಲರಿಗೂ ಪಾಸು. ಹೋಗಿದ್ದು ಬನ್ನಿ. ತಿರುನಲ್ವೇಲಿಗೆ ಓದಲು ಬರುವಾಗ ಪಂಕಜ ವಿಲಾಸವನ್ನು ಮಾತ್ರ ಮರೆತುಬಿಡಬೇಡಿ. ಗೊತ್ತಾಯಿತೊ?" ಎಂದು ಮ್ಯಾನೇಜರು ಅವರನ್ನು ಬೀಳ್ಕೊಟ್ಟರು.

ಬೋಗಿಯನ್ನು ಬಿಟ್ಟು ಎಲ್ಲರೂ ಇಳಿದರು. ತಾವು ಆ ಜಾಗ ಬಿಡುವಾಗ ಸುಬ್ಬರಾಮು ಅಯ್ಯರ್ ಹೋಟೆಲ್ ಮ್ಯಾನೇಜರತ್ತ ತಿರುಗಿ 'ನಮಸ್ಕಾರ' ಎಂದರು. ಆ ಬಾಲಕರೋ ಮುಂದೆ ಹೋಗದೆ ಅಯ್ಯರ್ ಇಳಿದ ಮೇಲೆಯೇ ತಾವೂ ಇಳಿದರು.

ನಿಲ್ದಾಣ ಬಿಟ್ಟು ಹೊರಬಂದೊಡನೆ ಸುಬ್ಬರಾಮು ಅಯ್ಯರ್ ಜಟಕಕ್ಕಾಗಿ ಕಾದು ನಿಂತರು. ಆ ನಿಲ್ದಾಣದಲ್ಲಿ ಪೋರ್ಟರ್ ಕೆಲಸ ಮಾಡುವವನು ಒಬ್ಬ. ಆವೊತ್ತು ತನಗೆ ರಾತ್ರಿ ಕೆಲಸವಾದುದರಿಂದ, ಹೊರಗೆ ಒಂದು ಕಡೆ ನಿಂತುಕೊಂಡಿದ್ದ. ಆ ಹಿರಿಯರನ್ನೂ, ಬಾಲಕರನ್ನೂ 'ಬನ್ನಿ, ಬನ್ನಿ' ಎಂದು ಸ್ವಾಗತಿಸಿದ. ಅವರು ಬಂದ ಕೆಲಸವೇನೆಂದು ವಿಚಾರಿಸಿದ. ಆತನೂ ಇಡೈಸೇವಲ್ ಗ್ರಾಮದವನೆಂದು ಅವರ ಮಾತಿನಿಂದ ಸುಬ್ಬರಾಮು ಅಯ್ಯರ್ ತಿಳಿದುಕೊಂಡರು.

ಆ ಬಾಲಕರನ್ನೂ ಹಿರಿಯರನ್ನೂ ಆತ ಅಂದು ತನ್ನ ಮನೆಗೇ ಉಳಿದುಕೊಳ್ಳಲು ಬರಹೇಳಿದ.

ಸುಬ್ಬರಾಮ ಅಯ್ಯರಿಗೆ ಜಟಕಾ ಸಿಕ್ಕಿತು. ಆ ಗಾಡಿಯಲ್ಲಿ ಕುಳಿತು ಬಾಲಕರು ಕಣ್ಮರೆಯಾಗುವ ವರೆಗೂ ಅಯ್ಯರ್ ಅವರನ್ನು ನೋಡುತ್ತಲೇ ಇದ್ದರು.

ಕುಮಾರಪುರಂ ನಿಲ್ದಾಣ, ಅಲ್ಲಿನ ಸ್ಟೇಷನ್ ಮಾಸ್ಟರ ತರ್ಕ, ಬೇವಿನ ಮರದ ಹಿತ ವಾದ ಗಾಳಿ, ಆ ಕಪ್ಪು ಮಣ್ಣಿನ ಭೂಮಿಗಳು, ಆ ಹೋಟೆಲ್ ಮ್ಯಾಲಿಕರ ಧಾರಾಳತನ, ಧರ್ಮಸ್ವಭಾವ, ವಿದ್ಯೆಯ ಬಗ್ಗೆ ಅವರ ವ್ಯಾಖ್ಯಾನ, ಆ ಬಾಲಕರಲ್ಲಿ ಅವರು ನಡೆದು ಕೊಂಡ ಬಗೆ, ಟಾಲ್‌ಸ್ಟಾಯ್ ಅನ್ನು ಅವರು ಟೋಲ್‌ಸ್ಟೋಯ್ ಎಂದು ಹೇಳಿದ್ದು, ಬಡ ಪೋರ್ಟರನ ಸ್ವಾಗತ—ಹೀಗೆ ಎಲ್ಲವೂ ಅವರ ನೆನಪಿಗೆ ಬಂದವು.

ಇಪ್ಪತ್ತು ನಿಮಿಷಗಳ ಆ ರೈಲು ಪ್ರಯಾಣದಲ್ಲಿ ಇಪ್ಪತ್ತು ವರುಷಗಳು ಓದಿದರೂ ತಿಳಿದುಕೊಳ್ಳಲು ಸಾಧ್ಯವಿಲ್ಲದ್ದು, ಈಗ ತಮ್ಮ ತಿಳುವಿಗೆ ಎಟುಕಿದ ಹಾಗೆ.....ಗ್ರಾಮದ ಹೆಡ್ಮಾಸ್ಟರ್, ಹೋಟಲ್ ಮ್ಯಾಲಿಕರು, ಪೋರ್ಟರ್—ಇಂಥವರಿಗಿಂತ ಒಳ್ಳೆಯ ಉಪಾಧ್ಯಾಯರು ಜಗತ್ತಿನಲ್ಲಿ ಇರಲು ಸಾಧ್ಯವೋ' ಎಂದು ಒಂದು ಕ್ಷಣ ಅವರಿಗೆ ಅನ್ನಿಸಿತು. ಅವರಲ್ಲಿ ಇಲ್ಲದ ವಿದ್ಯೆಯನ್ನು ಈ ಬಾಲಕರು ಶಾಲೆಯಲ್ಲಿ ಓದಲು ಸಾಧ್ಯವೊ ಎಂದು ಅಯ್ಯರ್ ಯೋಚಿಸತೊಡಗಿದರು. ಯಾವಾಗಲೂ ಪ್ರಯಾಣಿಕರೇ ಇಲ್ಲದಿದ್ದ ಆ ಚಿಕ್ಕ ನಿಲ್ದಾಣದಿಂದ ಈಗ ತಾವು ಇಲ್ಲಿಗೆ ಬರುವವರೆಗೆ........

ಸುಬ್ಬರಾಮ ಅಯ್ಯರ್ ಜಟಕಾದಿಂದ ಇಳಿದು ಮನೆಗೆ ಹೋಗಿ ಸೇರಿದರು.

ಆ ಪೋರ್ಟರ್ ಬಾಲಕರನ್ನೂ ಹಿರಿಯರನ್ನೂ ತನ್ನ ಮನೆಗೆ ಕರೆದುಕೊಂಡು ಹೋದ. ಅವರು ಊರಿಂದಲೇ ಫಲಾಹಾರ ಮುಗಿಸಿ ಬಂದಿದ್ದೇವೆಂದು ಹೇಳಿದ್ದರಿಂದ ಅವನ ಮನೆಯಲ್ಲಿ ಬರಿಯ ಕಾಫಿಯನ್ನು ಮಾತ್ರ ತೆಗೆದುಕೊಂಡರು. ಮಧ್ಯಾಹ್ನದ ಊಟಕ್ಕೆ ಇಲ್ಲಿಗೇ ಬರುವುದೆಂದು ತೀರ್ಮಾನವಾಯಿತು. ಬಳಿಕ ಅವರೆಲ್ಲರೂ ಶಾಲೆ ಯತ್ತ ನಡೆದರು. ಅವರೊಂದಿಗೆ ಆ ಪೋರ್ಟರನೂ ಸಹ.

ಶಾಲೆಯ ವರಾಂಡದಲ್ಲಿ ಅವರೆಲ್ಲರನ್ನೂ ನಿಲ್ಲಲು ಹೇಳಿ, ಪೋರ್ಟರ್ ಹೆಡ್ಮಾಸ್ಟರ ಕೊಠಡಿಗೆ ತಾನೊಬ್ಬನೇ ಹೋದ. ಇಡೈಸೇವಲ್ ಗ್ರಾಮದಿಂದ ಆರನೆಯ ತರಗತಿ ಯಲ್ಲಿ ತೇರ್ಗಡೆಯಾದ ನಾಲ್ವರು ಹುಡುಗರು ಏಳನೆಯ ತರಗತಿಗೆ ಸೇರಲು ಬಂದಿರುವುದನ್ನು ಅವರಿಗೆ ತಿಳಿಸಿದ. ಒಡನೇ ಅವರು ಒಬ್ಬ ಉಪಾಧ್ಯಾಯರನ್ನು ಬರಹೇಳಿ, ಅವರ ಕೈಯಲ್ಲಿ ಎರಡು ಮೂರು ಪ್ರಶ್ನಪತ್ರಿಕೆಗಳನ್ನು ಕೊಟ್ಟು, ಆ ವಿದ್ಯಾರ್ಥಿಗಳು ಏಳನೆಯ ತರಗತಿಗೆ ಸೇರಲು ಅರ್ಹರೋ ಎಂದು ಪರೀಕ್ಷಿಸಲು ಹೇಳಿ ದರು.

ಒಂದು ಕೊಠಡಿಯಲ್ಲಿ ಈ ನಾಲ್ವರು ವಿದ್ಯಾರ್ಥಿಗಳನ್ನೂ ಬೇರೆ ಬೇರೆ ಕುಳ್ಳಿರಿಸ ಲಾಯಿತು. ಆ ಪ್ರಶ್ನಪತ್ರಿಕೆಗಳಲ್ಲಿದ್ದ ಪ್ರಶ್ನೆಗಳನ್ನು ಬರೆದುಕೊಳ್ಳುವಂತೆ ಹೇಳಿ, ಉಪಾಧ್ಯಾಯರು ಅದನ್ನು ಓದಿದರು. ಎಲ್ಲವೂ ಆಂಗ್ಲಪ್ರಶ್ನೆಗಳು. ಒಂದು ಗಂಟೆ

ಯೊಳಗೆ ಉತ್ತರ ಬರೆಯಬೇಕು ಎಂದು ಅವರಿಗೆ ತಿಳಿಸಿದ್ದಾಯಿತು. ವಿದ್ಯಾರ್ಥಿಗಳು ಬರೆಯತೊಡಗಿದರು.

ಆ ಹಿರಿಯರೂ ಪೋರ್ಟರನೂ ಶಾಲೆಯಿಂದ ಹೊರಗೆ ಬಂದು ಕುಳಿತವರೆ ಊರ ಸುದ್ದಿಯನ್ನು ಮಾತಾಡತೊಡಗಿದರು.

ಹತ್ತೂವರೆ ಗಂಟೆಗೆ ಇಂಗ್ಲೀಷ್ ಪರೀಕ್ಷೆಗಳು ಮುಗಿದುವು. ಬಳಿಕ ಗಣಿತ, ಸಾಮಾನ್ಯ ವಿಜ್ಞಾನ, ತಮಿಳು—ಇವಕ್ಕೆ ಸಂಬಂಧಪಟ್ಟವು. ಎಲ್ಲವೂ ಹನ್ನೆರಡು ಗಂಟೆಗೆ ಮುಗಿಯಿತು. ಶಾಲೆಯನ್ನು ಬಿಟ್ಟು ಅಲ್ಲಿನ ವಿದ್ಯಾರ್ಥಿಗಳೂ ಮಧ್ಯಾಹ್ನದ ಊಟಕ್ಕೆ ಮನೆಗೆ ಹೊರಟರು. ಈ ನಾಲ್ವರು ವಿದ್ಯಾರ್ಥಿಗಳನ್ನು ಅಲ್ಲಿಯೇ ಕುಳ್ಳಿರಿಸಿ ಕೊಂಡು ಪರೀಕ್ಷೆ ನಡೆಸಿದ ಉಪಾಧ್ಯಾಯರು ಆ ಕೊಠಡಿಯಲ್ಲಿಯೇ ಕುಳಿತು ಮಾರ್ಕು ಹಾಕಿದರು. ಬಳಿಕ ಆ ಪತ್ರಿಕೆಗಳನ್ನು ಕೈಯಲ್ಲಿ ಹಿಡಿದು ಹೆಡ್ಮಾಸ್ಟರ ಕೊಠಡಿಗೆ ನಡೆದರು. ಆಗ ಆ ಪೋರ್ಟರನೂ ಹಿರಿಯರೂ ಅಲ್ಲಿಗೆ ಬಂದು ಸೇರಿದರು.

"ಪರೀಕ್ಷೆಯಲ್ಲಿ ಚೆನ್ನಾಗಿ ಬರೆದಿದ್ದೀರೋ?" ಎಂದು ಕೇಳಿದ ಪೋರ್ಟರ್.

"ಗಣಿತ ಮಾತ್ರ ಸ್ವಲ್ಪ ಕಷ್ಟವಾಗಿತ್ತು."

"ಇಂಗ್ಲೀಷು?"

"ಪರವಾಗಿಲ್ಲ."

"ಊರಿನಲ್ಲಿ ಹೆಡ್ಮಾಸ್ಟರು ಕೇಳಿದ್ದ ಪ್ರಶ್ನೆಯೇ. ಒಂದೇ ಕ್ಷಣದಲ್ಲಿ ಉತ್ತರ ಬರೆದುಬಿಟ್ಟೆ." ಎಂದ ಒಬ್ಬ ಹುಡುಗ. ಉಳಿದವರೂ ಹಾಗೆಯೇ ಹೇಳಿದರು.

"ಇಂಗ್ಲೀಷ್ ಚೆನ್ನಾಗಿ ಬರೆದರೆ ಖಂಡಿತ ಪಾಸ್" ಎಂದು ಪೋರ್ಟರ್ ಹೇಳಿ ಕೊಂಡಿದ್ದಾಗ, ಆ ಹಿರಿಯರು ನಮ್ಮ ಊರ ಮೇಸ್ಟ್ರು ಮೇಷ್ಟ್ರೇ. ಎಂಥ ಮನುಷ್ಯ? ಇಲ್ಲಿ ಏನು ಕೇಳುತ್ತಾರೆ ಎಂದು ತಿಳಿದುಕೊಂಡು ಅದನ್ನೇ ಅಲ್ಲಿ ಪಾಠ ಮಾಡಿದ್ದಾರೆ." ಎಂದು ಬಾಯಿತುಂಬಾ ಹೊಗಳಿದರು.

"ತುಂಬಾ ಬುದ್ಧಿವಂತ ಮೇಷ್ಟ್ರು ಅಂತ ಕಾಣುತ್ತೆ" ಎಂದ ಪೋರ್ಟರ್.

"ಅದನ್ನು ಏನು ಕೇಳುತ್ತೀ? ಆ ಮೇಲೆ ಗುಣವೋ ಚೆನ್ನ ಇಂಥ ಮೇಷ್ಟ್ರು ನಮ್ಮ ಊರಿಗೆ ಬಂದದ್ದೇ ನಮ್ಮ ಭಾಗ್ಯ. ತಂದೆಯ ಹಾಗೆ ಹುಡುಗರನ್ನು ನೋಡಿಕೊಳ್ಳು ತ್ತಾರೆ" ಎಂದು ಆ ಹಿರಿಯರು ಮೇಲೂ ಹೊಗಳಿದರು.

ಎಲ್ಲರೂ ಮುಂದೆ ನಡೆಯಬೇಕಾದುದನ್ನು ಕುರಿತು ಮಾತಾಡಿಕೊಂಡಿದ್ದರು.

ಸ್ವಲ್ಪ ಸಮಯದಲ್ಲಿಯೇ ಪರೀಕ್ಷೆ ನಡೆಸಿದ ಉಪಾಧ್ಯಾಯರು, ವಿದ್ಯಾರ್ಥಿ ಗಳನ್ನೂ ಹಿರಿಯರನ್ನೂ ಪೋರ್ಟರನನ್ನೂ ಹೆಡ್ಮಾಸ್ಟರ ಕೊಠಡಿಗೆ ಕರೆದುಕೊಂಡು ಹೋದರು. ಆಗಷ್ಟೆ ಅವರ ಮನಸ್ಸಿನಲ್ಲಿ ಕೋಲಾಹಲವಾದದ್ದು.

ಎಲ್ಲರೂ ಈಗ ಹೆಡ್ಮಾಸ್ಟರ ಕೊಠಡಿಗೆ ಪ್ರವೇಶಿಸಿದರಷ್ಟೆ. ಅವರನ್ನು ನೋಡಿ

ಪೋರ್ಟರ್ ನಮಸ್ಕಾರ ಮಾಡಿದ. ಹಿರಿಯರಿಗೂ ನಮಸ್ಕಾರ ಮಾಡಲು ಹೋಗಿ ಸಾಧ್ಯವಾಗದೆ ಅವರ ಕೈಗಳು ನಡುಗಿದುವು. ವಿದ್ಯಾರ್ಥಿಗಳಿಗೆ ಒಂದೂ ತೋಚದೆ ಹಾಗೆಯೇ ನಿಂತುಬಿಟ್ಟರು. ಯಾರೂ ಮಾತಾಡಲಿಲ್ಲ. ಬೆರಳುಗಳನ್ನು ಮಾತ್ರ ಹೀಗೀಗೆ ಹೊಸೆದುಕೊಂಡರು.

ಕುಮಾರಪುರಂ ನಿಲ್ದಾಣದಿಂದ ಟಾಲ್ಸ್ಟಾಯ್ ಪುಸ್ತಕವನ್ನು ಕೈಯಲ್ಲಿ ಹಿಡಿದು ತಮ್ಮೊಡನೆ ಪ್ರಯಾಣಮಾಡಿ ಬಂದಿದ್ದವರೇ ಇಲ್ಲಿ ಹೆಡ್ಮಾಸ್ಟರಾಗಿ ಕುಳಿತಿದ್ದರು. ಇವನ್ನು ಹೇಗೆ ಅವರು ನಿರೀಕ್ಷಿಸಲು ಸಾಧ್ಯವಿತ್ತು?

"ಬನ್ನಿ" ಎಂದು ನಗೆಯಾಡುತ್ತಲೆ ಹೆಡ್ಮಾಸ್ಟರ್ ಇವರನ್ನು ಸ್ವಾಗತಿಸಿದರು.

'ದೊಡ್ಡ ಮೇಸ್ಟರಿಗೆ ನಮಸ್ಕಾರ ಮಾಡಿ' ಎಂದು ಪೋರ್ಟರ್ ಹೇಳಿದ ಮೇಲೆಯೆ ವಿದ್ಯಾರ್ಥಿಗಳು ಅವರಿಗೆ ಕೈಮುಗಿದರು.

"ಪ್ರಶ್ನೆಗಳೆಲ್ಲ ಕಠಿಣವಾಗಿದ್ದುವೊ?" ಎಂದು ಕೇಳುತ್ತ ಸುಬ್ಬರಾಮ ಅಯ್ಯರ್ ಮಿಂಚಾಗಿ ನಕ್ಕರು. ಅವರ ನಗೆಯಲ್ಲಿದ್ದ ಅರ್ಥ ಅವರಿಗೆಲ್ಲ ತಿಳಿದಿತ್ತು.

ಅವರ ಪ್ರಶ್ನೆಗೆ ಉತ್ತರ ಹೇಳಲು ಅಸಮರ್ಥರಾಗಿ ಎಲ್ಲರೂ ಹಾಗೆಯೇ ನಿಂತರು.

ಮತ್ತೆ "ನಿಮ್ಮ ಹೆಸರುಗಳನ್ನು ಹೇಳಿ" ಎಂದರು ಹೆಡ್ಮಾಸ್ಟರು.

"ನಾರಾಯಣ ಸ್ವಾಮಿ.........."

"ಶ್ರೀನಿವಾಸ.........."

"ಸುಬ್ಬಯ್ಯ.........."

"ತಿರುಪತಿ.........."

"ಎಲ್ಲರೂ ತೇರ್ಗಡೆಯಾಗಿದ್ದೀರಿ."

ವಿದ್ಯಾರ್ಥಿಗಳಿಗೆ ಮಹದಾನಂದ.

"ಎಲ್ಲರೂ ಏಳನೆಯ ತರಗತಿಯಲ್ಲಿ ಸೇರಿಕೊಳ್ಳಿ. ಚೆನ್ನಾಗಿ ಓದಿ. ಒಂದೊಂದು ಪರೀಕ್ಷೆಯಲ್ಲೂ ಚೆನ್ನಾಗಿ ಮಾರ್ಕುಸ್ ತೆಗೆದುಕೊಳ್ಳಬೇಕು" ಎಂದವರೇ "ನಿಮ್ಮ ಊರು ಮೇಷ್ಟು ಮಾತ್ರವಲ್ಲ, ಹಿರಿಯರೇ. ಈ ಊರಿನವರೂ ವಿದ್ಯಾರ್ಥಿಗಳನ್ನು ತಂದೆಯ ಹಾಗೆಯೇ ನೋಡಿಕೊಳ್ಳುತ್ತಾರೆ. ನಾನು ಹೇಳುವುದು ಅರ್ಥವಾಯಿತಲ್ಲ" ಎಂದವರೇ ಮತ್ತೆ ನಗೆಯಾಡಿದರು.

"ಅದರಲ್ಲಿ ಸಂದೇಹ ಯಾಕೆ ಸ್ವಾಮಿ?" ಎನ್ನುತ್ತ ಆ ಹಿರಿಯರು ಈಗ ಅವರಿಗೆ ಮತ್ತೆ ನಮಸ್ಕಾರ ಮಾಡಿದರು.

"ಹೋಗಿ ಬನ್ನಿ" ಎಂದು ಹಿರಿಯರಿಗೆ ಹೇಳಿದರು ಸುಬ್ಬರಾಮ ಅಯ್ಯರ್. ಒಡನೆ ಅವರಿಗೆ ಕುಮಾರಪುರಂ ನಿಲ್ದಾಣ ನೆನಪಿಗೆ ಬಂದಿತು. 'ಹೌದು, ಅದು ಇದಕ್ಕಿಂತ ದೊಡ್ಡ ಶಾಲೆ' ಎಂದು ಅವರು ತಮ್ಮೊಳಗೇ ಹೇಳಿಕೊಂಡರು.

# ಹಿಂಬಾಲಿಸುವಿಕೆ

"ಇದೋ, ಹೋಗುತ್ತಿದ್ದಾರಲ್ಲ, ಅವರನ್ನು ಗಮನಿಸು" ಎಂದರು ನನ್ನ ಸ್ನೇಹಿತರು.

"ಅವರನ್ನು ಗಮನಿಸಿದರೆ ನನಗಾಪದದ್ದು ಏನು?"

"ಹೇಳುತ್ತೇನೆ."

ಒೀಗೆ ನಾವು ಮಾತಾಡಿಕೊಂಡಿದ್ದಾಗ ಆ ವ್ಯಕ್ತಿ ನಮ್ಮನ್ನು ದಾಟಿ ಮುಂದೆ ಹೊರಟು ಹೋದ. ನಾನು ನೋಡಿದ್ದೆಲ್ಲ ಅವರ ಬೆನ್ನನ್ನು ಮಾತ್ರ. ಒಣಮರದಂತೆ ಅವರ ದೇಹ, ಉಟ್ಟಿದ್ದುದು ನಾಲ್ಕು ಮೊಳದ ಪಂಚೆ, ಭುಜದ ಮೇಲೆ ಒಂದು ಟವೆಲ್ಲು. ಇಷ್ಟೇ ನನಗೆ ಕಂಡದ್ದು.

"ನೋಡಿದೆ" ಎಂದೆ.

"ಮುಖ ನೋಡಲಿಲ್ಲವಲ್ಲ."

"ಎದ್ದು ಹೋಗಿ ನೋಡಲು ಹೇಳುತ್ತೀಯೇನು?"

"ಹುಂ, ಅದು ಸರಿ. ಕೆಂಪು ಹಸಿರು ಕಣ್ಣಿಗೆ ಬಿದ್ದಿದ್ದರೆ, ಹೇಳದೆ ಕೇಳದೆ ಎದ್ದು ಹೋಗಿ ನೋಡುತ್ತಿದ್ದೆ" ಎಂದ ಮಿತ್ರ. ಅವನ ಮಾತಿನಲ್ಲಿ ವ್ಯಂಗ್ಯವಿತ್ತು.

"ಅದರಿಂದ ಏನು ಕೊಳ್ಳೆಹೋದದ್ದು?"

"ಅವರು ಒಬ್ಬ ಅಸಾಧಾರಣ ಮನುಷ್ಯ."

"ಹಾಗಂದರೆ !"

"ಎಲ್ಲರಂತೆಯೇ ಅವರೂ ಒಂದು ಉದ್ಯೋಗ ಮಾಡುತ್ತಾರೆ, ನಿಜ. ಆದರೂ ಅವರಲ್ಲಿ ಏನೋ ಒಂದು ವಿಧದ ಶಕ್ತಿ ಇದೆ. ಏನೆಂದು ಮಾತ್ರ ಅರ್ಥವಾಗಿಲ್ಲ."

"ಅವರಿಗೆ ಏನು ಉದ್ಯೋಗ?"

"ಮರಕೆಲಸ ಮಾಡುತ್ತಾರೆ."

"ಸರಿ."

"ಬಡಗಿ ಆದರೆ ಅವರು ಮಾತಾಡುವುದಿಲ್ಲ."

"ಮೂಗರೊ?"

"ಇಲ್ಲ, ಮೌನ."

ಮೂಗರಲ್ಲ, ಮೌನ ಎಂದೊಡನೆ ನನಗೆ ಆಶ್ಚರ್ಯವಾಯಿತು. ಮೂಗಾಗಿರುವವನೇ ಕೈಬಾಯಿ ಸಂಜ್ಞೆಗಳಿಂದ ಸಾಕಷ್ಟು ಗಲಾಟೆ ಮಾಡುವಾಗ, ಮಾತಾಡುವವನು ಮೌನಿಯಾಗಿದ್ದಾನೆ ಎಂದರೆ ಅದು ಆಶ್ಚರ್ಯಕರವಾದ ಸಂಗತಿಯಷ್ಟೆ ! ಅದರಲ್ಲೂ ಸಾಕಷ್ಟು ಮಾತಾಡಿದರೇ ಹೊಟ್ಟೆ ತುಂಬುವ ಉದ್ಯೋಗ ಅವರದು. ಹಾಗಿರುವಾಗ?

"ಸರಿ, ಮಾತಂತೂ ಆಡುವುದಿಲ್ಲ. ಕೂಲಿಯನ್ನಾದರೂ ತೆಗೆದುಕೊಳ್ಳುತ್ತಾರೊ? ಅದೂ ಇಲ್ಲವೊ?"

"ತೆಗೆದುಕೊಳ್ಳುತ್ತಾರೆ."

"ಇವರು ನಿನಗೆ ಪರಿಚಯವೊ?"

"ಆಗಾಗ್ಗೆ ನೋಡಿದ್ದೇನೆ. ಸ್ವಲ್ಪ ಪರಿಚಯವೂ ಇದೆ."

"ಅವರೇ ಮಾತಾಡುವುದಿಲ್ಲವೊ?"

"ಮಾತಾಡುವುದಿಲ್ಲ. ಸಂಜ್ಞೆಯ ಮೂಲಕ ತುಂಬಾ ವಿಷಯಗಳನ್ನು ಹೇಳುತ್ತಾರೆ. ಸಾಲದ್ದಕ್ಕೆ ಬರೆದು ತೋರಿಸುತ್ತಾರೆ. ಇವರು ಮೊದಲು ಕಾರಿನ ಚಾಲಕನಾಗಿ ಅರುವತ್ತು ರೂಪಾಯಿ ಸಂಬಳಕ್ಕೆ ಒಬ್ಬ ದೊಡ್ಡ ಮನುಷ್ಯರಲ್ಲಿ ಕೆಲಸಕ್ಕೆ ಸೇರಿದರು. ಕಾರಲ್ಲಿ ಒಬ್ಬರೇ ಇವರು ಕುಳಿತಿರುವಾಗ ಪಟ್ಟಣತ್ತಾರ್, ತಾಯುಮಾನವರ್, ಹದಿನೆಂಟು ಸಿದ್ಧರ ಗ್ರಂಥಗಳನ್ನು ತಪ್ಪದೇ ಓದುತ್ತಿದ್ದರು. ಒಂದು ಸಂದರ್ಭದಲ್ಲಿ ಮಾಲಿಕರನ್ನು ಕುಳ್ಳಿರಿಸಿಕೊಂಡು ಇವರು ಎಲ್ಲಿಗೋ ಪ್ರಯಾಣ ಮಾಡುತ್ತಿರುವಾಗ, ಎದುರಿಂದ ಬಂದ ವಾಹನ ಢಿಕ್ಕಿ ಹೊಡೆದು, ಅಪಘಾತ ಸಂಭವಿಸಿ, ಮಾಲಿಕರಿಗೆ ತುಂಬಾ ಗಾಯವಾಗಿ ಹೋಯಿತು. ಈತ ಕಾರಿನಿಂದ ಹೊರಗೆ ಎಸೆಯಲ್ಪಟ್ಟು ಪ್ರಜ್ಞೆ ತಪ್ಪಿದ. ಇಬ್ಬರನ್ನೂ ಆಸ್ಪತ್ರೆಗೆ ಸಾಗಿಸಿದರು. ಆದರೆ ಆಸ್ಪತ್ರೆಯಲ್ಲಿ ಮಾಲಿಕರು ತೀರಿಕೊಂಡರು. ಡಾಕ್ಟರುಗಳು ಪರೀಕ್ಷಿಸಿದಾಗ ಇವರ ದೇಹದಲ್ಲಿ ಯಾವ ವಿಧವಾದ ಗಾಯವೂ ಮೊಳೆಮುರಿತವೂ ಆಗಿರಲಿಲ್ಲ.

ಆದರೆ ಅವರ ಕಣ್ಣುಗಳು ಮಾತ್ರ ಭದ್ರವಾಗಿ ಮುಚ್ಚಿಕೊಂಡಿದ್ದುವು. ನೆನಪಿಲ್ಲದೆ ಇವರು ಆಸ್ಪತ್ರೆಯಲ್ಲಿಯೇ ಇದ್ದರು. ಹನ್ನೊಂದನೆಯ ದಿನ ಒಬ್ಬ ಡಾಕ್ಟರು ಮಾಮೂಲಿನಂತೆ ಎಲ್ಲ ಕಡೆ ಸುತ್ತು ಹಾಕಿಕೊಂಡು ಬಂದಾಗ, ಇವರಿಗೆ ಹಠಾತ್ತಾನೆ ತಿಳಿವು ಬಂದು ಎದ್ದು ಕುಳಿತುಬಿಟ್ಟರು. ಡಾಕ್ಟರು ಇವರನ್ನು ವಿಚಾರಿಸಿದಲ್ಲಿ 'ಅಮೃತ ಕಲಶ ಉಕ್ಕಿ ಬಂದಿದೆ' ಎಂದರು. ಡಾಕ್ಟರಿಗೆ ಆ ಮಾತು ಅರ್ಥವಾಗಲಿಲ್ಲ. ಮೇಲೂ ಪ್ರಶ್ನೆಗಳನ್ನು ಕೇಳಿದರು. 'ಇಷ್ಟು ದಿನಗಳ ವರೆಗೂ ಯಮನೊಂದಿಗೆ ಜಗಳ. ಇವೊತ್ತೇ ಮುಗಿದದ್ದು. ಅರಂಗುಲ ದೂರದಿಂದ ಶ್ವಾಸ ಇದ್ದು, ಈಗ ನಾಭಿಯಿಂದ ಬರುತ್ತ ಇದೆ' ಎಂದವರೇ ಡಾಕ್ಟರನ್ನೇ ಪ್ರಶ್ನೆ ಕೇಳಿದರು:

"ಡಾಕ್ಟರ, ಒಂದೇ ಸಮಯದಲ್ಲಿ ಮೂಗಿನ ಎರಡು ಹೊಳ್ಳೆಗಳಿಂದಲೂ ಶ್ವಾಸ ಬರುತ್ತದೆಯೆ?"

ಡಾಕ್ಟರು ಆ ಪ್ರಶ್ನೆಗೆ ಉತ್ತರವನ್ನು ಹೇಳದೆ ಇವರನ್ನು ಮನೆಗೆ ಕಳಿಸಿಬಿಟ್ಟರು.

ಮನೆಗೆ ಬಂದವರು ಮೊದಲಿನಂತೆ ಇರಲಿಲ್ಲ. ಹೆಂಡತಿ ಮತ್ತು ಇಬ್ಬರು ಮಕ್ಕಳಿದ್ದೂ ಅವರೊಂದಿಗೆ ಮಾತಾಡುತ್ತಲೆ ಇರಲಿಲ್ಲ. ಸಂಜ್ಞೆ ಮಾಡಲು ಪ್ರಾರಂಭಿಸಿದರು.

ಹೆಂಡತಿ ಪತಿಗೆ ಹುಚ್ಚು ಏನಾದರೂ ಹಿಡಿದಿದೆಯೋ ಎಂದು ಸಹ ಒಂದು ಸಂದರ್ಭದಲ್ಲಿ ಭಾವಿಸಿದಳು. ಆದರೆ ಇವರು ಮಾತಾಡುವುದೊಂದನ್ನು ಬಿಟ್ಟರೆ ಉಳಿದೆಲ್ಲವೂ ಸರಿಯಾಗಿತ್ತು. ಹುಚ್ಚಿನ ಚಿಹ್ನೆ ಯಾವುದೂ ಕಂಡುಬರಲಿಲ್ಲ. ಊಟ, ಮಕ್ಕಳೊಡನೆ ಆಟ, ಎಲ್ಲವೂ. ಹೆಂಡತಿಯನ್ನು ನೋಡಿ ನಗಲೂ ನಗುತ್ತಾರೆ. ಆದರೆ ಅದು ಹಳೆಯ ನಗೆಯಂತೆ ಇಲ್ಲ. ಹುಚ್ಚು ನಗೆಯಂತೂ ಖಂಡಿತ ಅಲ್ಲ.

ಒಂದು ವಾರ ಹೀಗೆಯೇ ಇವರು ಮನೆಯಲ್ಲಿ ಇದ್ದವರು, ಎಂಟನೆಯ ದಿನವೋ ಒಂಬತ್ತನೆಯ ದಿನವೋ ದೊಡ್ಡ ಅಂಗಡಿಬೀದಿಗೆ ಹೋಗಿ, ಬಡಗಿಗೆ ಬೇಕಾದ ಸಾಮಗ್ರಿಗಳನ್ನೆಲ್ಲ ತೆಗೆದುಕೊಂಡು ಬಂದುಬಿಟ್ಟರು. ಹನ್ನೊಂದನೇ ದಿನದಿಂದ ಬಡಗಿಯ ಕೆಲಸವನ್ನು ಮಾಡಲು ಹೊರಟರು. ಆ ದಿನ ಮೂರು ರೂಪಾಯಿಗಳನ್ನು ಸಂಪಾದಿಸಿ ಅವರು ಮನೆಗೆ ಹಿಂದಿರುಗಿದರು.

ಇಷ್ಟನ್ನು ಹೇಳಿದವನೇ ನನ್ನ ಮಿತ್ರ ಸಿಲ್ಲಿಸಿಕೊಂಡ. ನನಗೆ 'ಎದ್ದು ಹೋಗಿ ಅವರನ್ನು ನೋಡಬಹುದಾಗಿದ್ದಿತಲ್ಲ' ಎನ್ನಿಸಿತು. "ಮತ್ತೊಂದು ದಿನ ಅವರನ್ನು ಗಮನಿಸು" ಎಂದವನೇ ಆತ ಅವಸರದ ಕೆಲಸ ನಿಮಿತ್ತ ನನ್ನನ್ನು ಬಿಟ್ಟು ಅಂದು ಅವನು ಹೊರಟು ಹೋದ.

ಅವೊತ್ತಿನಿಂದ ಅವರನ್ನು ನೋಡಬೇಕು ಎನ್ನುವ ನೆನಪೇ ನನಗೆ.

ಮತ್ತೊಂದು ದಿನ ಇವರು ಸಾಮಾನುಗಳ ಸಮೇತ ಬೀದಿಯಲ್ಲಿ ಹೋದರು. ಆಗ ಅವರ ಮುಖವನ್ನು ನಾನು ಚೆನ್ನಾಗಿ ಗಮನಿಸಿದೆ. ಅವರು ಕಿವಿಯಲ್ಲಿ ಊದುಬತ್ತಿಯನ್ನು ಸಿಕ್ಕಿಸಿಕೊಂಡಿದ್ದರು. ಎದೆ ಪೂರಾ ಶ್ರೀಗಂಧದ ಲೇಪ. ಮಾಮೂಲಿನಂತೆ ನಾಲ್ಕು ಮೊಳದ ಪಂಚೆ. ಟವಲ್ಲು. ಮುಖವನ್ನು ನೋಡಿದೆ, ತಿಳಿಯಾದ ಮುಖ. ನಾನು ಅವರನ್ನು ಧಿಟ್ಟಿಸಿ ನೋಡುತ್ತಲೆ ಅವರೂ ನನ್ನನ್ನು ನೋಡಿದರು.

ಆ ಮೇಲೆ ಅವರನ್ನು ಬೀದಿಯಲ್ಲಿ ಹಲವು ಸಲ ನೋಡಿದೆ. ಸ್ವಲ್ಪ ಸ್ವಲ್ಪವಾಗಿ ಅವರಿಗೂ ನನಗೂ ಮುಖಪರಿಚಯವುಂಟಾಯಿತು. ನನ್ನನ್ನು ನೋಡಿ ಮುಗುಳು ನಕ್ಕು ಅವರು ಮುಂದೆ ಹೋಗುತ್ತಿದ್ದರು.

ಒಂದು ದಿನ ಇವರು ನಮ್ಮ ಮನೆಯಿಂದ ಆಚೆ ನಾಲ್ಕನೆಯ ಮನೆಯಲ್ಲಿ ಸೇರಿದ ಹಾಗೆ ಕೆಲಸಮಾಡಿದರು. ಆ ಮನೆಯವರು ಇವರ ಬಗ್ಗೆ ನನ್ನಲ್ಲಿ ತುಂಬಾ ಹೊಗಳಿದರು:

"ಅಸಾಧಾರಣ ಮನುಷ್ಯ, ನ್ಯಾಯವಾದ ಕೂಲಿಯನ್ನು ಮಾತಾಡಿಕೊಂಡರು. ಯಾವ ವಿಧವಾದ ಕುಂದುಕೊರತೆಗಳೂ ಇಲ್ಲದಂತೆ ಮರದ ಪೆಟ್ಟಿಗೆಯನ್ನು ಮಾಡಿದರು. ಈಗ ಮೌನಿ ಎನ್ನುವುದಷ್ಟೆ ವಿಚಿತ್ರವಲ್ಲ. ಕೆಲಸವನ್ನು ಪ್ರಾರಂಭಿಸುವುದಕ್ಕೆ ಮೊದಲು ಊದುಬತ್ತಿಯನ್ನು ಹಚ್ಚಿ ಕಿವಿಗೆ ಸಿಕ್ಕಿಸಿಕೊಳ್ಳುತ್ತಾರೆ. ಸ್ವಲ್ಪ ಸಮಯದವರೆಗೆ ಶ್ವಾಸವನ್ನೂ ಒಳಗೆ ಎಳೆದುಕೊಳ್ಳುತ್ತಾರೆ. ಶ್ರದ್ಧೆಯಿಂದ ಕೆಲಸಮಾಡುತ್ತಾರೆ.

ಮಧ್ಯಾಹ್ನದ ವಿಶ್ರಾಂತಿಯ ಸಮಯದಲ್ಲಿ ಅರ್ಧ ಸೇರಿನಷ್ಟು ಬರೀ ಮೆಣಸಿನ ಕಾಯಿಯನ್ನು ತಿನ್ನುತ್ತಾರೆ. ಯಾವಾಗಲಾದರೂ ಬಿಸಿ ನೀರು ಬೇಕು ಎಂದು ಸಂಜ್ಞೆ ಮಾಡುತ್ತಾರೆ. ಸ್ನಾನಮಾಡುತ್ತಾರೆ. ತುಂಬಾ ವಿಚಿತ್ರವಾದವರು."

ನನಗೆ ಮೇಲೂ ಕುತೂಹಲ ಕೆರಳಿತು. ಅವರು ನಿಜವಾಗಿಯೂ ಬಡಗಿಯೆ? ಜ್ಞಾನಿಯೆ? ಒಂದೂ ನನಗೆ ಅರ್ಥವಾಗಲಿಲ್ಲ.

ಒಂದು ದಿನ ಅವರನ್ನು ಕರೆದು ಕೆಲವು ಮರದ ಸಾಮಾನುಗಳನ್ನು ಮಾಡಿಕೊಡಲು ಹೇಳಿದೆ. ಕೂಲಿಯನ್ನು ಒಂದು ಸಮಯ ಕಡಿಮೆಯಾಗಿ ಹೇಳುತ್ತಾರೊ ಎಂದು ಭಾವಿಸಿಕೊಂಡಿದ್ದೆ. ಇಷ್ಟು ಕೂಲಿ ಕೊಡಬಹುದು ಎಂದು ನನ್ನೊಳಗೇ ನಾನು ಹೇಳಿಕೊಂಡೆ. ಆದರೆ ಏನು ಆಶ್ಚರ್ಯ! ಅವರು ಕೇಳಿದ್ದೂ ಅಷ್ಟನ್ನೇ. ನನ್ನ ಮನಸ್ಸಿನಲ್ಲಿದ್ದ ಸಂಖ್ಯೆ ಅವರಿಗೆ ಹೇಗೆ ತಿಳಿಯಿತಂ?

ಎರಡು ದಿನಗಳು ಅವರು ನನ್ನ ಮನೆಯಲ್ಲಿ ಕೆಲಸಮಾಡಿದರು. ನನ್ನ ಮಿತ್ರ ಹೇಳಿದ್ದರಲ್ಲಿ ಒಂದು ವಾಕ್ಯ ಕೂಡ ವ್ಯತ್ಯಾಸವಿಲ್ಲ. ಎರಡನೆಯ ದಿನ ಕೆಲಸ ಮುಗಿದೊಡನೆ ಎರಡು ರೂಪಾಯಿ ಜಾಸ್ತಿ ಕೂಲಿಯನ್ನು ಅವರಿಗೆ ನಾನು ಕೊಟ್ಟೆ.

ಅವರು ಆ ಹಣವನ್ನು ತೆಗೆದುಕೊಂಡು ಎಣಿಸಿ ಮಾತಾಡಿದಷ್ಟನ್ನು ಮಾತ್ರ ತೆಗೆದುಕೊಂಡು, ಉಳಿದ ಎರಡು ರೂಪಾಯಿಗಳನ್ನು ನನಗೇ ಹಿಂದಿರುಗಿಸಿಬಿಟ್ಟರು. ಕಾಗದ, ಪೆನ್ನು ಬೇಕು ಎಂದು ಸಂಜ್ಞೆಮಾಡಿದರು. ನಾನು ಕೊಟ್ಟೊಡನೆ, 'ಇನಾಮು ತೆಗೆದುಕೊಳ್ಳುವುದಿಲ್ಲ' ಎಂದು ಬರೆದು ತೋರಿಸಿದರು.

ಈಗ ನಿಜವಾಗಿಯೂ ಅವರನ್ನು ನೋಡಿ ನನಗೆ ಒಂದು ವಿಧವಾದ ಭಕ್ತಿ ಉಂಟಾಯಿತು. ಹಣಕ್ಕಾಗಿ ಕೆಲಸಮಾಡುತ್ತಾರೆ. ಹಣ ಕೊಟ್ಟರೆ ಬೇಡ ಎನ್ನುತ್ತಾರಲ್ಲ. ಅವರ ರೀತಿ ನನಗೆ ಭ್ರಮೆಯನ್ನು ಉಂಟುಮಾಡಿತು. ಅವರನ್ನು ಅವರ ಮನೆಯಲ್ಲಿಯೆ ಹೋಗಿ ನೋಡಬೇಕು ಎಂದು ಯಾಕೊ ನನಗೆ ಪಶ್ಚಾತ್ತಾಪನೆ ಹೊಳೆಯಿತು. "ನಿಮ್ಮ ಕೂಡ ಮನೆಗೆ ಬರುತ್ತೇನೆ" ಎಂದದ್ದಕ್ಕೆ ಅವರು ಮುಗುಳ್ನಗುತ್ತ, "ಸರಿ" ಎಂದರು.

ನಾನು ಅವರೊಂದಿಗೆ ಹೊರಟೆ. ದಾರಿಯಲ್ಲಿ ಯಾರೊಂದಿಗೂ ಮಾತಾಡಲಿಲ್ಲ. ಅವರು ಚಿನ್ನಕುಡ್ಡೆ ಬೀದಿಯಲ್ಲಿ ಹೋಗಿ ಒಂದು ಹೂವಿನ ಅಂಗಡಿಯ ಬದಿಯಲ್ಲಿ ನಿಂತರು. ಅಂಗಡಿಯವನು ಎರಡಾಣೆ ಹೂವನ್ನು ಅವರಿಗೆ ಕಟ್ಟಿಕೊಟ್ಟ. ನಾನು ಕೊಟ್ಟಿದ್ದ ಹಣದಲ್ಲಿ ಎರಡಾಣೆ ಕೊಟ್ಟು, ಅಲ್ಲಿಂದ ಹೊರಟ ಅವರು ಒಂದು ಶ್ರೀಗಂಧದ ಅಂಗಡಿಯ ಮುಂದೆ ನಿಂತರು. ಎಂಟಾಣೆಗೆ ಶ್ರೀಗಂಧವನ್ನೂ ಒಂದು ಊದಬತ್ತಿ ಪ್ಯಾಕೆಟ್ಟನ್ನೂ ತೆಗೆದುಕೊಂಡವರೆ ಅಲ್ಲಿಂದ ಹೊರಟರು. ಆ ಅಂಗಡಿಗಳ ಮುಂದೆ ನಿಂತು ಅವರು ವ್ಯಾಪಾರಮಾಡಿದ ರೀತಿಯಿಂದ ಇದು ಪ್ರತಿದಿನ ನಡೆಯುವ ಕಾರ್ಯಕ್ರಮ ಎಂದು ನಾನು ತಿಳಿದುಕೊಂಡೆ.

ಅಲ್ಲಿಂದ ಅವರು ನೇರವಾಗಿ ಮನೆಗೇ ಹೊರಟದ್ದು. ಅವರದು ಆಡಂಬರವಿಲ್ಲದ ಚಿಕ್ಕ ಮನೆ. ಹೋದೊಡನೆ ಅವರು ತಮ್ಮ ಕೈಯಲ್ಲಿದ್ದ ಹೂವನ್ನು ಹೆಂಡತಿಗೆ ಕೊಟ್ಟರು. ಆಕೆ ಅದಕ್ಕೆ ಬದಲಾಗಿ ಒಂದಿಷ್ಟು ಮಲ್ಲಿಗೆ ಹೂವನ್ನು ಅವರ ಕೈಗೆ ಹಾಕಿದಳು. ನನಗೆ ಆಶ್ಚರ್ಯವಾಯಿತು. ಹೌದು, ಪತಿಯನ್ನು ಈಕೆ ನೆರಳಿನಂತೆ ಹಿಂಬಾಲಿಸುತ್ತಿದ್ದಾಳೆ.

ಬಳಿಕ ಈ ಮೌನಿ ತಮ್ಮ ಕೈಯಲ್ಲಿದ್ದ ಹಣ ಇತರ ಸಾಮಾನುಗಳೆಲ್ಲವನ್ನೂ ಪತ್ನಿಗೆ ನೀಡಿ, ತಾವು ಹೋಗಿ ಕೈಕಾಲು ತೊಳೆದುಕೊಂಡರು. ಆ ದಂಪತಿಯರು ನಡೆದುಕೊಳ್ಳುತ್ತಿದ್ದ ರೀತಿ ಸ್ನೇಹಿತರಂತೆ ಇತ್ತು.

ಅನಂತರ ಅವರು ಪಡಸಾಲೆಗೆ ಬಂದವರೆ ನನಗೊಂದು ಚಾಪೆ ಹಾಕಿ ತಾವೂ ಒಂದನ್ನು ಹಾಕಿಕೊಂಡು ಕುಳಿತರು. ಅವರ ಪತ್ನಿ ನಮ್ಮಿಬ್ಬರಿಗೂ ಒಂದೊಂದು ಲೋಟಾ ಮಜ್ಜಿಗೆಯನ್ನು ತಂದುಕೊಟ್ಟಳು.

"ಮಕ್ಕಳು ಇವೆಯೊ?" ಎಂದು ಕೇಳಿದೆ. ಅವರು ಎರಡು ಬೆರಳುಗಳನ್ನು ತೋರಿಸಿದರು. 'ಎಲ್ಲಿ, ಕಾಣಲಿಲ್ಲವಲ್ಲ' ಎಂದು ನಾನು ಭಾವಿಸಿಕೊಂಡಿರುವಾಗ, ಅವಳಿ ಮಕ್ಕಳಂತೆ ಇಬ್ಬರು ಬಾಲಕರು ಕಿವಿಗಳ ಹಿಂದೆ ಎಂಥದೆ ಹೂವನ್ನು ಸಿಕ್ಕಿಸಿಕೊಂಡು ಮನೆಗೆ ಪ್ರವೇಶಿಸಿದರು. ನಾನು ಅಪರಿಚಿತನಾಗಿದ್ದರೂ ನನಗೆ ವಂದನೆಯನ್ನು ಸಲ್ಲಿಸಿ ಅವರು ಒಳಗೆ ಹೋದದ್ದು ಅಚ್ಚರಿಯ ಸಂಗತಿಯಾಗಿತ್ತು.

ಬಳಿಕ ನಾವು ಸಂಜ್ಞೆಗಳ ಮೂಲಕವೂ ಬರೆದು ತೋರಿಸಿಯೂ ಹಲವು ವಿಷಯಗಳನ್ನು ಕುರಿತು ಮಾತಾಡಿಕೊಂಡಿದ್ದೆವು. ಅವರು ಹೇಳಿದ್ದೆಲ್ಲವೂ ನನಗೆ ಅರ್ಥವಾಯಿತು ಎನ್ನುವ ಹಾಗಿಲ್ಲ. ಆದರೆ ಅವರ ಮನೆ ನನಗೆ ಒಂದು ಹೊಸ ಜಗತ್ತಾಗಿಯೇ ಕಾಣಿಸಿತು. ಅವರು ಮಾತ್ರ 'ಇವರಲ್ಲಿ ಆಶ್ಚರ್ಯಪಡುವಂಥದು ಏನೂ ಇಲ್ಲ, ಹೂವು ಹೊಸದು: ಆದರೆ ಮರ ಹಳೆಯದು' ಎಂದು ಬರೆದು ತೋರಿಸಿದರು.

ನನಗೆ ಆ ವಾಕ್ಯಗಳು ಸರಿಯಾಗಿ ಅರ್ಥವಾಗದಿದ್ದರೂ ಏನೊ ತುಂಬಿದ ಹಾಗೆ ಭಾವನೆ.

ಅಲ್ಲಿಂದ ಹೊರಡುವುದಕ್ಕೆ ಮೊದಲು ಆ ಮೌನಿ ಹೇಳಿದ ಮಾತು ಮೇಲೂ ನನಗೆ ಅಚ್ಚರಿಯನ್ನು ತಂದಿತು.

"ನಾಳೆಗೆ ನನ್ನ ಸ್ನೇಹಿತನ ಮನೆಯಲ್ಲಿ ಕೆಲಸವಿದೆ. ತಾವು ಬರಬಹುದಲ್ಲವೆ?"

ಇನ್ನು ಮೂರು ದಿನಗಳು ನಾನು ಎಲ್ಲಿಯೂ ಹೋಗುವುದಿಲ್ಲ" ಎಂದು ಅವರು ಬರೆದು ತೋರಿಸಿದರು.

"ಯಾಕೆ?"

"ಮೂರು ದಿನಗಳಿಗೆ ಆಗುವಷ್ಟು ಹಣವು ಈಗ ನನ್ನ ಕೈಯಲ್ಲಿ ಇದೆ."

ಅದಕ್ಕೆ ಮೇಲೆ ಅವರೊಂದಿಗೆ ಮಾತಾಡಲು ನನ್ನಿಂದ ಸಾಧ್ಯವಾಗಲಿಲ್ಲ. "ನಮಸ್ಕಾರ" ಎಂದು ಹೇಳಿದವನೆ ನಾನು ಹೊರಬಂದುಬಿಟ್ಟೆ.

# ಮಳೆಗೆ ಆಶ್ರಯ ಪಡೆಯಲು ಹೋಗಿ

ಮದರಾಸಿನ ಜಾತಕದಲ್ಲಿ 'ಜಾಹೀರಾತು ಯೋಗ' ಎನ್ನುವುದು, ಅದರ ಪರಮಾವಧಿ ಸ್ಥಿತಿಯಲ್ಲಿ ಇದೆ ಎಂದು ಕಾಣುತ್ತದೆ. ಒಂದು ತಲೆನೋವೋ, ಜಲದೋಷವೋ ಜ್ವರವೋ ಬಂದರೂ ಸಾಕು, ಒಡನೆ ಅದಕ್ಕೆ ರೆಕ್ಕೆ ಮೊಳೆತು ದೇಶದಾತ್ಯಂತ ದೊಡ್ಡ ಸುದ್ದಿಯಾಗಿ ಹರಡಿಬಿಡುತ್ತದೆ. ನಗರದ ಸಂದಿಗೊಂದಿಗಳು, ಕಸತುಂಬಿದ ಗುಡಿಸಲುಗಳು, ಫುಟ್‌ಪಾತಿನಲ್ಲಿ ವಾಸಿಸುವ ಜನರು, ಇವರ, ಇಂಥ, ವಿಷಯಗಳ ಬಗ್ಗೆ ಅಷ್ಟು ಹೆಚ್ಚಾಗಿ ಸುದ್ದಿ ಪ್ರಕಟವಾಗುವುದಿಲ್ಲ. ಕೆಲವು ಸಮಯಗಳಲ್ಲಿ ಆ ವಿಷಯಗಳಲ್ಲಿ ಯೋಗ ಒದಗಿಬರುತ್ತದೆ. ಧಗಧಗವೆಂದು ಗುಡಿಸಲುಗಳು ಹತ್ತಿ ಉರಿದರೆ ಅಥವಾ ಅಕ್ರಮವಾಗಿ ಸಾರಾಯಿ ಶೇಖರಿಸಿದ್ದು ಇಲ್ಲವೆ ವಾರ್ನಿಷ್ ಕುಡಿದು ಸತ್ತಾಗ—ಪತ್ರಿಕೆಗಳು ಶೀರ್ಷಿಕೆಗಳೊಂದಿಗೆ ಸುದ್ದಿಯನ್ನು ಪ್ರಕಟಿಸುತ್ತವೆ.

ನಗರದಲ್ಲಿ ಮಳೆ ಇಲ್ಲದುದರಿಂದ ಜಲಕ್ಷಾಮ ಎನ್ನುವುದು ಎಲ್ಲರಿಗೂ ತಿಳಿದ ಸುದ್ದಿಯಾಗಿತ್ತು. ನಲ್ಲಿಗಳು ಕಣ್ಣೀರು ಸುರಿಸುತ್ತಿದೆಯೆಂದೂ, ಹಾಲಿಗೆ ನೀರನ್ನು ಬೆರಸಲು ನೀರಿಲ್ಲದೆ ಹಾಲಿನವರು ಪೇಚಾಡುತ್ತಿದ್ದಾರೆಂದೂ, ಪತ್ರಿಕೆಗಳು ಅಳುತ್ತ ಸುದ್ದಿಯನ್ನು ಪ್ರಕಟಿಸಿದ್ದುವು. ನೀರಿನ ತೊಂದರೆಯ ಶ್ರಮವನ್ನು ಔಷಧಿಗೆ ಸಹ ಅರಿಯಲು ಸಾಧ್ಯವಿಲ್ಲದ ಕೆಲವರು ಪತ್ರಿಕೆಗಳ ಸುದ್ದಿಯನ್ನು ನೋಡಿಯೇ ತಿಳಿದುಕೊಂಡರು.

ಎಷ್ಟು ದಿನಗಳ ವರೆಗೆ ಈ ಕ್ಷಾಮದ ಸುದ್ದಿಯನ್ನೇ ಪತ್ರಿಕೆಗಳು ಪ್ರಕಟಿಸಿಕೊಂಡಿರುವುದು ಸಾಧ್ಯ? ಅವುಗಳಿಗೆ ಹೊಸ ಸುದ್ದಿ ಕೊಡುವ ಹಾಗೆ ದಿಢೀರೆಂದು ಒಂದು ದಿನ ಮದರಾಸಿನಲ್ಲಿ ಮಳೆ ಬೀಳಲು ಪ್ರಾರಂಭಿಸಿತು.

ಬಾನಿಗೆ ಅಂದು ಅಸಾಧ್ಯ ಸಿಟ್ಟು ಬಂದಿತ್ತು ಎಂದು ಕಾಣುತ್ತದೆ.

ಗಾಳಿ, ಮಳೆ, ಗುಡುಗು, ಮಿಂಚು—ಇವಿಷ್ಟನ್ನೂ ಒಟ್ಟಿಗೆ ಕಂಡೊಡನೆ ಪತ್ರಿಕೆಯವರಿಗೆ ಭಾರೀ ಕೋಲಾಹಲ. ಸಂಜೆ ಪತ್ರಿಕೆಗಳೂ ಸರಿ, ಬೆಳಗಿನ ಪತ್ರಿಕೆಗಳೂ ಸರಿಯೆ—ಮಳೆಯ ಸುದ್ದಿಯನ್ನು ಅವು ಪುಟದಿಂದ ಪುಟಕ್ಕೆ ತುಂಬಿಸಿ ತೋಯಿಸಿಬಿಟ್ಟುವು.

ಮಳೆ ಸುಯ್ಯುತ್ತಿರುವ ಸುದ್ದಿ ಪತ್ರಿಕೆಗಳಲ್ಲಿ ಪ್ರಕಟವಾಗುವ ಮೊದಲೆ ನಗರದ ಕೆಲವು ಪ್ರಮುಖರು ವಾಚಕರ ವಾಣಿಗೆ ಖಾರವಾಗಿ ಬರೆಯತೊಡಗಿದ್ದರು. ತಮ್ಮ ಮನೆಯಲ್ಲಿ ವಿದ್ಯುತ್ ತೊಂದರೆ ಕೊಡುತ್ತಿದೆಯೆಂದು ಕೆಲವರು, ತಮ್ಮ ಕಾರು ವೇಗವಾಗಿ ರಸ್ತೆಯಲ್ಲಿ ಹೋಗಲು ಸಾಧ್ಯವಿಲ್ಲ ಎಂದು ಮತ್ತೆ ಕೆಲವರು. ಒಂದು ಹನಿ ಮಳೆ ನೀರನ್ನೂ ತಮ್ಮ ದೇಹದಲ್ಲಿ ಸಿಂಪಡಿಸಿಕೊಳ್ಳಲು ಅಪೇಕ್ಷಿಸದ ಭಾಗ್ಯಶಾಲಿಗಳು ಅವರು.

ಎರಡನೆಯ ದಿನದ ರಾತ್ರಿ ವಿಶ್ರಾಂತಿ ತೆಗೆದುಕೊಂಡಿದ್ದ ಆಗಸ, ಮೂರನೆಯ ದಿನ ಅಪರಾಹ್ಣ ಮತ್ತೆ ಮುಗಿಲಿನಿಂದ ಆವರಿಸಿಕೊಂಡಿತು. ಬ್ರಹ್ಮಾಂಡವಾಗಿ ಕತ್ತಲೆ ಕವಿದಿದ್ದ ಬಾನಿಗೆ, ಆಗಾಗ್ಗೆ ಮಿಂಚು ಬೆಳಕನ್ನು ತೋರಿಸುತ್ತಿತ್ತು. ಡೋಲು ಬಾರಿಸಿದ ಹಾಗೆ ಗುಡುಗಿನ ಅಬ್ಬರ.

ರಾತ್ರಿ ಎಂಟು ಗಂಟೆಗೂ ಮೇಲಾಗಿದೆ. ವಿದ್ಯುತ್ ತೊಂದರೆಯಿಂದ ಒಂದೆರಡು ಬೀದಿಗಳನ್ನು ಬಿಟ್ಟರೆ, ಉಳಿದೆಡೆ ಮಳೆನೀರಿನೊಂದಿಗೆ ವಿದ್ಯುತ್ ಬೆಳಕೂ ಮಂದವಾಗಿ ಬೆಳಕನ್ನು ಚೆಲ್ಲುತ್ತ ಇದೆ. ಮಳೆನೀರು ಬೀದಿಗಳಲ್ಲಿ ಪ್ರವಾಹವಾಗಿ ಹರಿದು ಸ್ವಾಗತಿಸದ ಅತಿಥಿಯಂತೆ ಅದರ ಆಗಮನವಾಗಿದೆ.

ಆ ಅತಿಥಿಯಂತೆ ಬೇರೆ ಕೆಲವರು ಮಳೆನೀರಿನಿಂದ ತೋಯದಿರಲು ರಸ್ತೆಗಳ ಇಕ್ಕೆಲಗಳಲ್ಲಿ ನಿಂತುಕೊಂಡಿದ್ದಾರೆ. ನಗರದಲ್ಲಿ ಮಳೆ ಹುಯ್ಯುವುದೇ ಬೇಡ ಎನ್ನುವ ಭಾವನೆಯುಳ್ಳವರು ಅವರು. ರಸ್ತೆಯ ಬದಿಯಲ್ಲಿರುವ ಮರ, ಬಾಗಿಲು, ಮುಚ್ಚಿದ್ದ ಅಂಗಡಿಯ ಮುಂಬಾಗ, ಬಸ್ ಸ್ಟ್ಯಾಂಡು—ಇಂಥವೇ ಈ ನರನಾರಾಯಣರಿಗೆ ಆಸರೆ.

ಮುಂದೆ ಪಡಸಾಲೆಯಿದ್ದು ಮನೆಯಿದ್ದರೆ ಅದು ಹಳೇ ಕಾಲದವರದ್ದು ಅಲ್ಲವೆ? ಕಂಪೌಂಡಿನ ಗೋಡೆಯೇ ಕೋಟೆಯ ಹಾಗೆ. ಮನೆ ಹೀಗೆಯೇ ಕಟ್ಟಬೇಕೆಂದು ಕಾನೂನು ಇದೆಯಂತೆ. ಮಳೆಯಿರಲಿ, ಗುಡುಗಿರಲಿ, ಮಿಂಚಿರಲಿ ಯಾರೂ ಈ ಮನೆಗಳ ಮುಂದೆ ನಿಲ್ಲಲು ಸಾಧ್ಯವಿಲ್ಲ. ಯಾಕೆಂದರೆ ಹಾಗೆ ನಿಲ್ಲಬೇಕಾದರೆ ಅರ್ಧ ಅಡಿ ಜಾಗ ಸಹ ಅಲ್ಲಿ ಇಲ್ಲವಲ್ಲ. ದೊಡ್ಡ ದೊಡ್ಡ ಕಂಪೌಂಡುಗಳಿರುವ ಮನೆಗಳೋ 'ನಾಯಿಗಳಿವೆ ಎಚ್ಚರಿಕೆ'; ಇಲ್ಲವೇ ಗೂರ್ಖನ ಕಾವಲು.

ಮೈಲಾಪುರದ ಕಡೆಗೆ ಬರುತ್ತಿದ್ದ ನಾಲ್ಕೈದು ಜನರಲ್ಲಿ ವೆಳ್ಳೈಸಾಮಿಯೂ ಒಬ್ಬ. ಹಗಲು ಹೊತ್ತು ಹಲವು ಜಾಗಗಳಲ್ಲಿ ಕಾಲ ಕಳೆದದ್ದಾಯಿತು. ಎರಡು ತಿಂಗಳ ಹಿಂದೆ ಅವನು ಹೊಟ್ಟೆಯ ಪಾಡಿಗಾಗಿ ಪಟ್ಟಣಕ್ಕೆ ಬಂದು ಸೇರಿದ್ದಾನೆ. ಶರೀರಶ್ರಮದಿಂದ ಮಾಡುವ ಕೆಲಸವೆಲ್ಲವನ್ನೂ ಆತ ಲೆಕ್ಕಿಸದೆ ಮಾಡುತ್ತಾನೆ. ಕೊತ್ತವಾಲ್ ಚಾವಡಿಯಲ್ಲಿ ಮೂಟೆ ಹೊರುವುದು, ಕೈಗಾಡಿ ತಳ್ಳುವವನಿಗೆ ಸಹಾಯಮಾಡುವುದು, ಸೌದೆ ಒಡೆಯು ವುದು, ಪ್ರಯಾಣಿಕರ ಪೆಟ್ಟಿಗೆ ಹಾಸಿಗೆಗಳನ್ನು ಹೊತ್ತು ಸಾಗಿಸುವುದು—ಇಂಥವನ್ನೆಲ್ಲ ಸಮಯಕ್ಕೆ ತಕ್ಕ ಹಾಗೆ ಅವನು ಮಾಡುತ್ತಿದ್ದ.

ಮಣ್ಣಡಿಯಿಂದ ಅವನು ಮೈಲಾಪುರಕ್ಕೆ ಬರಲು ಒಂದು ಕಾರಣವು ಇತ್ತು. ಕೈ-ಗಾಡಿ ಎಳೆಯುವ ಕರುಪ್ಪನ್ ಅಲ್ಲಿಯೇ ಎಂದರೆ ಕೂವು ಕೊಳಚೆ ಪ್ರದೇಶದ ಗುಡಿಸಲಿನಲ್ಲಿ ವಾಸವಾಗಿದ್ದ. ಕರುಪ್ಪನೊಂದಿಗೆ ಒಂದು ದಿನ ವೆಳ್ಳೈಸಾಮಿ ಅವನ ಗುಡಿಸಲಿಗೆ ಹೋಗಿದ್ದಾನೆ. ಒಂದು ಹೊತ್ತು ಅಲ್ಲಿ ಊಟವನ್ನೂ ಮಾಡಿದ್ದಾನೆ. ಹೆಚ್ಚಿಗೆ ಅವ-ನೊಂದಿಗೆ ಒಡನಾಟ ಇಲ್ಲ. ಒಂದು ದಿನ ಮಾತ್ರ ಹೋಗಿದ್ದು ಬಂದಿದ್ದಾನೆ.

ಸಿಟಿ ಬಸ್ಸಿನಲ್ಲಿ ಹೋಗುವುದೆಂದರೆ ಮೂವತ್ತು ಪೈಸೆ ಖರ್ಚಾಗುತ್ತದೆ. ಕಿಸೆಯಲ್ಲಿ ರುವುದೊ ತೊಂಬತ್ತೈದು ಪೈಸೆ ಮಾತ್ರ. ಒಳ್ಳೆಯ ದಿನಗಳಲ್ಲಿಯೆ ಕೆಲಸಕ್ಕಾಗಿ ಪರದಾಟ. ಮಳೆ ಹಿಡಿದಿದ್ದುದರಿಂದ, ಎರಡು ಮೂರು ದಿನಗಳಿಂದ ಅವನ ಸಂಪಾದನೆ ಹಾಸಿಗೆ ಹಿಡಿದಿದೆ. ಹೊಟ್ಟೆ ಮೂರು ಹೊತ್ತು ಮಾತ್ರವಲ್ಲ, ಐದಾರು ಸಲವೂ ಹಸಿಯಾಗುತ್ತದೆ. ಒಂದೇ ಒಂದು ದಿನ ಒಂದು ಹೊತ್ತಾದರೂ ಅದನ್ನು ಸರಿಯಾಗಿ ಗಮನಿಸಿದರೆ ತಾನೇ. ಅದು ಮತ್ತೊಂದು ಸಮಯದ ವರೆಗೆ ಸುಮ್ಮನಿರಲು ತಾಳಿಕೊಳ್ಳುತ್ತದೆಯೆ?

ರಾಯಪೇಟೆ ರಸ್ತೆಯ ಮೂಲಕ ಮೈಲಾಪುರದ ಎಲ್ಲೆಗೆ ಬಂದವನು, ಯಾರನ್ನೊ ಕೇಳಿ ವಿಚಾರಿಸಿಕೊಂಡು, ಈಗ ಆತ ಪೂರ್ವಾಭಿಮುಖವಾಗಿ ಹೆಜ್ಜೆ ಹಾಕತೊಡಗಿದ. ಸುರಿಯುತ್ತಿರುವ ಮಳೆಯಲ್ಲಿ ನಾಲ್ಕು ಮೈಲುಗಳಿಗಿಂತಲೂ ಹೆಚ್ಚಿಗೆ ನಡೆದು ಬಂದಿದ್ದ ವನಿಗೆ, ದಾರಿಯಲ್ಲಿ ಸಿಕ್ಕಿದ ಒಂದು ಚಹಾ ಅಂಗಡಿಯನ್ನು ಕಂಡೊಡನೆ ಅವನಿಗೆ ಹಸಿವು ಜಾಸ್ತಿಯಾಯಿತು. ನಾಯರ್ ಹತ್ತಿರ ಹತ್ತು ಪೈಸೆಗೆ ಮೂರು ಬನ್ನುಗಳನ್ನು ತೆಗೆದು ಕೊಂಡು, ನಿಂತ ಹಾಗೆಯೆ ಅವನ್ನು ತಿಂದು, ಬಳಿಕ ಎರಡು ಬಾಳೆ ಹಣ್ಣುಗಳನ್ನು ತಿಂದು ಮುಗಿಸಿದ. ಒಟ್ಟು ಖರ್ಚಾದದ್ದು ನಾಲ್ವತ್ತು ಪೈಸೆ. ಆದರೆ ಚಳಿಯಾಗಿ ಗಡಗಡ ನಡುಗಿ ಕೊಂಡಿದ್ದ ಅವನ ದೇಹ, ಒಂದು ಕಪ್ ಬಿಸಿಬಿಸಿ ಚಹಾಕ್ಕಾಗಿ ಚಡಪಡಿಸಿತು. ಹತ್ತು ಪೈಸೆ ಕೊಟ್ಟು ಒಂದು ಕಪ್ ಚಹಾವನ್ನೂ ಕೊಂಡು ಕುಡಿದ. ದೇಹದೊಳಗೆ ಬಿಸಿಯಾಗಿ ಅದು ಹರಿದ ಮೇಲೆಯೇ ಅವನಿಗೆ ಹಿತವಾದ ಹಾಗಾಯಿತು. ಕುಪ್ಪಂ ಕಡೆಗೆ ತಿರುಗುವ ತಿರುವಿಗೆ ಬಂದೊಡನೆ ವೆಳ್ಳೈಸಾಮಿ ಬೆರಗಾದ. ಅಲ್ಲಿದ್ದ ಮೊದಲಿನ ಗುಡಿಸಲುಗಳು ಈಗ ಗುಡಿ ಸಲುಗಳಾಗಿ ಇಲ್ಲ. ಅವುಗಳಲ್ಲಿ ಮನುಷ್ಯರೂ ಇದ್ದ ಹಾಗೆ ಕಾಣೆ. ಮೊಳಕಾಲಿನ ವರೆಗೆ ಹೂತುಕೊಳ್ಳುತ್ತಿದ್ದ ಕೆಸರಿನಲ್ಲಿಯೂ ನೀರಿನಲ್ಲಿಯೂ ಆತ ಹೆಜ್ಜೆಹಾಕಿದ. ಎರಡು ಗುಡಿಸಲುಗಳು ನೆಲಸಮವಾಗಿ ಹೋಗಿದ್ದುವು. ಅಲ್ಲಿನ ಸ್ಥಿತಿಯನ್ನು ನೋಡಿದ ವೆಳ್ಳೈ ಸಾಮಿ ಯಾಕೆ ಇಷ್ಟು ದೂರ ತಾನು ಹುಡುಕಿಕೊಂಡು ಇಲ್ಲಿಗೆ ಬಂದೆನೊ? ಎಂದು ಅಂದುಕೊಂಡ.

ಆದರೆ ಕರುಪ್ಪನ ಗುಡಿಸಲನ್ನು ಈ ಕಡೆ ಇರುವ ವಿದ್ಯುತ್ ಕಂಬದ ಸಹಾಯದಿಂದ ಆತ ಕಂಡುಹಿಡಿದ. ಆ ಗುಡಿಸಲ ಸಣ್ಣ ಕೈಸಾಲೆಯ ಮುಂದೆ ಅದರ ಬಿದಿರ ತಡಿಕೆ ಬಿದ್ದುಹೋಗಿದೆ. ಒಳಗೆ ಮಂದವಾದ ಬೆಳಕು ಇರುವ ಹಾಗೆ ಬಾಗಿಲಿಂದ ಕಾಣುತ್ತ ಇದೆ. ಗಾಳಿಗೆ ಚಿಮಿಣಿಯ ಸೊಡರು ಜೋಕಾಲಿಯಾಡುತ್ತಿದ್ದು ಬೆಳಕು ಕಣ್ಣು-ಮುಚ್ಚಾಲೆಯಾಟ ಆಡುತ್ತಿದೆ.

ಹೊರಗೆ ನಿಂತೇ ವೆಳ್ಳೈಸಾಮಿ ಗುಡಿಸಲನ್ನು ಗಮನಿಸಿದ. ಸೋರುತ್ತಿರುವ ಜಾಗ ಗಳಲ್ಲಿ ನೀರು ನೆಲದ ಮೇಲೆ ಬೀಳದ ಹಾಗೆ ಅಲ್ಲಲ್ಲಿ ಮಣ್ಣಿನ ಚಟ್ಟಿಗಳು. ಇವು ಸಾಕಾಗ ಲಿಲ್ಲ ಎಂದು ಕಾಣುತ್ತದೆ. ರಂಧ್ರಗಳು ಜಾಸ್ತಿಯಾಗಿದ್ದು ಮೇಲಿನಿಂದ ಮಳೆನೀರು

ಒಂದೇ ಸಮನೆ ತೊಟತೊಟ ಎನ್ನುತ್ತಿದೆ. ಆ ಗುಡಿಸಲ ಒಂದು ಮೂಲೆಯಲ್ಲಿ ಒಬ್ಬರಿ ಗೊಬ್ಬರನ್ನು ಅಪ್ಪಿಕೊಂಡು ಇಬ್ಬರು ಕುಳಿತ್ತಿದ್ದರು. ಅವರೀರ್ವರೂ ಹೆಂಗಸರೇ. ಅವ ರಲ್ಲೊಬ್ಬಳು ಕರುಪ್ಪನ ತಾಯಿ, ಮತ್ತೊಬ್ಬಳು ಅವನ ಮಗಳು. ಆತನ ಹೆಂಡತಿ ತೀರಿ ಕೊಂಡಿರುವ ವಿಚಾರ ವೆಳ್ಳೈಸಾಮಿಗೆ ಮೊದಲೇ ತಿಳಿದಿದೆ.

ಹೊರಗೆ ನಿಂತಂತೆಯೆ ವೆಳ್ಳೈಸಾಮಿ ಯೋಚಿಸತೊಡಗಿದ. ಹತ್ತು ಹದಿನೈದಂ ದಿನಗಳ ಹಿಂದೆ, ಒಂದು ಹಗಲಿನಲ್ಲಿಯೇ ಆತ ಇಲ್ಲಿಗೆ ಬಂದಿದ್ದಾಗ, ಅವನಿಗೆ ತುಂಬಾ ಬೇಜಾರಾಗಿತ್ತು. ಆ ಗುಡಿಸಲ ಹಿಂಭಾಗದಲ್ಲಿರುವ ಕೊಳಕು ಗುಂಡಿಯಲ್ಲಿ ಎಮ್ಮೆಗಳೂ ಹಂದಿಗಳೂ ಮಲಗಿ ಅದನ್ನು ರಾಡಿಮಾಡಿದ್ದುವು. ದುರ್ನಾತ, ಮೂಗು ಹಿಡಿಯುವ ಹಾಗಿದೆ. ಹಗಲು ಹೊತ್ತಿನಲ್ಲಿಯೂ ಭಾರೀ ಸೊಳ್ಳೆಪಡೆ. ಇಷ್ಟು ಗೊತ್ತಿದ್ದೂ ಈಗ ಮಳೆಯಿಂದ ರಕ್ಷಿಸಿಕೊಳ್ಳಲು ಆತ ಆ ಗುಡಿಸಲ ಮುಂದೆ ಬಂದು ನಿಂತಿದ್ದಾನೆ.

ಗುಡಿಸಲಲ್ಲಿ ಕರುಪ್ಪನ್ ಇಲ್ಲ. ಅಲ್ಲಿರುವವರಿಗೇ ಅಲ್ಲಿ ಜಾಗವಿಲ್ಲ. ಗುಡಿಸಲು ನೀರಗುಂಡಿಯ ಹಾಗಿದೆ. ಇಷ್ಟಕ್ಕಾಗಿ ನಾನು ನಾಲ್ಕು ಮೈಲುಗಳ ದೂರದಿಂದ ನಡೆದು ಬಂದೆನಲ್ಲ, ಎಂದು ವೆಳ್ಳೈಸಾಮಿ ತನಗೆ ತಾನೇ ಪ್ರಶ್ನೆಹಾಕಿಕೊಂಡು ಅಲ್ಲಿಂದ ಹಿಂದಿರು ಗಲು ಪ್ರಯತ್ನಿಸಿದ.

ಆಗ ಒಂದು ಘಟನೆ ನಡೆಯಿತು.

"ಅಜ್ಜೀ, ಅಜ್ಜೀ, ಅಪ್ಪಾಜಿ ಬಂದಿದ್ದಾನೆ" ಎನ್ನುತ್ತ ಆ ಹುಡುಗಿ ಬಾಗಿಲಿಗೆ ಬಂದಳು. ಇಲ್ಲಿ ನಿಂತಿದ್ದವನ ಮುಖವನ್ನು ಸರಿಯಾಗಿ ಗಮನಿಸದೆ "ಬಂದುಬಿಟ್ಟೆಯಾ? ದಾರಿ ಗೊತಾಯ್ತಲ್ಲ" ಎಂದು ಸಿಟ್ಟಿನಿಂದ ನುಡಿದಳು.

ವೆಳ್ಳೈಸಾಮಿ ದಿಗ್ಭ್ರಮೆಗೊಂಡ. "ನಾನು......ನಾನು......"ಎಂದು ತೊದಲಿದ

ಆ ಹುಡುಗಿ, ಚಂಪಕ ಇವನನ್ನು ಈಗ ಗುರುತು ಕಂಡುಹಿಡಿದಳು. ಬಂದವನು ಯಾರು ಎನ್ನುವುದು ಅವಳಿಗೆ ತಿಳಿದೊಡನೆ ಅವಳ ಮುಖದಲ್ಲಿ ಅನಿರೀಕ್ಷಿತವಾದ ಮಾರ್ಪಾಟು.

"ಅವನನ್ನು ಹುಡುಕಿಕೊಂಡೇ ನಾನು ಇಲ್ಲಿಗೆ ಬಂದದ್ದು" ಎಂದು ಹೇಳಿದ ವೆಳ್ಳೈ-ಸಾಮಿ "ಯಾಕೆ ಕರುಪ್ಪ ಇನ್ನೂ ಮನೆಗೆ ಬರಲಿಲ್ಲವೊ?" ಎಂದು ಕೇಳಿದ.

"ಮನೆ ಒಂದು ಕೇಡು ಅವನಿಗೆ" ಎಂದು ಆಕೆ ನುಡಿದು, "ಇಲ್ಲಿಗೆ ಮುಖ ಹಾಕಿ ಎರಡು ದಿನ ಆಯ್ತು. ಅಜ್ಜೀಗೆ ಜ್ವರ ಎನ್ನೋದು ಅವನಿಗೆ ಗೊತ್ತು. ಸಾರಾಯಿ ಅಂಗಡಿಗೆ ಮನಸೋಯಿಚ್ಛೆ ಹೋಗಿ ಕುಡಿದು ಎಲ್ಲೆಲ್ಲೋ ಮಲಗಿಕೊಳ್ತಾ ಇದ್ದಾನೆ" ಎಂದಳು ಭಾರವಾದ ಧನಿಯಲ್ಲಿ.

ವೆಳ್ಳೈಸಾಮಿಗೆ ಈ ಸುದ್ದಿಯನ್ನು ನಂಬುವುದಕ್ಕೇ ಸಾಧ್ಯವಾಗಲಿಲ್ಲ. ಅವನಿನ್ನೂ ನಗರದ ಜೀವನಕ್ಕೆ ಸಂಪೂರ್ಣವಾಗಿ ಹೊಂದಿಕೊಂಡಿಲ್ಲದೇ ಇರುವವನು. 'ಇಂಥ ಮಳೆಯ

ವಿರಟಾಟ್ಟಹಾಸದಲ್ಲಿ ಹೇಗೆ ಒಬ್ಬ ಕಾಯಿಲೆಯಲ್ಲಿರುವ ತನ್ನ ತಾಯಿಯನ್ನೂ ಹೊಟ್ಟೆಯಲ್ಲಿ ಹುಟ್ಟಿದ ಮಗಳನ್ನೂ ಮರೆತಿರಲು ಸಾಧ್ಯ? ಛೆ, ಇವನೂ ಒಬ್ಬ ಮನುಷ್ಯನೇ?'

ಈಗ ಒಡನೆ ಅಲ್ಲಿಂದ ಹಿಂದಿರುಗಬೇಕೆಂದು ವೆಳ್ಳೈಸಾಮಿಗೆ ಮನಸ್ಸಾಗಲಿಲ್ಲ. ಆ ಸ್ಥಿತಿಯಲ್ಲಿ ಅವರನ್ನು ಕಂಗಾಲಾಗಿ ಬಿಟ್ಟು ತಾನು ತಪ್ಪಿಸಿಕೊಳ್ಳುವ ಪ್ರಯತ್ನ ಅವನಿಗೆ ಹಿಡಿಸಲಿಲ್ಲ. ಬೇರೆ ಈಗ ಏನು ಮಾಡಲು ಸಾಧ್ಯವಿದೆ? ಅದೂ ಸಹ ಅರ್ಥವಾಗಲಿಲ್ಲ. ತಾನೇ ಅಲ್ಲಿಗೆ ಮಳೆಗಾಗಿ ರಕ್ಷಣೆಪಡೆಯಲು ಬಂದದ್ದು.

ಚಂಪಕ ಅವನನ್ನು ಒಳಗೆ ಬರಹೇಳಿದಳು. ಅವನು ಅವಳನ್ನು ಹಿಂಬಾಲಿಸಿದ. ಒಳಗೆ ಕಾಲು ಹಾಕಿದ ಕಡೆಯಲ್ಲೆಲ್ಲ ನೀರು, ತೇವ. ಆ ಮುದುಕಿಯ ಬಳಿ ತಾನು ಹಾಕಿಕೊಂಡು ಕುಳಿತಿದ್ದ ಮರದ ಪಲಿಗೆಯನ್ನು ಈ ಕಡೆ ತಳ್ಳಿದಳು, ಚಂಪಕ. ಅವನನ್ನು ಕುಳಿತುಕೊಳ್ಳಲು ಹೇಳಿದಳು. ಆದರೆ ವೆಳ್ಳೈಸಾಮಿ ಕುಳಿತುಕೊಳ್ಳಲಿಲ್ಲ. ಮೇಲುಗಡೆಯಿಂದ ಅವನ ತಲೆಯ ಮೇಲೂ ನೀರು ತೊಟತೊಟನೆ ತೊಟ್ಟುತ್ತಿತ್ತು.

ಈಗ ಆ ಹುಡುಗಿ ಇಲ್ಲಿಗೆ ಬಂದಿರುವವರು ಯಾರು ಎಂದು ಅಜ್ಜಿಗೆ ತಿಳಿಯಹೇಳಿದಳು. ಬಡತನದೊಂದಿಗೆ ವಯಸ್ಸೂ ಜತೆಗೂಡಿದ್ದುದರಿಂದ ಆಕೆಯ ಕಣ್ಣುಗಳೂ ಕಿವಿಗಳೂ ತಮ್ಮ ತಮ್ಮ ಕೆಲಸವನ್ನು ಮಾಡುವ ಹಾಗಿರಲಿಲ್ಲ. ಅವಳು ಕುಳಿತಿದ್ದ ರೀತಿ, ಅವನನ್ನು ನೋಡಿದ ಬಗೆ – ರೋಗಗ್ರಸ್ಥ ಕೋಳಿಯ ನೆನಪು ವೆಳ್ಳೈಸಾಮಿಗೆ ಉಂಟಾಯಿತು.

"ಕುಪ್ಪದವರ ಹಾಗೆ ನೀವು ಎಲ್ಲಿಯಾದರೂ ಹೊರಟುಹೋಗಬಹುದಿತ್ತಲ್ಲ" ಎಂದ ವೆಳ್ಳೈಸಾಮಿ.

"ಅಜ್ಜೀಗೆ ನಡೆಯೋಕ್ಕೆ ಆಗೊಲ್ಲ. ಇವಳನ್ನು ಹೀಗೆ ಬಿಟ್ಟು ನಾನೊಬ್ಬಳೇ ಎಲ್ಲಿಗೆ ಹೋಗಲೂ ಮನಸ್ಸಾಗಲಿಲ್ಲ."

"ಹೀಗೆ ನೀವಿಬ್ಬರೇ ಕುಳಿತು ಮಳೆಯಲ್ಲಿ ನೆನೆದರೆ ಸನ್ನಿಹಿಡಿದು ಸಾಯಬೇಕಾಗುತ್ತೆ ಅಷ್ಟೆ."

"ಬೇರೆ ಎಲ್ಲಿಗೆ ಹೋಗೋದು?"

ಎಲ್ಲಿಗೆ ಹೋಗುವುದು? ಅವಳ ಪ್ರಶ್ನೆ ಚಾಟಿಯ ಏಟಿನಂತಿದೆ. ಸಹಸ್ರ ಸಹಸ್ರ ಗಂಭೀರವಾದ ಮನೆಗಳೂ, ಮಾಳಿಗೆಗಳೂ, ಗುಡಿಗೋಪುರಗಳೂ ತುಂಬಿರುವ ತಮಿಳುನಾಡಿನ ರಾಜಧಾನಿಯಲ್ಲಿದ್ದುಕೊಂಡೇ ಅವಳು ಅವನಿಗೆ ಈ ಪ್ರಶ್ನೆ ಹಾಕಿದ್ದಾಳೆ.

"ಏನಾದರೂ ಹೊಟ್ಟೆಗೆ ಹಾಕಿದಿರೊ?"

"ಆಯ್ತು."

ಅವಳು ಸುಳ್ಳು ಹೇಳುತ್ತಿದ್ದಾಳೆ ಎನ್ನುವುದನ್ನು ಅಲ್ಲಿದ್ದ ಒಲೆ ಎತ್ತಿ ಸಾರುತ್ತಿತ್ತು.

ಒಲೆಯ ಮುಂದೆಯೂ ನೀರು ನಿಂತಿದೆ. ಅಲ್ಲಿದ್ದ ಒಂದಿಷ್ಟು ಬರಳು ನನೆಯಾಗಿ ಹೋಗಿದೆ ಅಡಿಗೆಮಾಡುವ ಮಣ್ಣಿನ ಚಟ್ಟಿಗಳೂ ತಲೆಕೆಳಗಾಗಿ ಬಿದ್ದಿದೆ.

ಸ್ವಲ್ಪ ಹೊತ್ತು ಏನೋ ಆಲೋಚನೆ ಮಾಡಿದ ವೆಳ್ಳೈಸಾಮಿ. "ಹಾಗಾದರೆ, ನೀವಿಬ್ಬರು ನನ್ನ ಕೂಡೆ ಹೊರಟು ಬನ್ನಿ. ಎಲ್ಲಿಯಾದರೂ ಮಳೆಯಿಲ್ಲದಿದ್ದ ಜಾಗದಲ್ಲಿ ತಂಗೋಣ" ಎಂದ.

ಚಂಪಕ ಯೋಚನೆಮಾಡಿದಳು. ಒಡನೆ ಈ ಗುಡಿಸಲನ್ನು ಬಿಟ್ಟು ಎಲ್ಲಿಗಾದರೂ ಹೋಗಬೇಕೆಂದೇ ಅವಳ ಅಪೇಕ್ಷೆಯೂ ಸಹ. ಅಜ್ಜಿಯೊಂದಿಗೆ ಈ ರಾತ್ರಿಯನ್ನೂ ಕಳೆಯುವುದೂ ತುಂಬಾ ಕಷ್ಟದ ಸಂಗತಿಯೇ. ಆದರೆ, ಈಗ ಹೇಳಿಕೊಳ್ಳುವಂಥ ಪರಿಚಯವಿಲ್ಲದ ಒಬ್ಬನ ಕೂಡೆ ಹೊರಗೆ ಹೊರಡಲು ಭಯ.

"ಏನು ಯೋಚನೆ ಮಾಡ್ತಾ ಇದ್ದೀಯ? ನೀವಿಬ್ಬರೂ ಇಲ್ಲಿದ್ದರೆ ಮರಗಟ್ಟಿ ಸಾಯಬೇಕಾದದ್ದೇ"

"ಹೂಂ, ಆದಲ್ಲ. ಅಜ್ಜೀಗೆ ನಡೆಯೋಕೆ ಸಾಧ್ಯವಿಲ್ಲವಲ್ಲ......"

ವೆಳ್ಳೈಸಾಮಿ ಮುದುಕಿಯನ್ನು ಮೆಲ್ಲಗೆ ಎತ್ತಿ ನಿಲ್ಲಿಸಿದ. ಅವಳ ಮೈ ಸುಡುತ್ತಿತ್ತು. ಈತನೊಂದಿಗೆ ಮೊದಲು ಹೊರಡಲು ಚಂಪಕಳಿಗೆ ಸ್ವಲ್ಪ ಅಳುಕಿದ್ದರೂ ಈಗ, ದೇವರೇ ತಮ್ಮನ್ನು ಈ ಕುತ್ತಿನಿಂದ ಪಾರುಮಾಡಲು ಈತನನ್ನು ಕಳಿಸಿದ್ದಾನೆ ಎನ್ನುವ ಸಮಾಧಾನ. ಹಾಗಲ್ಲದೆ ಇವನ ಮಾತೂ ನಡತೆಯೂ ಅವಳಿಗೆ ಇವನಲ್ಲಿ ವಿಶ್ವಾಸವನ್ನುಂಟುಮಾಡಿದೆ.

ಗುಡಿಸಲಿನಲ್ಲಿ ಅವರು ತೆಗೆದುಕೊಳ್ಳುವುದಕ್ಕೆ ಸಾಮಾನು ಯಾವುದೂ ಇರಲಿಲ್ಲ. ಹಾಗೆಯೇ ಅದಕ್ಕೆ ಬೀಗಹಾಕುವ ಆವಶ್ಯಕತೆಯೂ ಇರಲಿಲ್ಲ. ಚಂಪಕ ಆ ಚಿಮಿಣಿ ದೀಪ ವನ್ನು ಉಫ್ ಎಂದು ಈಗ ಬಾಯಿಂದ ಊದಿ ಆರಿಸಿಬಿಟ್ಟಳು.

ಮುದುಕಿಯ ಭುಜಗಳನ್ನು ಈಗ ಭದ್ರವಾಗಿ ಹಿಡಿದುಕೊಂಡು ವೆಳ್ಳೈಸಾಮಿ ನಡೆಸಿ ಕೊಂಡು ಹೋದ. ಅರ್ಧ ನೆನೆದು ಪೂರ್ಣ ನೆನೆಯಲು ಸಿದ್ಧವಾಗಿರುವವರನ್ನು ಮಳೆ ಏನು ಮಾಡಲು ಸಾಧ್ಯವಿದೆ?

ಚಹಾದ ಅಂಗಡಿ ನಾಯರ್ ತನ್ನ ಅಂಗಡಿಯನ್ನು ಈಗ ಮುಚ್ಚಿದ್ದ. ವೆಳ್ಳೈಸಾಮಿ ಅವನನ್ನು ಕೂಗಿ, ಬಾಗಿಲನ್ನು ತೆಗೆಯಿಸಿ. ನಾಲ್ಕು ಬನ್ನುಗಳನ್ನು ಕೊಂಡು ಅವನ್ನು ಕೈಚೌಕದಲ್ಲಿ ಸುತ್ತಿ ಸೊಂಟಕ್ಕೆ ಸುತ್ತುಹಾಕಿದ. ಅವನ ಬಳಿ ಈಗ ಉಳಿದಿದ್ದುದು ಐದೇ ಪೈಸೆ. ನಾಯರ್ ಅಂಗಡಿಯಲ್ಲಿ ಅವನಿಗೂ ಕೆಲಸಮಾಡುವ ಮತ್ತೊಬ್ಬ ಹುಡುಗನಿಗೂ ಮಲಗುವಷ್ಟೇ ಜಾಗವಿದೆ. ಬೇರೆ ಎಲ್ಲಿ ಜಾಗ ಸಿಗುತ್ತದೆ ಎಂದು ವೆಳ್ಳೈಸಾಮಿ ನಾಯರನ್ನು ವಿಚಾರಿಸಿದ.

"ಸಾಂತೋಮ್ ಸಮುದ್ರದಂಡೆಯ ಸಮೀಪದಲ್ಲಿ ಒಂದು ಕಾರ್ಪೊರೇಶನ್ ಸ್ಕೂಲು ಇದೆ. ಅಲ್ಲಿಗೆ ಹೋಗಿ, ಅದರ ಬಾಗಿಲು ತೆಗೆದುಬಿಟ್ಟಿದ್ದಾರಂತೆ" ಎಂದ ನಾಯರ್.

"ಅದು ಎಲ್ಲಿದೆ?" ಎಂದ ವೆಳ್ಳೈಸಾಮಿ. ಅವನಿಗೆ ಮದರಾಸು ನಗರದ ಪರಿಚಯ ಇನ್ನೂ ಅಷ್ಟಾಗಿ ಆಗಲಿಲ್ಲ.

"ನನಗೆ ಗೊತ್ತು, ಬಾ" ಎಂದಳು ಚಂಪಕ.

ಅರ್ಧ ಮೈಲು ಅವರು ನಡೆದು ಹೋದ ಮೇಲೆ, ಅಲ್ಲಿಯೂ ಸ್ಥಳವಿಲ್ಲ ಎಂದು ಅವರಿಗೆ ತಿಳಿಯಬಂತು. ಅಲ್ಲಿ ಹೋಗಿ ನಿರುತ್ಸಾಹದಿಂದ ಹಿಂತಿರುಗಿದವರು ಒಂದಿಷ್ಟು ಜಾಗಕ್ಕಾಗಿ ಬಡಿದಾಡಲೂ ಸಿದ್ಧರಿದ್ದರು. ಇದನ್ನು ಕೇಳಿದೊಡನೇ ವೆಳ್ಳೈಸಾಮಿಗೆ ಅಳುವೇ ಬಂದುಬಿಟ್ಟಿತು. ಕೋಪವೂ ಉಂಟಾಯಿತು. ಮುದುಕಿ ಹೆಜ್ಜೆ ಎತ್ತಿಡಲಾರದೆ 'ಓ' ಎಂದುಕೊಂಡಿದ್ದಳು. ಚಂಪಕಳ ಕಣ್ಣುಗಳಲ್ಲಿ ನೀರು ತುಂಬಿರುವುದನ್ನು ಬೀದಿ ದೀಪದ ಬೆಳಕಿನಿಂದ ವೆಳ್ಳೈಸಾಮಿ ಗಮನಿಸಿದ. ರಸ್ತೆಯ ಒಂದು ಬದಿಯಲ್ಲಿ ಅವರು ಮೌನವಾಗಿ ನಿಂತು ಏನು ಮಾಡಲೂ ತೋಚದೆ ಕಂಗೆಟ್ಟಿದ್ದರು.

ಆಗ ಹತ್ತು ಗಂಟೆಗೂ ಸಮಯ ಮೀರಿದೆ ಎಂದು ಕಾಣುತ್ತದೆ. ಆ ರಾತ್ರಿ ಸಮಯದಲ್ಲಿಯೂ ಹಲವು ಕಾರುಗಳು ಹೋಗುತ್ತಲೂ ಬರುತ್ತಲೂ ಇದ್ದುವು. ಜೀವವಿಲ್ಲದ ಕಾರುಗಳಿಗೆ ಷೆಡ್ಡುಗಳು ಎಂದು ಒಂದಿದೆ. ಮಳೆಯಲ್ಲಿಯೂ ಬಿಸಿಲಿನಲ್ಲಿಯೂ ಅವು ಒಣಗಬಾರದು, ನೆನೆಯಬಾರದು. ಆದರೆ ಒಂದು ವರ್ಗದ ಮಾನವನಿಗೆ?

ಮತ್ತೆ ಬಂದ ದಾರಿಯಲ್ಲಿಯೆ ಅವರು ಹೆಜ್ಜೆ ಹಾಕಿದರು. ಅವರು ಹೆಜ್ಜೆ ಹಾಕುವಾಗ ಬಲಭಾಗದಲ್ಲಿ ಉದ್ದಕ್ಕೆ ಕಾಂಪೌಂಡ್ ಗೋಡೆ ಇರುವುದು ಕಾಣಿಸಿತು. ಆ ಗೋಡೆಯ ಒಳಗಡೆ ಮನೆಗಳಾವುವೂ ಇದ್ದಂತಿರಲಿಲ್ಲ. ಆದರೆ ಜಿಂಕ್ಷೀಟು ಹೊದಿಸಿದ ಎರಡು ಮೂರು ಕೊಟ್ಟಿಗೆಗಳು ಇದ್ದುವು.

ಆ ಕೊಟ್ಟಿಗೆಗಳನ್ನು ನೋಡಿದೊಡನೆ ವೆಳ್ಳೈಸಾಮಿಗೆ ನವೋತ್ಸಾಹ ಮೂಡಿತು. ಮತ್ತೆ ಮತ್ತೆ ಅವನು ಅವುಗಳತ್ತ ಕಣ್ಣು ಹಾಯಿಸಿದ. ಒಂದು ಕೊಟ್ಟಿಗೆಯಲ್ಲಿ ಆಡುಗಳೂ ದನಗಳೂ ಮೈಕೊಡವಿಕೊಂಡು ನಿಂತಿದ್ದುವು. ಮಗುದೊಂದರಲ್ಲಿ ಒಂದು ಕತ್ತೆ ಮಾತ್ರ ನಿಂತಿತ್ತು.

ದೇವರೇ ಈಗ ಕಣ್ಣು ತೆರೆದಿದ್ದಾನೆ ಎನ್ನುವ ಸಂತೋಷ ವೆಳ್ಳೈಸಾಮಿಗೆ. ಈ ಕಾಂಪೌಂಡಿಗೆ ಒಂದು ಕಡೆ ಎಲ್ಲಿಯಾದರೂ ಬಾಗಿಲು ಇದ್ದೇ ತೀರಬೇಕು. ಅದು ತೆರೆದಿದೆಯೊ ಬಾಗಿಲು ಹಾಕಿದೆಯೊ? ಹಾಕಿದ್ದರೆ ಗೋಡೆ ಹತ್ತಿ ಧುಮುಕುವುದೊಂದೇ ದಾರಿ. ಒಂದು ಸಮಯ ಕಾವಲಿನವರಿದ್ದರೂ ಈ ಮಳೆಯಲ್ಲಿ ಎಲ್ಲಿಯೋ ಅಡಗಿಕೊಂಡಿರುತ್ತಾರೆ. ಹಾಗೇನಾದರೂ ಅವರ ಕಣ್ಣಿಗೆ ಬಿದ್ದರೆ, ಅವರ ಕಾಲನ್ನು ಹಿಡಿದುಕೊಂಡರಾಯಿತು.

ಅವನ ಉದ್ದೇಶವನ್ನು ಗ್ರಹಿಸಿಕೊಂಡ ಚಂಪಕ ಈಗ ನಡುನಡುಗಿ ಹೋದಳು. ಅವಳ ಮುಖ ಬಿಳಿಚಿಕೊಂಡಿತು. ಅಲ್ಲಿ ಹೋಗುವುದು ಬೇಡ ಎಂದು ಅವಳು ಹಟ ಹಿಡಿದಳು.

"ಬೇಡ, ನಾನು ಹೇಳುವುದನ್ನು ಕೇಳು. ಅಲ್ಲಿಗೆ ಹೋಗುವುದು ಖಂಡಿತ ಬೇಡ."

ವೆಳ್ಳೈಸಾಮಿ ಕೋಪದಿಂದ ಕೂಗಿಕೊಂಡ:

"ಯಾಕೆ ಬೇಡ?"

"ನಾನು ಹೇಳುವುದನ್ನು ಕೇಳು, ಬೇಡ."

"ಈಗಲೇ ನಿನ್ನ ಅಜ್ಜಿಗೆ ಪ್ರಾಣ ಹೋಗ್ತಾ ಇದೆ. ಇನ್ನು ಮುಂದೆ ನನ್ನಿಂದಲೂ ನಡೆಯೋಕೆ ಸಾಧ್ಯವಿಲ್ಲದ ಹಾಗಾಗಿದೆ. ಇಲ್ಲಿ ಬೇಡ ಅಂದರೆ ಸಮುದ್ರಕ್ಕೆ ದಾರಿ ತೋರಿಸು. ಹೋಗಿ ಅಲ್ಲಿ ಮುಳುಗಿಬಿಡೋಣ."

ಚಂಪಕ ಅವನಲ್ಲಿ ಏನೇನೋ ಹೇಳಲು ಪ್ರಯತ್ನಿಸಿದಳು. ಈತ ಹೊರ ಊರಿನವನು. ವಿಷಯವನ್ನು ಏನೆಂದು ತಿಳಿಯದವನು. ಅವನೊಂದಿಗೆ ಹೇಳಬೇಕೆಂದೇ ಅವಳ ಕಾತರ. ಆದರೆ ಅವನ ಸಿಟ್ಟು ಸಿಡಿಮಿಡಿತನ ಅವಳನ್ನು ಮೂಕಳನ್ನಾಗಿ ಮಾಡಿಬಿಟ್ಟಿತು. ಮತ್ತೆ ಏನಾದರೂ ಮಾತಾಡಿದರೆ ಅವನು ಅವರನ್ನು ಬಿಟ್ಟೇ ಹೊರಟು ಹೋಗಲೂ ಬಹುದು. ಈ ಸಂದರ್ಭದಲ್ಲಿ ಅವನನ್ನು ಬಿಟ್ಟುಕೊಡಲು ಚಂಪಕ ಸಿದ್ಧಳಿಲ್ಲ.

ವೆಳ್ಳೈಸಾಮಿ ಈಗ ಮುದುಕಿಯನ್ನು ಬಿಟ್ಟು ಚಂಪಕಳನ್ನು ಎತ್ತಿ ಆ ಗೋಡೆಯ ಮೇಲೆ ಕೂರಿಸಿದ. ಅವನ ಕೈ ಕಬ್ಬಿಣವೇ. ಹಿಡಿಯೂ ಕಬ್ಬಿಣದ ಹಿಡಿಯೇ. ಚಂಪಕಳಿಗೆ ಅದರಿಂದ ಸ್ವಲ್ಪ ಸಮಾಧಾನ. ಬಳಿಕ ಅವನು ಮುದುಕಿಯನ್ನು ಎತ್ತಿ ಕುಳ್ಳಿರಿಸಿ ಚಂಪಕಳನ್ನು ಹಿಡಿದುಕೊಳ್ಳುವಂತೆ ಹೇಳಿದ. ಈಗ ತಾನು ಆ ಕಡೆ ಧುಮುಕಿ ಅವರಿಬ್ಬರನ್ನೂ ಇಳಿಸಿಕೊಂಡ.

ಕತ್ತೆ ನಿಂತಿದ್ದ ಕೊಟ್ಟಿಗೆಗೆ ಅವರು ಹೋದಾಗ, ಅದು ಇವರಿಗೆ ದಾರಿಬಿಟ್ಟು ಮತ್ತೊಂದು ಕೊಟ್ಟಿಗೆಗೆ ಹೊರಟುಹೋಯಿತು. ವೆಳ್ಳೈಸಾಮಿ ಮುದುಕಿಯನ್ನು ನೆಲದ ಮೇಲೆ ಮಲಗಿಸಿದ. ಆ ಜಾಗ ಎಲ್ಲವೂ ಹಳ್ಳದಿಣ್ಣೆಯಾಗಿ ಬೂದಿರಾಶಿಯಿಂದ ತುಂಬಿತ್ತು. ಅಲ್ಲಿಯೇ ಒಂದು ಮೂಲೆಯಲ್ಲಿ ನಿಂತು ಚಂಪಕ ತನ್ನ ತಲೆಕೂದಲನ್ನು ಒರಸಿಕೊಂಡಳು. ತನ್ನ ಅಜ್ಜಿಗೂ ಒರಸಿ, ಅವಳ ಕೂದಲನ್ನು ಬೆನ್ನ ಮೇಲೆ ಹರಡಿದಳು. ವೆಳ್ಳೈಸಾಮಿ ತನ್ನ ಅಂಗಿಯನ್ನು ಕಳಚಿದವನೇ ನೀರನ್ನು ಹಿಂಡುತ್ತಿದ್ದ.

ಆ ಕೊಟ್ಟಿಗೆ ಸಮ ಆಕೃತಿಯದು. ಚಿಕ್ಕದು. ಇದರಲ್ಲಿ ಆ ಕಡೆ ಈ ಕಡೆ ಅರ್ಧಭಾಗ ಮಳೆನೀರಿನಿಂದ ಒದ್ದೆಯಾಗಿದ್ದರೂ, ಒಳಗೆ ನೆಲ ತೊಯ್ದಿಲ್ಲ. ಈ ಮೂವರೂ ಮಳೆಯಿಂದ ರಕ್ಷಿಸಿಕೊಳ್ಳುವಷ್ಟು ಜಾಗ ಅಲ್ಲಿ ಇದ್ದೇ ಇದೆ, ಎಂದ ಮೇಲೆ ಆ ಜಾಗ ಈಗ ಅವರಿಗೆ ಸ್ವರ್ಗ.

ವೆಳ್ಳೈಸಾಮಿ, ಈಗ ತನ್ನ ಸೊಂಟಕ್ಕೆ ಸಿಕ್ಕಿಸಿದ್ದ ಒದ್ದೆಯಾಗಿ ಹೋಗಿದ್ದ ಬನ್ನುಗಳನ್ನು ಹೊರತೆಗೆದ. ಮುದುಕಿಗೆ ಕೊಟ್ಟು ಅವಳನ್ನು ತಿನ್ನಲು ಹೇಳಿದ. ಮುದುಕಿ ಪ್ರಜ್ಞಾಶೂನ್ಯಳಂತೆ ಕಂಡರೂ ಚಂಪಕ ಬನ್ನಿನ ಚೂರನ್ನು ಬಾಯಿಗೆ ಹಾಕಿದ ಮೇಲೆ

ಅದು ಮೆಲ್ಲಗೆ ತೆರೆದು ಜಗಿದಹಾಗಾಯಿತು. ಹೇಗೋ ಮುದುಕಿ ಒಂದನ್ನು ಮುಗಿಸಿ ಮತ್ತೊಂದರಲ್ಲಿಯೂ ಅರ್ಧ ತಿಂದಳು. ಮತ್ತೆ ಅವಳಿಂದ ತಿನ್ನಲು ಸಾಧ್ಯವಾಗಲಿಲ್ಲ.

"ನೀನೂ ತಿನ್ನು" ಎಂದವಳೇ ಚಂಪಕ ಒಂದು ಬನ್ನನ್ನು ವೆಳ್ಳೈಸಾಮಿಯ ಮುಂದೆ ನೀಡಿದಳು.

"ನಾನು ಹೊಟ್ಟೆತುಂಬ ತಿಂದಿದ್ದೇನೆ. ನೀನು ತೆಗೆದುಕೋ" ಎಂದ ವೆಳ್ಳೈಸಾಮಿ. ಅದು ಅವಳಿಗೆ ಹೇಳಿದ ಬರಿಯ ಸಮಾಧಾನದ ಮಾತು ಅಷ್ಟೆ. ಆರಲ್ಲ, ಹತ್ತು ತಿಂದಿದ್ದರೂ ಈಗ ಅವನಿಗೆ ಸಾಕಾಗುತ್ತಿರಲಿಲ್ಲ.

ಚಂಪಕ ಬನ್ನನ್ನು ತಿನ್ನಲು ತೊಡಗಿದಾಗ ವೆಳ್ಳೈಸಾಮಿಯ ಹೃದಯ ಹಗುರವಾಯಿತು. ಊಟಮಾಡುವುದರಲ್ಲಿನ ಸುಖವನ್ನೂ ಅದರಲ್ಲಿಯೂ ತನಗೆ ಬೇಕಾದವರು ಸಂತೃಪ್ತಿಯಿಂದ ತಿನ್ನುವುದನ್ನೂ ನೋಡುವಾಗ ಉಂಟಾಗುವ ಆನಂದವೇ ಬೇರೆ. ಅದನ್ನು ಅನುಭವಿಸಿದವರೇ ಬಲ್ಲರು. ಅವಳು ಬನ್ನನ್ನು ತಿನ್ನುತ್ತಿದ್ದಾಗ ವೆಳ್ಳೈಸಾಮಿಯ ದೃಷ್ಟಿ ದೂರದಲ್ಲಿದ್ದ ವಿದ್ಯುತ್ ದೀಪಗಳತ್ತ ಹರಿಯಿತು. ಬಳಿಕ ಈ ಕಡೆ ತಿರುಗಿ ಅವನು ಹೇಳಿದ:

"ಈ ಪಟ್ಟಣಕ್ಕೆ ಬಂದ ಹೊಸದರಲ್ಲಿ ನಾನು ಏನು ತಿಳಿದುಕೊಂಡಿದ್ದ ಗೊತ್ತೇ?"

"ಏನು ತಿಳಿದುಕೊಂಡಿದ್ದ?"

"ಮಹಡಿ ಮೇಲೆ ಮಹಡಿ, ಬೀದಿಯೆಲ್ಲ ಜಗಜಗ ಅಂತ ದೀಪ, ಕಣ್ಣು ಚುಚ್ಚುವಂಥ ಅಂಗಡಿಗಳು—ಇಂಥ ಕುಬೇರನ ಊರಲ್ಲಿ ನನಗೊಂದು ಕೆಲಸ ಸಿಕ್ಕಿಯೇ ಸಿಕ್ಕುತ್ತೆ. ಎರಡು ಹೊತ್ತು ಊಟ, ಮಲಗಲು ಒಂದಿಷ್ಟು ಜಾಗಕ್ಕೆ ಕೊರತೆಯೇನೂ ಆಗುವುದಿಲ್ಲ ಎಂದುಕೊಂಡಿದ್ದೆ."

"ಕುಬೇರನ ಪಟ್ಟಣ ನಿನಗೆ ಗೊತ್ತಾದುದು ಅಲ್ಲವೇ? ಹುಂ, ಇಲ್ಲಿ ಕೆಲವರು ಒಂದು ಊಟಕ್ಕೆ ಐದು ರೂಪಾಯಿ ಖರ್ಚುಮಾಡುತ್ತಾರೆ. ಪ್ರಖ್ಯಾತಗಿತ್ತಿಯರು ಒಂದು ಗಜ ರವಿಕೆ ಬಟ್ಟೆಗೇ ಧಾರಾಳವಾಗಿ ಐದು-ಹತ್ತು ಖರ್ಚುಮಾಡುತ್ತಾರೆ. ಇಂಥ ಕುಬೇರನ ಪಟ್ಟಣವನ್ನೇ ನೀನು ನೋಡಿದ್ದು."

"ಮತ್ತೊಂದು ಥರಾ ಪಟ್ಟಣವನ್ನು ನಾನು ಈಗ ನೋಡಿದೆ."

"ನೀನು ಸರಿಯಾಗಿ ನೋಡಿಲ್ಲ. ನಮ್ಮ ಗುಡಿಸಲ ಪಟ್ಟಣಕ್ಕೆ ಬಂದು ಆ ಕೊಳಚೆ ಜಾಗವನ್ನು ನೀನು ಸುತ್ತಿಹಾಕಬೇಕು. ಆ ಕಸದ ರಾಶಿಗೆ ಪ್ರವೇಶಮಾಡಿದರೆ ನಿನಗೆ ಎಲ್ಲ ಗೊತ್ತಾಗುತ್ತೆ."

"ಸಾಕೋ ಸಾಕಾಯ್ತಪ್ಪ, ನನಗೆ ಈ ಪಟ್ಟಣವೂ ಸಾಕು, ಇಲ್ಲಿನ ನಾಯಿಪಾಡೂ ಸಾಕು."

"ಹಣವಂತನಿಗೆ ಇದು ಸ್ವರ್ಗ. ನಿನಗೆ ನನಗೆ ಅಲ್ಲ. ಇದು....ಇದು....ಒಂದು...."

ಹೇಳಬೇಕಾದ ಮಾತನ್ನು ಅರ್ಧಕ್ಕೇ ನಿಲ್ಲಿಸಿಕೊಂಡಳು ಚಂಪಕ. ತುಟಿಗಳ ವರೆಗೂ ಬಂದ ಮಾತನ್ನು ಅವಳು ಬಲವಂತದಿಂದ ನುಂಗಿದ ಹಾಗಿತ್ತು. ಅವಳ ಈ ವರ್ತನೆಯನ್ನು ನೋಡಿ ವೆಳ್ಳೈಸಾಮಿಗೆ ವಿಚಿತ್ರವೆನಿಸಿತು.

"ಹೇಳು, ಏನೋ ಮುಚ್ಚಿಕೊಳ್ತಾ ಇದ್ದೀಯಾ?"

"ಇದು......ಹೇತತಕ್ಕದ್ದು ಅಲ್ಲ."

"ಹೇಳದಿದ್ದರೆ ನಾನು ಬಿಡಬೇಕಲ್ಲ. ನನಗೆ ಆ ಮೇಲೆ ತುರಿಬಾ ಕೋಪ ಬರುತ್ತೆ. ಅದೇನು ಹೇಳು."

ಅವನು ತನ್ನ ಹಟವನ್ನು ಬಿಡುವುದಿಲ್ಲ ಎಂದೊಡನೆ ಚಂಪಕ ಅವಾಕ್ಕಾದಳು. "ನಾವು ಈಗ ಯಾವ ಜಾಗಕ್ಕೆ ಬಂದಿದ್ದೇವೆ ಎನ್ನೋದನ್ನು ಹೇಳೋದಕ್ಕೆ......ಬಂದು... ಈ......ಜಾಗ......".

"ಯಾವ ಜಾಗದಲ್ಲಿ ನಾವು ಇದ್ದೇವೆ?"

ಅವಳಿಂದ ಮತ್ತೆ ಮೌನ. ವೆಳ್ಳೈಸಾಮಿಯು ಒತ್ತಾಯ.

"ನೀನು ಇನ್ನೂ ತಿಳಿದುಕೊಳ್ಳಲೇ ಇಲ್ಲ, ಅಲ್ಲವೇ?"

"ತಿಳಿದರೆ ಯಾಕ ಕೇಳುತ್ತೇನೆ?"

"ಈಗ ನಾವು ಸ್ಮಶಾನದಲ್ಲಿ ಇದ್ದೇವೆ."

"ಏನು?"

"ಹೌದು, ಯಾವ ಜಾಗದಲ್ಲಿ ಮನುಷ್ಯರನ್ನು-ಸುಡ್ತಾರೊ ಆ ಜಾಗದಲ್ಲಿ ನಾವಿದ್ದೇವೆ. ಹೆಣ ಸುಡೋ ನೆಲದ ಮೇಲೆ ನಾವು ಕುಳಿತಿದ್ದೇವೆ. ನೀನು ತಳ್ಳಿದೆಯಲ್ಲ ಬೂದಿರಾಶಿ, ಅದು ಹೆಣ ಸುಟ್ಟದ್ದೇ."

ವೆಳ್ಳೈಸಾಮಿಗೆ ದಿಗ್ಭ್ರಮೆಯಾಗಿ ಹೋಯಿತು. ಚಂಪಕ ಇಲ್ಲಿ ಬರುವುದು ಬೇಡ ಎಂದು ಯಾಕೆ ತಡೆದಳು ಎನ್ನುವುದು ಈಗ ಅವನಿಗೆ ಅರ್ಥವಾಯಿತು. ಇದ್ದರೂ ಈಗ ಅವನು ಭೀತಿಯನ್ನೋ, ಕಳವಳವನ್ನೋ, ವ್ಯಕ್ತಪಡಿಸಲಿಲ್ಲ. ತುಂಬಾ ಧೈರ್ಯಶಾಲಿಯ ಹಾಗೆ ಕಿಲಕಿಲ ಎಂದು ಅವನು ನಗೆಯಾಡುತ್ತ, "ಹಾಗಾದರೆ ಕುಬೇರ ಪಟ್ಟಣದವರು ಕೊನೆಯ ಜಾಗಕ್ಕೆ ಹೋಗುವಲ್ಲಿಗೆ ನಾವು ಈಗ ಬಂದಿದ್ದೇವೆ" ಎಂದ.

"ನಿನಗೆ ಭಯವಾಗುತ್ತಾ ಇಲ್ಲವೇ?" ಎಂದು ಕೇಳಿದಳು ಚಂಪಕ.

"ಜೇಬು ತೂಕವಾಗಿದ್ದರೆ ದಾರಿಯಲ್ಲಿ ಭಯ ಇರುತ್ತೆ. ನಾನು ಭಯಪಡುವುದಕ್ಕೆ ನನ್ನಲ್ಲಿ ಏನು ಇದೆ? ನನಗೆ ಯಾರು ಇದ್ದಾರೆ?"

"ಊರಲ್ಲಿ ಯಾರೂ............"

"ಅಪ್ಪ, ಅಮ್ಮ, ಅಣ್ಣ-ಅತ್ತಿಗೆ, ಮನೆ, ಮಠ—ಹಾಗಂತ ನನಗೆ ಏನೇನೂ ಇಲ್ಲ. ಊರನ್ನು ಬಿಟ್ಟು ಓಡಿಬಂದಿದ್ದೇನೆ."

"ಯಾಕೆ ಹಾಗೆ ಓಡಿಬಂದೆ?"

"ಆಕಾಶವನ್ನೇ ನೋಡಿಕೊಂಡಿದ್ದವನಿಗೆ ಫಸಲೆ ಆಗಲಿಲ್ಲ. ಬೇರೆ ಉದ್ಯೋಗ ನನಗೆ ಗೊತ್ತಿಲ್ಲ. ಮೋಸಗಾರಿಕೆಯೂ ತಿಳಿಯದು. ಪಟ್ಟಣದಲ್ಲಿ ಹೇಗಾದರೂ ಮಾಡಿ ಜೀವಿಸೋಣ ಎಂದು ಬಂದಿದ್ದೇನೆ. ಇಲ್ಲಿಯೂ ನನಗೆ ಬದುಕಲು ದಾರಿಯೇ ಇಲ್ಲ."

ವೆಳ್ಳೈಸಾಮಿಯ ಧ್ವನಿ ಈಗ ಕ್ಷೀಣವಾಗಿ ಹೋಗಿತ್ತು. ಒಂದು ನಿಮಿಷಕ್ಕೆ ಮುಂಚೆ ನನಗೆ ಯಾತರ ಭಯ? ಎಂದವನು ಈಗ ತನ್ನ ಬಾಳನ್ನು ಕಂಡು, ಹೆದರಿದ ಹಾಗಿತ್ತು. ಬಲವಂತವಾಗಿ ತಡೆದರೂ ಕಣ್ಣೀರನ್ನು ಸುರಿಸದೆ ಅವನಿಂದ ಸಾಧ್ಯವಾಗಲಿಲ್ಲ. "ಯಾವ ಮುಖದಲ್ಲಿ ನಾನು ಊರಿಗೆ ಹೋಗಲಿ, ಹೋಗಿ ನಾನು ಅಲ್ಲಿ ಮಾಡುವುದಾದರೂ ಏನು?" ಎಂದ.

"ಭಯಪಡಬೇಡ. ಗಂಡಸು ಹೀಗೆ ಭಯಪಟ್ಟರೆ ಹೇಗೆ? ಮನಸ್ಸನ್ನು ದೃಢ ಮಾಡಿಕೋ" ಎಂದವಳೇ ಅವನಿಗೆ ಮತ್ತಷ್ಟು ಸಮೀಪವಾದಳು. ಮಿಂಚು ಆಗ ಬೆಳಗಲು ಆ ಬೆಳಕಿನಲ್ಲಿ ವೆಳ್ಳೈಸಾಮಿ, ಹೊಳೆಯುವ ಚಂಪಕಳ ಕಣ್ಣುಗಳನ್ನು ದಿಟ್ಟಿಸಿದ. ಅವಳ ಮೈಬಣ್ಣ ಕಪ್ಪು ನಿಜ. ಆದರೆ ಅದು ಮಿಂಚುವ ಆಕರ್ಷಕವಾದ ಕಪ್ಪು.

ವಯಸ್ಸಿಗೆ ಬಂದ ಹೆಣ್ಣು ಹೀಗೆ ತನಗೆ ಸಮೀಪವಾಗಿ ಕುಳಿತು ಮಾತಾಡುವ ಅನುಭವ ಅವನಿಗೆ ಹೊಸದು. ಗ್ರಾಮದಲ್ಲಿ ಕೆಲಸದ ಸಮಯ ಎಷ್ಟೋ ಹೆಣ್ಣು ಮಕ್ಕಳೊಂದಿಗೆ ಅವನು ಸರಸವಾಗಿ ಮಾತಾಡಿದ್ದಾನೆ, ನಿಜ. ಆದರೆ ಈ ತರಹ ಅನುಭವ ಅವನಿಗೆ ತೀರಾ ಹೊಸದು.

"ನಾವೆಲ್ಲ ಈ ಪಟ್ಟಣದಲ್ಲಿ ಜೀವನ ಮಾಡುತ್ತಿದ್ದೇವಲ್ಲ. ನಿನಗೆ ಬದುಕಲು ಸಾಧ್ಯವಾಗುವುದಿಲ್ಲವೇನು?" ಎಂದಳು ಚಂಪಕ.

"ಇದೆಲ್ಲ ಒಂದು ಬದುಕೇ? ಬಾಳೇ?" ಎಂದ ವೆಳ್ಳೈಸಾಮಿ. "ನನ್ನನ್ನು ಹೆತ್ತವಳನ್ನು ಸರಿಯೆ, ನಿನ್ನ ಅಪ್ಪನನ್ನು ನೋಡು. ಸಂಪಾದಿಸಲು ಯೋಗ್ಯತೆ ಇಲ್ಲದಿದ್ದವನಿಗೆ ಮಕ್ಕಳು ಮರಿ ಯಾಕೆ? ನಿನ್ನ ಅಪ್ಪ ಎಲ್ಲಿ ಹೋಗಿದ್ದಾನೆ?"

ತನ್ನ ತಂದೆಯ ಬಗ್ಗೆ ಈಗ ಮಾತಾಡುವುದು ಚಂಪಕಳಿಗೆ ಹಿಡಿಸಲಿಲ್ಲವಾದರೂ ಅವನ ನೀಚವರ್ತನೆ ಯಾರೂ ಬೆರಳಿಟ್ಟು ತ...ರಿಸುವಂಥದ್ದೇ ಆಗಿತ್ತು. ಅದನ್ನು ಹೊರಗೆ ತೋರಿಸಿಕೊಳ್ಳದೆ ಆಕೆ "ಸರಿ, ತುಂಬಾ ಹೊತ್ತಾಯಿತು. ನಿನಗೆ ನಿದ್ದೆ ಬಂದರೆ ಮಲಗಿಕೋ. ಈ ಜಾಗದಲ್ಲಿ, ಅದೂ ಅರ್ಧರಾತ್ರಿಯಲ್ಲಿ ನೀನು ಏನಾದರೂ ಮಾತಾಡಿದರೆ ನನಗೆ ಅಳುವೇ ಬಂದುಬಿಡುತ್ತೆ" ಎಂದಳು.

"ಭಯಪಡಬೇಡ. ನೀನು ನಿದ್ದೆಮಾಡು" ಎಂದ ವೆಳ್ಳೈಸಾಮಿ.

ಮುದುಕಿ ಅವರಿಗೆ ಸಮೀಪವಾಗಿ ಕೊರಡಿನ ಹಾಗೆ ಒರಗಿದ್ದಳು. ಅವಳೂ ಆವೊತ್ತು ನೆಮ್ಮದಿಯಿಂದ ಮಲಗುವ ಹಾಗೆ ಕಾಣಲಿಲ್ಲ. ಇವರ ಮಾತುಕತೆಗಳನ್ನು

ಅವಳು ಕೇಳಿಕೊಂಡಳೋ ಏನೋ! ಹಾಗಲ್ಲದೆ ಇವೊತ್ತಿನ ಆಯಾಸದಿಂದ ಮೊದಲೇ ಹಣ್ಣಾಗಿದ್ದ ಅವಳು ಈಗ ಮೇಲೂ ಹಣ್ಣಾಗಿದ್ದಳು. ಅಪರಿಚಿತ ಯುವಕನೊಂದಿಗೆ ತನ್ನ ಮೊಮ್ಮಗಳು ಮಾತಾಡುವ ರೀತಿ ಅಚ್ಚರಿಯನ್ನು ತಂದಿರಬೇಕು!

ಚಂಪಕ ಮಲಗಿದ ಸ್ವಲ್ಪ ಹೊತ್ತಿನಲ್ಲೇ ಅವಳಿಗೆ ಸಮೀಪವಾಗಿ ವೆಳ್ಳೈಸಾಮಿಯೂ, ಮುದುಡಿಕೊಂಡು ಕಾಲು ನೀಡಲೂ ಸ್ಥಳವಿಲ್ಲ. ಕೆಳಗೆಲ್ಲ ತೇವವಾಗಿದೆ. ಅದು ಇಬ್ಬರನ್ನೊ ಮೂವರನ್ನೊ ಸುಡಲು ಎಬ್ಬಿಸಿರುವ ಚಿಕ್ಕ ಕೊಟ್ಟಿಗೆ.

ಅಜ್ಜಿಯನ್ನು ತಬ್ಬಿಕೊಂಡು ಚಂಪಕ ಮಲಗಿದುದನ್ನು ನೋಡಿ ವೆಳ್ಳೈಸಾಮಿಯೂ ಕಣ್ಣು ಮುಚ್ಚಿದ.

ಬಾನಿನಲ್ಲಿ ಮುಗಿಲು ಸ್ವಲ್ಪ ಹೊತ್ತು ಚೆದರಿ ಮತ್ತೆ ದಟ್ಟೈಸುತ್ತಿತ್ತು. ಮೇಲೆ ಜಿಂಕ್ಷೀಟ್ ಆದುದರಿಂದ ಮಳೆನೀರು ಸುರಿಯುತ್ತಿರುವ ಕಾರಣ ಧಡ ಧಡ ಸದ್ದಾಗುತ್ತಿತ್ತು. ಸಾಂತೋಮ್ ಸಮುದ್ರ ದಂಡೆ ಅಲ್ಲಿಗೆ ಸಮೀಪವಾಗಿದ್ದುದರಿಂದ ಸಾಗರದ ಅಲೆಗಳ ಅಬ್ಬರ ಬೇರೆ. ಜಿರ್ ಎಂದು ಕುಳಿರ್ಗಾಳಿ.

ವೆಳ್ಳೈಸಾಮಿಗೆ ಈಗ ನಿದ್ದೆ ಬರಲಿಲ್ಲ. ವಿಚಿತ್ರವಾದ ಈ ಜಗತ್ತಿನಲ್ಲಿ ಎಂಥದೊ ಸುಳಿಯೊಳಗೆ ತಾನು ಸಿಕ್ಕಿಕೊಂಡ ಹಾಗೆ ಅವನಿಗೆ ಭಾವನೆ. ತನ್ನ ರಕ್ಷಣೆಯಲ್ಲಿ ಈಗ ಇಬ್ಬರು ಹೆಂಗಸರು ನಿದ್ದೆಮಾಡುತ್ತಿದ್ದಾರೆ. ಈಗ ಅವನು ನಿಜವಾಗಿಯೂ ಗಂಡಸಾಗಿದ್ದಾನೆ. ಈ ಸಂದರ್ಭದಲ್ಲಿ ಅವನು ತನ್ನನ್ನು ದಿಕ್ಕೆಟ್ಟವನೆಂದೊ ಬಡವನೆಂದೊ ಭಾವಿಸಿಕೊಳ್ಳಲಿಲ್ಲ. ಆತ ಈಗ ವಯಸ್ಸಿಗೆ ಬಂದಿರುವ ಪುರುಷಸಿಂಹ. ದೇಹಶ್ರಮದಿಂದ ತನ್ನನ್ನು ಮಾತ್ರ ರಕ್ಷಿಸಿಕೊಳ್ಳುವುದಲ್ಲದೆ ಬೇರೆಯವರನ್ನೂ ರಕ್ಷಿಸುವ ಸಾಮರ್ಥ್ಯ ಈಗ ಅವನಿಗೆ ಇದೆ.

ತನಗೆ ಧೈರ್ಯ ತುಂಬಿ ಮಲಗಿದ್ದ ಚಂಪಕಳತ್ತ ವೆಳ್ಳೈಸಾಮಿ ಈಗ ದೃಷ್ಟಿಯನ್ನು ಹರಿಯಿಸಿದ. ಕೃಶವಾದ ಶರೀರವೂ ಚೆಲುವಾದ ಮುಖವೂ ಉಳ್ಳ ಚಂಪಕ, ಆಗ, ಸುಪ್ಪತ್ತಿಗೆಯ ಮೇಲೆ ಮಲಗಿದಂತೆ ಒರಗಿದ್ದು ಸುಖವಾಗಿ ನಿದ್ದೆಮಾಡುತ್ತಿದ್ದಾಳೇ ವಿನಾ ಸ್ಮಶಾನದಲ್ಲಿ ಮಲಗಿರುವವಳ ಹಾಗೆ ಕಾಣಿಸಲಿಲ್ಲ. ನಿದ್ದೆಯಲ್ಲಿಯೂ ಅವಳು ಮುಗುಳು ನಗೆ ಸೂಸುತ್ತಿದ್ದಳು. ಸ್ವಲ್ಪಹೊತ್ತು ಕಳೆದ ಮೇಲೆ ವೆಳ್ಳೈಸಾಮಿಯೂ ನಿದ್ದೆಯಲ್ಲಿ ಮುಳುಗಿಹೋದ.

ಮೂರನೆಯ ಜಾಮವೊ ನಾಲ್ಕನೆಯ ಜಾಮವೊ ತಿಳಿಯದು.

ಹಟಾತ್ತನೆ ಆ ಜಿಂಕ್ಷೀಟಿನ ಮೇಲೆ ಕಲ್ಲುಗಳನ್ನು ತೂರಿದ ಶಬ್ದ. ಒಂದು ಸಮಯ ಆಲಿಕಲ್ಲು ಬೀಳುತ್ತಿದೆಯೊ? ಆ ಕೊಟ್ಟಿಗೆ ಹತ್ತಿಕೊಳ್ಳುವ ಹಾಗೆ ಫಳಾರೆಂದು ಒಂದು ಸಲ ಮಿಂಚಿನ ಸೆಳೆತ. ಅದಕ್ಕೆ ಸೇರಿದ ಹಾಗೆ ಮೊಳಗಿದ ಗುಡುಗು ಈ ಜಗತ್ತನ್ನೆ ನಡುಗಿಸುವಂಥದ್ದು.

ತಕ್ಷಣ ಚಂಪಕ ಎದ್ದವಳೆ ತನ್ನ ಅಜ್ಜಿಯ ದೇಹವನ್ನು ಹಿಡಿದು ಅಲುಗಾಡಿಸಿದಳು. ಅಜ್ಜಿಯ ದೇಹ ಜಿಲ್ ಎಂದು ತಣ್ಣಗಾಗಿದೆ. "ಅಯ್ಯೋ" ಎಂದು ಕೂಗಿಕೊಳ್ಳುತ್ತ ಆಕೆ ಎದ್ದವಳೇ ವೆಳ್ಳೈಸಾಮಿಯ ಕೈಗಳನ್ನು ಭದ್ರವಾಗಿ ಹಿಡಿದುಕೊಂಡಳು. ಅವಳದ್ದು ಭದ್ರವಾದ ಹಿಡಿ. ಆದರೆ ಅವಳ ದೇಹ ಮಾತ್ರ ಗಡಗಡನೆ ನಡುಗಿಕೊಂಡಿತ್ತು.

ವೆಳ್ಳೈಸಾಮಿಗೆ ಈಗ ಎಚ್ಚರವಾಗಿ ಹೋಯಿತು.

ಆತ ಅವಳ ಮುಖವನ್ನೆ ದಿಟ್ಟಿಸಿದ. ಹೌದು, ಜಗತ್ತಿನ ಭಯವೆಲ್ಲವೂ ಒತ್ತಟ್ಟಿಗೆ ಮುಖದಲ್ಲಿ ಬಂದು ಸೇರಿಕೊಂಡ ಹಾಗಿತ್ತು.

"ಭಯವಾಗಿದೆ, ನನಗೆ ತುಂಬಾ ಭಯವಾಗಿದೆ" ಎಂದು ಅಳತೊಡಗಿದಳು ಚಂಪಕ. "ನಾವು ಇಲ್ಲಿಂದ ಹೊರಟುಹೋಗೋಣ. ಬೇಡ, ಇನ್ನು ಇಲ್ಲಿ ಒಂದು ಕ್ಷಣವೂ ಇರುವುದೇ ಬೇಡ" ಎಂದು ಅವಳು ಬಿಕ್ಕತೊಡಗಿದಳು.

ವೆಳ್ಳೈಸಾಮಿ ಅವಳನ್ನು ಸೆಳೆದುಕೊಂಡವನೆ ತನ್ನ ತೊಡೆಯ ಮೇಲೆ ಮಲಗಿಸಿಕೊಂಡ. ಚಂಪಕ ಏನೂ ಮಾತಾಡಲಿಲ್ಲ. ಬಳಿಕ ಅವನು ಅವಳನ್ನು ಮೇಲಕ್ಕೆ ಎಳೆದುಕೊಂಡು ಚಳಿಯಿಂದಲೂ ಮಳೆಯಿಂದಲೂ ರಕ್ಷಿಸಲು ಆಕೆಯನ್ನು ಎದೆಗಾನಿಸಿಕೊಂಡವನೆ ಭದ್ರವಾಗಿ ಅಪ್ಪಿಕೊಂಡ.

"ಭಯಪಡಬೇಡ. ನಾನಿದ್ದೇನೆ" ಎಂದು ಮತ್ತೆ ಮತ್ತೆ ವೆಳ್ಳೈಸಾಮಿ ಅವಳ ಕಿವಿಯಲ್ಲಿ ಉಸುರಿದ.

ಚಂಪಕಳ ನಡುಕ ಈಗ ಸ್ವಲ್ಪ ಸ್ವಲ್ಪವಾಗಿ ಕಡಿಮೆಯಾಗುತ್ತ ಬಂದಿತು. ಹೀಗೆ ಅವರು ಆ ಸ್ಮಶಾನದಲ್ಲಿ ಸುಟ್ಟ ಹೆಣಗಳ ಬೂದಿಯ ರಾಶಿಯ ಮೇಲೆ ತಮ್ಮನ್ನ ಮರೆತವರಂತೆ ಮಲಗಿದ್ದು ಸ್ವಲ್ಪ ಹೊತ್ತು ಮೌನವಾಗಿದ್ದರು.

ಮಳೆ ಒಂದೇ ಸಮನೆ ಧಾರಾಕಾರವಾಗಿ ಸುರಿದುಕೊಂಡೇ ಇತ್ತು. ಗುಡುಗಿನ ಅಬ್ಬರ, ಮಿಂಚಿನ ಸೆಳೆತ, ಗಾಳಿಯ ಅಟ್ಟಹಾಸ, ಸಾಗರದ ಭೋರ್ಗರೆತ—ಯಥಾಪ್ರಕಾರ. ಆದರೆ ಚಂಪಕ ಈಗ ಯಾವುದಕ್ಕೂ ಹೆದರಿದ ಹಾಗೆ ಕಾಣಲಿಲ್ಲ.

ಈಗ ಆಕೆ ತಲೆಯೆತ್ತಿದವಳೇ ಅವನ ಮುಖಕ್ಕೆ ಮುಖ ಸೇರಿಸಿ ಮೆಲ್ಲಗೆ ನಕ್ಕಳು. ಆ ಕತ್ತಲೆಯಲ್ಲಿಯೂ ಅವರ ಕಣ್ಣುಗಳು ಹೊಳೆಯುತ್ತ ಇದ್ದುವು. ತನ್ನ ಕರವನ್ನು ಆತನ ಕೊರಳಿನಿಂದ ಮೃದುವಾಗಿ ಬಳಸಿಕೊಂಡಳು. ಈಗ ಅವರಿಗೆ ಮಳೆ ಚಳಿ ಯಾವುದೂ ಇದ್ದ ಹಾಗೆ ಕಾಣಲಿಲ್ಲ.

"ಹೀಗೆಯೇ ನಾವಿಬ್ಬರೂ ಸೇರಿ ಒಟ್ಟಿಗೆ ಸತ್ತುಹೋದರೆ ಎಷ್ಟು ಚೆನ್ನಾಗಿರುತ್ತದೆ!" ಎಂದ ವೆಳ್ಳೈಸಾಮಿ.

ತಕ್ಷಣ ಅವನ ಬಾಯನ್ನು ತನ್ನ ಕೈಯಿಂದ ಮುಚ್ಚಿಬಿಟ್ಟಳು ಚಂಪಕ. ಆ ಮೇಲೆ ಅವರು ಈ ಜಗತ್ತಿನಲ್ಲಿ ಇದ್ದ ಹಾಗೆ ಕಾಣಲಿಲ್ಲ. ಮಳೆ ಗಾಳಿ ಚಳಿ ಯಾವುದೂ ಇಲ್ಲದ

ಮತ್ತೊಂದು ಲೋಕದಲ್ಲಿ ಅವರು ಈಗ ಸಂಚರಿಸುತ್ತ ಇದ್ದರು. ಪ್ರಾಣಕ್ಕೆ ಪ್ರಾಣ ಕೊಡುವ ಸನ್ನಿವೇಶ ಆಗಿನದು.

ಅವರು ಇವರು ಇರಲಿ, ಕುಬೇರನನ್ನು ಕೂಡ ಸುಟ್ಟು ಬೂದಿಮಾಡುವ ಆ ಜಾಗ ದಲ್ಲಿ ಜೀವವಿರುವ ಎರಡು ದೇಹಗಳ ಮಿಲನ.

ಸುಡುವ ಜಾಗದಲ್ಲಿಯೇ ಮೊಳಕೆಯ ಪ್ರಾರಂಭ. ಈ ಸಂದರ್ಭದಲ್ಲಿ ಅವನಿಗೂ ಆ ವಿಷಯ ತಿಳಿಯದು. ಆಕೆಗೂ ತಿಳಿಯದು, ನಿಜ. ಆದರೆ 'ನಾವು ಯಾಕೆ ಈ ಭೂಮಿ ಯಲ್ಲಿ ಜನಿಸಿದೆವೋ?' ಎಂದು ಪ್ರಲಾಪಿಸಿಕೊಂಡಿದ್ದವರು ಈಗ ತಮ್ಮಂತೆಯೇ ಮತ್ತೊಂದು ಜೀವದ ಸೃಷ್ಟಿಗೆ ಕಾರಣರಾಗಿದ್ದರು.

ಮಳೆ ಗುಡುಗು ಮಿಂಚು. ಆ ಕಡೆ ಮುದುಕಿ. ಈ ಕಡೆ ಇವರು. ಸಾವಿನೊಂದಿಗೇ ಹುಟ್ಟು ಎನ್ನುವುದಕ್ಕೆ ಸಾಕ್ಷಿಯಾಗಿ ಸ್ಮಶಾನದ ಆ ಕೊಟ್ಟಿಗೆ.

# ಧನಕೋಟಿಯ ಮನೋರಥ

"ಹೋಯಿತು, ಕೇಸು ಹೊರಟು ಹೋಯಿತು. ಹರೋಹರಾ."

ಈ ವಾರ್ತೆಗಳು ಶಿವಶಂಕರಂ ಪಿಳ್ಳೆಯ ಕಿವಿಗಳಲ್ಲಿ ಈಟಿ ಮೊನೆಯನ್ನು ಹಾಕಿ ತಿರುಚಿದಂತಾಗಿತ್ತು. ಅಯ್ಯೋ ತೀರ್ಪು ಹೀಗಾಗಬೇಕೆ?

ಶಿವಶಂಕರಂ ಪಿಳ್ಳೆ, ಆಗ, ಹೈ ಕೋರ್ಟಿನಲ್ಲಿ, ಬಹಳ ದಿನಗಳ ಹಳೆಯ ವಕೀಲರಾದ ವಿನಾಯಕ ಶಾಸ್ತ್ರಿಗಳ ಕೊಟಡಿಯಲ್ಲಿ ಕುಳಿತಿದ್ದರು. ಅವೊತ್ತು ಅವರ ಮೊಕದ್ದಮೆಯ ತೀರ್ಪಿನ ದಿನ. ನ್ಯಾಯಾಲಯದಲ್ಲಿ ಹೋಗಿ ತೀರ್ಪಿನ ವಿವರವನ್ನು ಕೇಳಲು ಧೈರ್ಯ ಸಾಲದೆ, ವಕೀಲರ ಕೊಟಡಿಯಲ್ಲಿಯೇ ಅವರು ಕುಳಿತಿದ್ದರು. ವಕೀಲರ ಗುಮಾಸ್ತ ಕಿಟ್ಟು ಅಯ್ಯರನ್ನು ತೀರ್ಪು ಹೊರಬಿದ್ದ ಮೇಲೆ ಫಲಿತಾಂಶವನ್ನು ಬಂದು ತಿಳಿಸುವಂತೆ ಕೇಳಿ ಕೊಂಡಿದ್ದರು. ಮಧ್ಯಾಹ್ನದ ಮೇಲೆ ಮೂರು-ಮೂರೂವರೆ ಗಂಟೆ ಸುಮಾರಿನಲ್ಲಿ ಕಿಟ್ಟು ಅಯ್ಯರ್ ಬಂದು ಕೇಸು ಫೈಲನ್ನು ಎತ್ತಿಕೊಂಡು ಈ ಕಡೆ ಅವಸರವಾಗಿ ಬಂದಿದ್ದರು. ಆ ಎರಡು ನಿಮಿಷಗಳಲ್ಲಿ ಸುದ್ದಿಯನ್ನು ತಿಳಿಸಿ ಅವರು ಹೊರಟುಹೋಗಿದ್ದರು.

ಆ ವಾರ್ತೆ ಶಿವಶಂಕರಂ ಪಿಳ್ಳೆಯವರ ಕಿವಿಗಳಲ್ಲಿ ಬಿದ್ದೊಡನೆ ಆ ಕೊಟಡಿಯೂ ಅಲ್ಲಿದ್ದ ಮೇಜು ಕುರ್ಚಿಗಳೂ ಅಷ್ಟೇ ಏಕೆ ಆ ಹೈಕೋರ್ಟ್ ಕಟ್ಟಡವೇ ಅಲ್ಲಾಡಿ ತಲೆ ಕೆಳಗಾದಂತಾಯಿತು. ಅವರು ಹಣೆಯನ್ನು ಎರಡು ಕೈಗಳಿಂದಲೂ ಭದ್ರವಾಗಿ ಹಿಡಿದು ಕೊಂಡು "ಹೋಯಿತು, ಕೇಸು ಹೊರಟು ಹೋಯಿತು, ಹರಾಹರಾ" ಎಂದು ಹೇಳುತ್ತ, ಯಾರೋ ಅವರ ತಲೆಯ ಮೇಲೆ ಕಾದ ಕಬ್ಬಿಣದ ಬರೆ ಎಳೆದುಬಿಟ್ಟಂತೆ ವರ್ತಿಸಿದರು.

ಶಿವಶಂಕರಂ ಈಗ ತೂರಾಡುತ್ತಾ ಎದ್ದರು. ತಪ್ಪು ಹೆಜ್ಜೆಯನ್ನು ಹಾಕುತ್ತ ಕೊಟಡಿ ಯಿಂದ ಹೊರಬಂದು ಮೆಟ್ಟಿಲುಗಳನ್ನಿಳಿದರು. ಸಮುದ್ರ ದಂಡೆಯತ್ತ ಹೆಜ್ಜೆ ಹಾಕಿದರು. ನೀರಿನ ಸಮೀಪವಾಗಿ ತಾವು ಮಾಮೂಲಾಗಿ ಕುಳಿತುಕೊಳ್ಳುವ ಸ್ಥಳದಲ್ಲಿ ಮರಳ ಮೇಲೆ ಕುಳಿತರು.

ಮತ್ತೆ ಏನು ಮಾಡಬೇಕು? ಸೊಂಟದಲ್ಲಿ ಸಿಕ್ಕಿಸಿದ್ದ ಜಾಗಕ್ಕೆ ಕೈಹಾಕಿ ತೆಗೆದರು. ಬರಿಯ ನಾಲ್ಕಾಣೆ ಪಾವಲಿ ಮಾತ್ರ ಅಲ್ಲಿ ಇದೆ. ಮೈಲಾಪುರದಿಂದ ಸಿಟಿ ಬಸ್ಸಿಗೆ ಮತ್ತು ನಶ್ಯಕ್ಕೆ ಕೊಟ್ಟರೆ ಇನ್ನುಳಿಯುವುದು ಒಂದೂವರಾಣೆ ಮಾತ್ರ. ಊರಿಗೆ ಹಿಂದಿರುಗಲು ರೈಲ್ವೆ ಚಾರ್ಜಿಗೂ ಅವರಲ್ಲಿ ಹಣವಿಲ್ಲ. ಕೆಲವು ಸಾಮಾನುಗಳು ಹೊಟೇಲಲ್ಲಿ ಇದ್ದುವು. ಎರಡು ದಿನಗಳು ಊಟಮಾಡಿರುವುದರಿಂದ ಹೊಟೇಲಿನವರಿಗೂ ಹಣ ಕೊಡಬೇಕಾ ಗಿದೆಯಲ್ಲ.

ಆದರೆ, ತಮ್ಮ ಕೇಸು ಜಯಿಸಿದ್ದರೆ? ಹೀಗೆ ಕೈಗೆ ಬಂದದ್ದು ಬಾಯಿಗೆ ಬರುವುದಿಲ್ಲ

ವೆಂದು ಯಾರು ಭಾವಿಸಿದರು? ಛೆ, ಇದೆಂಥ ಸರಕಾರ! ಇದೆಂಥ ಹೈಕೋರ್ಟು!! ಇದು ಏನು ನ್ಯಾಯ?

ಎರಡು ವರ್ಷಗಳಿಗೆ ಹಿಂದೆ ಇಂಥ ದುರ್ಗತಿಗೆ ಶಿವಶಂಕರಂ ಪಿಳ್ಳೈ ತಯಾರಾಗಿದ್ದರು ನಿಜ. ನಾಲ್ವತ್ತು ಎಕರೆಯ ಅವರ ಜಮೀನಿನ ಮೇಲೆ ಒಂದು ಲಕ್ಷ ರೂಪಾಯಿ ಸಾಲ ಬೆಳೆದಿತ್ತು. ಮೂವತ್ತು ಎಕರೆ ಜಮೀನನ್ನು ಸಾಲಕ್ಕೆ ಬರೆದು ಮುಕ್ಕಾಲು ಭಾಗ ಹಣ ವನ್ನೆಲ್ಲ ತೀರಿಸಿಬಿಟ್ಟರು. ಹತ್ತು ಎಕರೆ ಭೂಮಿಯೂ ಅದರ ಮೇಲೆ ಐವತ್ತೆಂಟು ಸಾವಿರ ರೂಪಾಯಿಗಳ ಸಾಲ ಉಳಿಯಿತು. ಇದರ ಮೇಲೆ ಸಾಲ ಕೊಟ್ಟಿದ್ದವನು 'ಎರಡು ಎಕರೆ ಭೂಮಿ ಬಿಟ್ಟುಬಿಡುತ್ತೇನೆ ಉಳಿದದ್ದನ್ನು ಸಾಲಕ್ಕೆ ಬರೆದುಬಿಡಿ' ಎಂದು ಹೇಳಿದ್ದ. ಈ ಏರ್ಪಾಡಿಗೆ ಪಿಳ್ಳೈಯವರೂ ಒಪ್ಪಿದ್ದರು.

ಈ ಸಂದರ್ಭದಲ್ಲಿ 'ಜಮೀನು ಸಾಲನಿವಾರಣೆ ಕಾನೂನು' ಬಂದಿತು. 'ಒಳ್ಳೆಯ ಕಾಲ, ತಪ್ಪಿಸಿಕೊಂಡೆ' ಎಂದು ಪಿಳ್ಳೈ ಹರ್ಷಚಿತ್ತರಾದರು. ಈ ಕಾನೂನಿನಂತೆ ಅವರು ಕೇವಲ ಒಂದು ಸಾವಿರದ ಆರುನೂರು ರೂಪಾಯಿಗಳನ್ನು ಮಾತ್ರ ಸಾಲವೆಂದು ತೆರ ಬೇಕಾಗಿದ್ದಿತು. ಅಷ್ಟೆ. ಯಾಕಂದರೆ ಅವರು ಇಷ್ಟರವರೇಗೆ ಬಡ್ಡಿಗಾಗಿಯೇ ಹದಿನೆಂಟು ಸಾವಿರದ ನಾನೂರು ರೂಪಾಯಿಗಳನ್ನು ಪಾವತಿಮಾಡಿದ್ದರು.

ಕಾನೂನು ಜಾರಿಗೆ ಬಂದಿತು. ಸಾವಿರದ ಆರುನೂರು ರೂಪಾಯಿಗೆ ಮೇಲೂ ಸಾವಿರದ ಆರುನೂರು ಸೇರಿಸಿ ಕೊಡಲು ಶಿವಶಂಕರಂ ಸಿದ್ಧರಿದ್ದರು. ಆದರೆ ಸಾಲ ಕೊಟ್ಟಿದ್ದವನು ಇದಕ್ಕೆ ಒಪ್ಪಲಿಲ್ಲ. ನ್ಯಾಯಾಲಯದಲ್ಲಿ ದಾವಾ ಹಾಕಿದ. ಅವನು ನ್ಯಾಯಾಲಯಕ್ಕೆ ಹೋದಾಗ 'ಇದೆಂಥ ಹುಚ್ಚುತನ?' ಎಂದು ಎಲ್ಲರೂ ನಗೆಯಾಡಿ ದರು. ಆದರೆ ಈಗ ನ್ಯಾಯಮೂರ್ತಿಗಳು ಹೇಳಿದ ತೀರ್ಪಿನಿಂದ ಎಲ್ಲರ ಅಭಿಪ್ರಾಯವೂ ತಲೆಕೆಳಗಾಗಿದೆ.

ಐ. ಸಿ. ಎಸ್. ಮಾಡಿಕೊಂಡಿರುವವರಲ್ಲಿ ಸ್ವಲ್ಪ ಕ್ರೆಕ್ ಆಗಿರುವವರನ್ನು ನ್ಯಾಯ ಇಲಾಖೆಗೆ ಹಾಕುವುದು ರೂಢಿಯಷ್ಟೆ! ಅಂಥ ಐ. ಸಿ. ಎಸ್. ಆಫೀಸರ್ ಒಬ್ಬರು ಈಗ ಜಿಲ್ಲಾ ನ್ಯಾಯಾಧಿಪತಿಗಳಾಗಿದ್ದರು. ಊರವರು ಒಂದು ಹೇಳಿದರೆ ಅದಕ್ಕೆ ತದ್ವಿರುದ್ಧ ಮಾತಾಡುವ ಸ್ವಭಾವ ಅವರದು.

ಈಗ ಆ ನ್ಯಾಯಮೂರ್ತಿಗಳು ಈ ಮೊಕದ್ದಮೆಯಲ್ಲಿ ಈ ಕಾನೂನು ನ್ಯಾಯ ಬಾಹಿರವೆಂದೂ, ಮದರಾಸು ವಿಧಾನಸಭೆಯೋ ಪಾರ್ಲಿಮೆಂಟೋ ಇಂಥ ಶಾಸನ ರಚಿಸಲು ಅನರ್ಹವೆಂದೂ, ರಾಜ್ಯಪಾಲ ಅಥವಾ ರಾಷ್ಟ್ರಪತಿ ಸಹಿಹಾಕಿದ ಮಾತ್ರಕ್ಕೆ ಇದು ವೇದ ವಾಕ್ಯವಾಗುವುದಿಲ್ಲವೆಂದೂ, ಆದುದರಿಂದ ಪ್ರತಿವಾದಿ, ಹದಿನೆಂಟು ಸಾವಿರ ರೂಪಾಯಿ ಗಳನ್ನು ಮಾತ್ರವಲ್ಲದೆ ಕೋರ್ಟ್ ಖರ್ಚನ್ನೂ ಸಹ ತೆರಬೇಕೆಂದೂ ತೀರ್ಪು ನೀಡಿದರು.

ಶಿವಶಂಕರಂ ಪಿಳ್ಳೈಯವರಿಗೆ ಆಗ ತಲೆಯ ಮೇಲೆ ಹೊಡೆದಂತಾಯಿತು. ಆದರೂ

ಈ ತೀರ್ಪು ಸರಿಯಾದದ್ದಲ್ಲವೆಂದೂ, ಹೈಕೋರ್ಟಿಗೆ ಅಪೀಲು ಹಾಕಬೇಕೆಂದೂ ಹಲವರು ಹೇಳಿದ್ದರ ಮೇರೆಗೆ, ಅವರು ಹೈಕೋರ್ಟಿಗೆ ಹೋದರು. ಈ ಖರ್ಚಿಗಾಗಿ ಹಣ ಬೇಕಲ್ಲವೆ? ಮನೆಯಲ್ಲಿದ್ದ ಅಳಿದುಳಿದ ಒಡವೆಗಳೂ ಈಗ ಕರಗಿದುವು.

ಹೈಕೋರ್ಟಿನ ತೀರ್ಪು ಈಗ ಅವರ ಮೇಲೆ ಬರಸಿಡಿಲಂತೆ ಎರಗಿತ್ತು.

೨

ಸಮುದ್ರ ದಂಡೆಯಲ್ಲಿ ವಿದ್ಯುಚ್ಛಕ್ತಿ ದೀಪಗಳು ಹತ್ತಿಕೊಳ್ಳುವ ವರೆಗೆ ಶಿವಶಂಕರಂ ಪಿಳ್ಳೈ ನೀರಿಗೆ ಸಮೀಪವಾಗಿಯೆ ಕಾಲುಚಾಚಿ ಕುಳಿತಿದ್ದರು. ಸಮುದ್ರಕ್ಕೆ ಹಾರಿ ಪ್ರಾಣ ಕಳೆದುಕೊಂಡರೆ ಏನು ಎನ್ನುವ ಯೋಚನೆ ಅವರಿಗೆ. ಆದರೆ ಅಕಾಲ ಮರಣಕ್ಕೆ ಈಡಾದವರು ಶಾಂತಿಯಿಲ್ಲದೆ ಪಿಶಾಚಿಗಳಾಗಿ ಸುತ್ತಾಡುತ್ತಾರೆ ಎಂದು ಅವರು ಬಾಲ್ಯದಲ್ಲಿ ಕೇಳಿದ್ದ ನೆನಪು. ಈಗ ಪಿಳ್ಳೈ ತಮ್ಮೊಳಗೇ ಹೇಳಿಕೊಂಡರು:

"ಅಯ್ಯೋ ದೇವರೆ, ನನಗೆ ಸಾವು ಬರಬಾರದೆ? ಚಿಕ್ಕ ಪ್ರಾಯದವರು ಎಷ್ಟೋ ಜನ ಕಾಲನ ಕುಣಿಕೆಗೆ ಈಡಾಗುತ್ತಾರಲ್ಲ. ನನಗೆ ಐವತ್ತೈದು ವರ್ಷಗಳು ಆಗಿವೆ. ಸಾವು ಯಾಕೆ ನನ್ನ ಬಳಿ ಇನ್ನೂ ಸುಳಿಯಲೊಲ್ಲದು?"

ಒಂದು ರೀತಿಯಾಗಿ ಶಿವಶಂಕರು ಪಿಳ್ಳೈ ಈಗ ತಮ್ಮ ಮನಸ್ಸನ್ನು ದೃಢಪಡಿಸಿಕೊಂಡರು. ಇನ್ನು ಈ ಜಗತ್ತಿನಲ್ಲಿ ಬಾಳುವೆ ಮಾಡುತ್ತೇನೆನ್ನುವುದು ಅರ್ಥವಿಲ್ಲದ್ದು. ಎದ್ದವರೆ ಅವರು ಈಗ ಕಡಲಿಗಭಿಮುಖವಾಗಿ ನಡೆದರು. ಹೇಗಾದರೂ ಒಂದು ದಿನ ಸಾಯಲೇ ಬೇಕು. ಸಮುದ್ರರಾಜಾ, ದೀನರಿಗೂ ದುಃಖಿಗಳಿಗೂ ನೀನೇ ಶರಣು ಶರಣು.

ಈಗ ಅವರಿಗೆ ಫಟ್ಟನೆ ತಮ್ಮ ಮಕ್ಕಳು ಮರಿಗಳ ನೆನಪು ಬಂದುಬಿಟ್ಟಿತು. ಅವರನ್ನು ಕೊನೆಯದಾಗಿ ಒಂದು ಸಲ ನೋಡದೆ ಪ್ರಾಣವನ್ನು ತೊರೆಯುವುದೆ?

ಅದರಲ್ಲಿಯೂ ನಾಳೆ ರಾತ್ರಿ ದೀಪಾವಳಿ. ಅಪ್ಪ ಹೊಸ ಬಟ್ಟೆಗಳನ್ನೂ, ಪಟಾಕಿ ಸರಗಳನ್ನೂ, ಸುರುಸುರು ಬತ್ತಿಯನ್ನೂ ತರುತ್ತಾರೆಂದು ಮಕ್ಕಳು ತಮಗಾಗಿ ಕಾದಿರುತ್ತವಲ್ಲ. ಹಬ್ಬದ ದಿನ ತಾವು ಅಲ್ಲಿಗೆ ಹೋಗುವುದಕ್ಕೆ ಬದಲಾಗಿ, ತಾವು ಸತ್ತ ಸುದ್ದಿ ಊರಿಗೆ ಮುಟ್ಟಿದರೆ! ಅಯ್ಯೊ, ಮನೆಯಲ್ಲಿ ಎಂಥ ಗೋಳು! ಯಾತನೆ!! ಕೈಯಲ್ಲಿ ಬಿಡಿಗಾಸು ಇಲ್ಲ, ನಿಜ. ಆದರೆ ಬರಿಯ ಕೈಯಿಂದಲಾದರೂ ಊರಿಗೆ ಹೋಗಿ ಸೇರಲೇ ಬೇಕು. ಮಕ್ಕಳನ್ನು ಒಂದು ಸಲ ಕಣ್ತುಂಬ ನೋಡಿದ ಮೇಲೆ......ಪ್ರಾಣಕ್ಕೆ ಸಂಚಕಾರ ತಂದುಕೊಳ್ಳಲು ಎಷ್ಟೋ ಮಾರ್ಗಗಳಿವೆ.

ಶಿವಶಂಕರಂ ಪಿಳ್ಳೈ ಈಗ ಎದ್ದವರೇ ಎಗ್ಮೋರ್ ನಿಲ್ದಾಣದತ್ತ ಹೆಜ್ಜೆ ಹಾಕಲಾರಂಭಿಸಿದರು. ನಿಲ್ದಾಣಕ್ಕೆ ಹೋಗಿ ಸೇರಿದೊಡನೆ ತಮ್ಮ ಸೊಂಟದಲ್ಲಿ ಸಿಕ್ಕಿಸಿದ್ದ ಒಂದೂವರಾಣೆಯನ್ನು ಹೊರತೆಗೆದು, ಅದರಲ್ಲಿ ಒಂದಾಣೆ ಕೊಟ್ಟು ಪ್ಲಾಟ್‌ಫಾರಂ ಟಿಕೆಟ್ಟನ್ನು ಕೊಂಡರು....

ಇವರು ಅಲ್ಲಿಗೆ ಹೋದಾಗ ರೈಲು ಹೊರಡಲು ಸಿದ್ಧವಾಗಿತ್ತು. ಹೋದವರೆ ಈಗ ಅವರು ಒಂದು ಬೋಗಿಯಲ್ಲಿ ಹತ್ತಿ ಕುಳಿತರು. ರೈಲೂ ಹೊರಟುಬಿಟ್ಟಿತು. ಗಡಗಡಗಡ ಎಂದು ಅದು ಶಬ್ದಮಾಡಿ ಚಲಿಸುವಾಗ ಅವರಿಗೆ ತಾವು ಬಾಲ್ಯದಲ್ಲಿ ಹೇಳಿಕೊಳ್ಳುತ್ತಿದ್ದ ಒಂದು ಹಾಡೂ ಈಗ ನೆನಪಿಗೆ ಬಂದಿತು.

ಹೌದು, ತಮ್ಮ ಪೂರ್ವದ ಸ್ಥಿತಿಯೇನು? ಈಗಿನ ಗತಿಯೇನು? ನಾಲ್ವತ್ತು ಎಕರೆ ಜಮೀನಿಗೆ ಒಡೆಯರಾಗಿದ್ದುದು ಒಂದು ಕಾಲ. ರಾತ್ರಿಯಲ್ಲಿ ಎರಡನೆಯ ತರಗತಿಯ ಕುಳಿತು ಪ್ರಯಾಣಮಾಡುತ್ತಿದ್ದುದು ಆ ಕಾಲ. ಟಿಕೆಟ್ಟಿಲ್ಲದೆ ಮೂರನೆಯ ತರಗತಿಯಲ್ಲಿ ಈಗ ಪ್ರಯಾಣಮಾಡುತ್ತಿರುವುದು ಮತ್ತೊಂದು ಕಾಲ. ಟಿಕೆಟ್ ಪರಿಶೋಧಕರು ಬಂದರೆ ಏನು ಗತಿ? ಎಂದು ಅವರ ಹೃದಯ ವೇಗವಾಗಿ ಬಡಿದುಕೊಂಡಿತು.

ಅದು ಎಕ್ಸ್‌ಪ್ರೆಸ್ ರೈಲು. ಚಿಕ್ಕ ನಿಲ್ದಾಣಗಳಲ್ಲಿ ನಿಲ್ಲದೆ ವೇಗಲಾಗಿ ಸಾಗುತ್ತಿತ್ತು. ಪ್ರಯಾಣಿಕರಲ್ಲಿ ಕೆಲವರು ನಿದ್ದೆಮಾಡಿದ್ದರು. ಮತ್ತೆ ಕೆಲವರು ತೂಗಿ ತೂಗಿ ಬೀಳುತ್ತಿದ್ದರು. ಆದರೆ ಶಿವಶಂಕರಂ ಅವರಿಗೆ ನಿದ್ದೆ ಬರುವ ಹಾಗಿಲ್ಲ. ಅವರು ಕಣ್ಣುತೆರೆದು ಹಾಗೆಯೇ ಕುಳಿತಿದ್ದರು.

ರಾತ್ರಿ ಸುಮಾರು ಎರಡು ಗಂಟೆಯ ಸಮಯ. ಬಾವಲಿಯಂತೆ ನೇತು ಹಾಕಿಕೊಂಡು ಒಬ್ಬ ಟಿಕೇಟ್ ಪರಿಶೋಧಕ ಈಗ ಒಳಗೆ ತೂರಿ ಬಂದ. ಕುಳಿತು, ಮಲಗಿ ನಿದ್ದೆಮಾಡುತ್ತಿದ್ದವರನ್ನು ತಟ್ಟಿ ತಟ್ಟಿ ಎಬ್ಬಿಸಿದ. ಟಿಕೆಟ್ಟುಗಳ ಪರಿಶೋಧನೆಗೆ ತೊಡಗಿದ.

ಶಿವಶಂಕರಂ ಪಿಳ್ಳೈ ಆತ ತಮ್ಮನ್ನು ಸಮೀಪಿಸುವ ವರೆಗೂ ಸುಮ್ಮನೆ ಕುಳಿತಿದ್ದರು. ಈಗ ಆತ ಕೈಚಾಚುತ್ತಲೆ ನಡುನಡುಗಿ, "ಟಿಕೆಟ್ಟು, ಪರ್ಸು ಎಲ್ಲ ಪೆಟ್ಟಿಗೆಯಲ್ಲಿತ್ತು. ನಾನು ನಿದ್ದೆಮಾಡುತ್ತಿದ್ದಾಗ ಯಾರೋ ಪೆಟ್ಟಿಗೆಯನ್ನು ಹೊತ್ತು ಹೋಗಿದ್ದಾರೆ" ಎಂದರು.

ಆತ ಇವರನ್ನು ಮೇಲೆಯೂ ಕೆಳಗೆಯೂ ಒಂದು ಸಲ ನೋಡಿದ. ಪಿಳ್ಳೈ ಹೇಳುವುದು ನಿಜವೋ ಸುಳ್ಳೋ ಎಂದು ಪರೀಕ್ಷಿಸಲು ಆತ ಹಾಗೆ ನೋಡಿರಬೇಕು ! ಮುಂದಿನ ನಿಲ್ದಾಣಕ್ಕೆ ರೈಲು ಬಂದು ನಿಲ್ಲುತ್ತಲೆ ಆತ ಕೆಳಗಿಳಿದು, ಶಿವಶಂಕರಂ ಅವರನ್ನೂ ಕೆಳಗೆ ಇಳಿಯಲು ಹೇಳಿ, ಸ್ಟೇಷನ್ ಮಾಸ್ಟರ ಬಳಿ ಇವರನ್ನು ಕರೆದೊಯ್ದು. "ಇವರ ಬಳಿ ಟಿಕೆಟ್ ಇಲ್ಲ. ಕೇಳಿದರೆ ಏನೋ ಹೇಳ್ತಾರೆ. ವಿಚಾರಿಸಿಕೊಳ್ಳಿ" ಎಂದವನೆ ಹಿಂದಿರುಗಿದ.

ಆ ಸ್ಟೇಷನ್‌ಮಾಸ್ಟರಿಗೆ ನಿದ್ದೆಯ ಮಬ್ಬು ಎಂದು ಕಾಣುತ್ತದೆ ಅವರು ಅರ್ಧ ಕಣ್ಣುಗಳನ್ನು ಮುಚ್ಚಿಕೊಂಡೇ "ಎಲ್ಲಾದರೂ ಹೋಗಿ ಹಾಳಾಗ್ರಯ್ಯ. ಯಾಕೆ ನಮಗೆ ಒಂದು ಸುಮ್ಮನೆ ತೊಂದರೆ ಕೊಡ್ತೀರಿ" ಎಂದರು.

ಆ ಜಾಗದಿಂದ ಹೊರಬಂದುಬಿಟ್ಟರು ಶಿವಶಂಕರಂ ಪಿಳ್ಳೈ. ಅದು ಯಾವ ನಿಲ್ದಾಣ ಎಂದು ಕೂಡ ಅವರು ಆ ಕಡೆ ಈ ಕಡೆ ಬೋರ್ಡುಗಳನ್ನೂ ನೋಡಲಿಲ್ಲ. ನಿಲ್ದಾಣದ ಹಾದಿಯನ್ನು ಹಿಡಿದು ಅವರು ಉದ್ದಕ್ಕೆ ನಡೆದರು. ಆ ಊರನ್ನು ತಾವು ಮೊದಲು ನೋಡಿದ ನೆನಪು. ಆದರೆ ಯಾವ ಊರು ಎಂದು ಸ್ಪಷ್ಟವಾಗಿ ತಿಳಿಯಲಿಲ್ಲ.

ನಿನ್ನೆ ಬೆಳಿಗ್ಗೆ ಹತ್ತು ಗಂಟೆಯಲ್ಲಿ ಅವರು ಊಟಮಾಡಿದ್ದುದರಿಂದ, ಆಯಾಸ, ಹಸಿವು. ಕಾಲುಗಳು ಹೆಜ್ಜೆಯನ್ನು ಎತ್ತಿಡಲು ಅಸಮರ್ಥವಾಗಿವೆ. ಈಗ ಅವರು ಯಾವುದೋ ಒಂದು ಬೀದಿಯಲ್ಲಿ ಹೆಜ್ಜೆ ಹಾಕುತ್ತ ಇದ್ದರು. ಜನಸಂಚಾರವಿಲ್ಲದೆ ಆ ಬೀದಿ ಬಿಕೋ ಎನ್ನುತ್ತಿದೆ.

ಶಿವಶಂಕರಂ ಅವರಿಗೆ ತಲೆ ಈಗ ಗಿರ್ರ್ ಎಂದು ಸುತ್ತತೊಡಗಿತು. ಕಣ್ಣುಗಳು ಮಂಜು. 'ಸರಿ, ಯಾವುದೋ ಒಂದು ಊರಿನ ಬೀದಿಯಲ್ಲಿ ಅನಾಥನಾಗಿ ಬಿದ್ದು ಹೋಗುತ್ತೇನೆ' ಎನ್ನುವ ಭಾವನೆ ಅವರಿಗೆ ಉಂಟಾಯಿತು. ಒಡನೆ ಅವರು ನಾಲ್ಕು ಹೆಜ್ಜೆ ಮುಂದಿಟ್ಟು ಬೀದಿಯ ಬದಿಗಿದ್ದ ಒಂದು ಮನೆಯ ಪಡಸಾಲೆಯಲ್ಲಿ ಕುಳಿತರು. ತಕ್ಷಣವೆ ಅವರಿಗೆ ನೆನಹು ತಪ್ಪಿಹೋಯಿತು.

೩

ಶಿವಶಂಕರಂ ಪಿಳ್ಳೈ ಕಣ್ಣುಗಳನ್ನು ತೆರೆದಾಗ ಅವರು ಕಂಡ ದೃಶ್ಯ ಮತ್ತೆ ನೆನಹು ತಪ್ಪುವ ಹಾಗೆಯೇ ಇದೆ. ಮಲ್ಲಿಗೆಯ ಸುವಾಸನೆಯೂ ಊದುಬತ್ತಿಯ ಪರಿಮಳವೂ ಅಲ್ಲಿ ವ್ಯಾಪಿಸಿದೆ. ನಾಲ್ಕು ಕಡೆಗೂ ಅವರು ದೃಷ್ಟಿ ಹರಿಸಿದರು.

ಅದು ಒಂದು ಚಿಕ್ಕ ಕೊಠಡಿ. ಅಲ್ಲಿ ಒಂದು ಅಲಂಕಾರದ ಮಂಚ. ಅದರ ಮೇಲಿದ್ದ ಸುಪ್ಪತ್ತಿಗೆಯಲ್ಲಿ ಇವರು ಮಲಗಿದ್ದರು. ಅಲ್ಲಿನ ಗೋಡೆಯಲ್ಲಿ ಒಂದು ಚಿತ್ರಪಠ. ಅದಕ್ಕೆ ಮಲ್ಲಿಗೆ ಹಾರ ಹಾಕಿದೆ. ಅದರ ಮುಂದಿನ ಚಿಕ್ಕ ಸ್ಟಾಂಡಿನಲ್ಲಿ ನೀಲಾಂಜನ ಪ್ರಭೆಯನ್ನು ಬೀರಿದೆ.

ಆ ನಂದಾದೀಪದ ಬೆಳಕಿನಿಂದ ತೂಗಹಾಕಿದ್ದ ಆ ಚಿತ್ರಪಟವನ್ನು ಶಿವಶಂಕರಂ ಪಿಳ್ಳೈ ದಿಟ್ಟಿಸಿ ನೋಡಿದರು. ಅವರಿಗೆ ದಿಗ್ಭ್ರಮೆಯಾದಂತಾಯಿತು. ಎದ್ದು ಕುಳಿತವರು ಮತ್ತೊಮ್ಮೆ ನೋಡಿದರು. ಸಂದೇಹವೇ ಇಲ್ಲ. ಅದು ತಮ್ಮದೇ ಭಾವಚಿತ್ರ.

ಆ ಚಿತ್ರ ಮೂವತ್ತೈದು ವರ್ಷಗಳ ಹಿಂದೆ ತೆಗೆಸಿದ್ದು. ಆದುದರಿಂದ ಸ್ವಲ್ಪ ಮಾಸಿದ ಹಾಗಿತ್ತು. ಆದರೆ ಅದರ ಭಂಗಿ ಎಂಥಾದ್ದು? ತಲೆಯ ಕೂದಲು ಬಳಸಿ ಆಗ ಅವರು ಗಂಟುಹಾಕಿದ್ದಾರೆ. ಕಿವಿಯಲ್ಲಿ ವಜ್ರದ ಕುಡುಕುಗಳು, ಹಣೆಯಲ್ಲಿ ವಿಭೂತಿ ಪಟ್ಟೆ. ಅದರ ಮಧ್ಯೆ ಒಂದು ಸಣ್ಣ ಶ್ರೀಗಂಧದ ಬೊಟ್ಟು. ಷರ್ಟ್, ಕಾಲರ್ ಕೋಟು, ಆ ಯೌವನದ ದಿನಗಳ ರೂಢಿಗೂ ಈಗಿನ ಮುದಿಮುಖಕ್ಕೂ ಎಂಥ ವ್ಯತ್ಯಾಸ! ಏನು ಬದಲಾವಣೆ! ಆ ಕಾಲದಲ್ಲಿ ತಾವು ಹೀಗೆ ಇದ್ದುದಾಗಿ ಈಗ ನಂಬಲು ಸಹ ಸಾಧ್ಯವಿಲ್ಲವಾಗಿದೆ.

ಶಿವಶಂಕರಂ ಪಿಳ್ಳೈಯವರಿಗೆ ಆ ಕಾಲದ ನೆನಪುಗಳು ಬಂದರೆ ಹಿಂದೆ ಒಂದು ತೆರೆಯಾಗಿ ಸುತ್ತಿಬಂದುವು. ನಿನ್ನೆ ನಡೆದಂತೆ ಅವುಗಳು ಎಷ್ಟು ಸೊಗಸಾಗಿ ಈಗ ಅವರ ಕಣ್ಣಮುಂದೆ ಬಂದು ನಿಲ್ಲುತ್ತಿವೆ!

ತಿರುಚಿನಾಪಳ್ಳಿಯಲ್ಲಿರುವ ಸ್ಟೆಂಟ್ ಜೋಸೆಫ್ ಕಾಲೇಜಿನಲ್ಲಿ ಅವರ ವಿದ್ಯಾಭ್ಯಾಸ. ಆ ವರ್ಷ ಅವರು ಎಂ. ಎ. ಪರೀಕ್ಷೆಗೆ ಕುಳಿತುಕೊಳ್ಳಬೇಕು. ಒಂದು ಮನೆ ಮಾಡಿ, ಒಬ್ಬ ಅಡಿಗೆಯವನನ್ನು ಅವರು ನಿಯಮಿಸಿಕೊಂಡಿದ್ದರು. ಪಿಳ್ಳೈ ದೊಡ್ಡ ಜಮೀನುದಾರರ ಮಗನಷ್ಟೆ. ಖರ್ಚಿಗೆ ಏನೂ ಹೆದರಬೇಕಾಗಿಲ್ಲ.

ಆ ವರುಷದ ಜ್ಯೇಷ್ಠಮಾಸದಲ್ಲಿ ಅವರಿಗೆ ಮದುವೆ ನಿಶ್ಚಯವಾಯಿತು. ಹುಡುಗಿ ದೊಡ್ಡವರ ಮನೆಯವಳು. ಶಿವಶಂಕರಂರವರ ತಂದೆ ಮಗನ ಮದುವೆಯನ್ನು ಅದ್ದೂರಿಯಾಗಿ ಮಾಡಲು ಏರ್ಪಾಡುಮಾಡಿದ್ದರು. ಮದುವೆಗೆ ಕೆಲವು ದಿನಗಳ ಮೊದಲೆ ಊರಿಗೆ ಬಂದುಬಿಡಬೇಕು ಎಂದು ಅವರು ಮಗನಿಗೆ ಕಾಗದವನ್ನೂ ಬರೆದರು. ಅಂತೆಯೆ ಪಿಳ್ಳೈ ಊರಿಗೆ ಹೊರಟರು.

ಅವರ ಗ್ರಾಮ ರೈಲ್ವೆ ನಿಲ್ದಾಣದಿಂದ ಆರು ಮೈಲುಗಳ ದೂರದಲ್ಲಿದೆ. ನಾಲ್ಕನೆಯ ಮೈಲಿಯಲ್ಲಿ ಅರಸವಾತ್ತಿ ಹೊಳೆ ಸಿಗುತ್ತದೆ. ಆಗ ಅದಕ್ಕೆ ಸೇತುವೆ ಇರಲಿಲ್ಲ. ಪ್ರವಾಹದ ಕಾಲಗಳಲ್ಲಿ ದೋಣಿಯ ಮೂಲಕವೆ ಆಚೆ ದಂಡೆಯನ್ನು ಹೋಗಿ ಸೇರಬೇಕು.

ಶಿವಶಂಕರಂ ಪಿಳ್ಳೈ ಯಾವುದೋ ಗಾಡಿಯಲ್ಲಿ ಕುಳಿತು ಆ ನದಿಯ ದಂಡೆಗೆ ಬಂದು ಸೇರಿದರು. ಪ್ರವಾಹ ಈಗ ಅಲೆ ಚಿಮ್ಮಿಸುತ್ತ ಇದೆ. ಆಚೆ ದಡದಲ್ಲಿ ತಮ್ಮ ಮನೆಯಿಂದ ಕಳಿಸಿರುವ ಗಾಡಿ ನಿಂತಿರುವುದೂ ಕಾಣಿಸುತ್ತ ಇದೆ. ಆದರೆ ಆಗ ತಾನೆ ಒಂದು ದೋಣಿ ಈ ಕಡೆಯಿಂದ ಆ ಕಡೆಗೆ ಸಾಗುವಲ್ಲಿ ನದಿಯ ಅರ್ಧಭಾಗಕ್ಕೆ ಹೊರಟುಹೋಗಿದೆ. ಅದು ಮತ್ತೆ ಇಲ್ಲಿಗೆ ಬರುವುದಕ್ಕೆ ಕಾಲು-ಅರ್ಧ ಗಂಟೆಯಾದರೂ ಸಮಯ ತೆಗೆದುಕೊಳ್ಳುತ್ತದೆ.

ನದಿಯ ದಂಡೆಯಲ್ಲಿರುವ ಒಂದು ಆಲದ ಮರದ ಕೆಳಗೆ ಶಿವಶಂಕರಂ ಪಿಳ್ಳೈ ಕುಳಿತಿದ್ದರು. ಆಗ ಕಲಕಲಕಲ ಎನ್ನುವ ನಗೆಯನ್ನೂ ಕೇಳಿ ಥಟ್ಟನೆ ಅವರು ತಿರುಗಿ ನೋಡಿದರು.

ಹೌದು, ಆ ಮರದ ಬುಡದಿಂದ ಆಚೆ ಸ್ವಲ್ಪ ದೂರದಲ್ಲಿ ಒಬ್ಬ ಹುಡುಗಿಯೂ ತಾಯಿಯೂ ಬುತ್ತಿಯನ್ನು ಬಿಚ್ಚಿಕೊಂಡು ಊಟಮಾಡುತ್ತ ಕುಳಿತಿದ್ದರು. ಆ ಊಟದ ಮಧ್ಯೆ ಕುಳಿತಿರುವ ಒಂದು ಕಾಗೆಗಳತ್ತ ಹಿಡಿಹಿಡಿ ಅನ್ನವನ್ನೂ ಎಸೆಯುತ್ತಿದ್ದಳು. ಕೆಲವು ಸಲ ಅನ್ನದ ಅಗುಳುಗಳು ಕೆಳಗೆ ಚೆಲ್ಲಿ ಚೆಲ್ಲಾಪಿಲ್ಲಿಯಾಗುತ್ತಿತ್ತು. ಆದರೆ ಇನ್ನೊಂದು ಸಲ ಹಾಗೆ ಆಗದೆ, ಇವಳು ಎಸೆದ ಅನ್ನ ನೆಲಕ್ಕೆ ಬೀಳದೆ, ಒಂದು ಕಾಗೆ ಗಬಕ್ಕನೆ ಅದನ್ನು ತನ್ನ ಕೊಕ್ಕಿನಿಂದ ಹಿಡಿದುಬಿಡುತ್ತಿತ್ತು. ಅದಕ್ಕೇ ಆ ಹುಡುಗಿಗೆ ಅಷ್ಟು ನಗು.

ಶಿವಶಂಕರಂ ಇದನ್ನೆಲ್ಲಾ ನೋಡಿಕೊಂಡೇ ಕುಳಿತಿದ್ದರು. ಅವರಿಗೂ ಈ ಕಾಗೆಗಳ ಚಾಣಾಕ್ಷತನವನ್ನು ಕಂಡು ನಗು ಬರುತ್ತಿತ್ತು. ಒಂದು ಸಲ ಅವರ ಗಟ್ಟಿಯಾಗಿ ನಗೆ ಯಾಡಿದ್ದನ್ನು ಆ ಹುಡುಗಿ ಈ ಕಡೆ ನೋಡಿಬಿಟ್ಟಳು. ಮತ್ತೆ ಅವಳು ಅನ್ನವನ್ನು ಎಸೆ ಯುವಾಗ ಮೆಲ್ಲಗೆ ಕದ್ದು ಕದ್ದು ಈ ಕಡೆ ನೋಡುತ್ತಿದ್ದಳು. ಈ ಕಾಗೆಯಾಟದಲ್ಲಿ ಶಿವ ಶಂಕರಂ ಪಿಳ್ಳೈ ಸಂಪೂರ್ಣವಾಗಿ ಲೀನವಾಗಿದ್ದರು.

ನದೀತೀರದ ಕಾಗೆಗಳಿಗೆ ಧೈರ್ಯ ಜಾಸ್ತಿ ಎಂದು ಹೇಳುತ್ತಾರಲ್ಲವೆ? ಈ ಕಾಗೆಗಳಿಗೆ ಬರಬರುತ್ತ ಮತ್ತಷ್ಟು ಧೈರ್ಯ ಉಕ್ಕಿತು. ಕೊನೆಯದಾಗಿ ಅವು ಆ ಹುಡುಗಿಯ ಕೈಯಲ್ಲಿದ್ದ ಹಿಡಿ ಅನ್ನವನ್ನು ಅವಳು ಎಸೆಯುವುದಕ್ಕೆ ಮೊದಲೆ ಹಿಡಿಯಲು ಪ್ರಯತ್ನಿ ಸಿದುವು. ಆಗ ಆ ಹುಡುಗಿ "ಅಯ್ಯಯ್ಯೋ" ಎಂದು ಕೂಗಿಕೊಂಡಳು. ಅವಳು ಕೂಗಿ ಕೊಂಡದ್ದು ತಮಾಷೆಗೊ ಭಯಕ್ಕೊ ತಿಳಿಯದು. ಒಡನೆ ಶಿವಶಂಕರಂ ಪಿಳ್ಳೈ ಎದ್ದವರೇ 'ಹಾ ಹಾ ಹೋಯ್' ಎಂದು ಕೂಗನ್ನು ಹಾಕುತ್ತಾರೆ. ಕಾಗೆಗಳು ಹಾರಿಹೋದುವು.

ಆಗ ಆ ಹುಡುಗಿ ತನ್ನ ತಾಯತ್ತ ತಿರುಗಿ, "ಇವರು ನನ್ನನ್ನು ಕಾಕಾಸುರನಿಂದ ಕಾಪಾಡಿದರು" ಎಂದಳು.

ಆ ವಾರ್ತೆಗಳು ಶಿವಶಂಕರಂ ಪಿಳ್ಳೈಯವರಿಗ ತುಂಬಾ ಹಿತವನ್ನು ತಂದಿತು. ಕಾಕಾಸುರ, ಇವಳು ಓದಿದ ಹುಡುಗಿಯ ಹಾಗೆ ಕಾಣುತ್ತಾಳಲ್ಲ. ಅವಳೊಂದಿಗೆ ಮಾತಾಡ ಬೇಕೆಂದರೆ ಏನೋ ಸಂದೇಹ.

ದೋಣಿ ಈಗ ಬಂದುಬಿಟ್ಟಿತು. ಪ್ರಯಾಣಿಕರು ಇವರು ಮೂವರೇ. ದೋಣಿ ಯಲ್ಲಿ ಈಗ ಇವರು ಹೋಗಿ ಕುಳಿತರು.

ನೀರಿನ ಮೇಲೆ ದೋಣಿ ಸಾಗುವಾಗ, ದೋಣಿ ನೀರನ್ನು ಸೀಳಿಕೊಂಡು ಇಬ್ಭಾಗ ವಾಗುತ್ತದಷ್ಟೆ. ಆ ಹುಡುಗಿ ಈ ನೋಟವನ್ನು ಕುತೂಹಲದಿಂದ ವೀಕ್ಷಿಸುತ್ತಿದ್ದಳು. ತನ್ನ ಜಡೆಯಲ್ಲಿದ್ದ ಸೇವಂತಿಗೆ ಹೂವನ್ನು ತೆಗೆದು ದೋಣಿಯ ಮುಂದೆ ಎಸೆಯುವಳು. ಅದು ನೀರಿನ ಮೇಲೆ ತೇಲುತ್ತಾ ದೋಣಿಯ ಹಿಂಭಾಗ ದಾಟುವುದರೊಳಗೆ ಇವಳು ಲಬಕ್ ಎಂದು ಮತ್ತೆ ಅದನ್ನು ಹಿಡಿದುಬಿಡುವಳು. ಹೀಗೆ ಅವಳು ನೀರಿನೊಂದಿಗೆ

ಆಟವಾಡುತ್ತಿದ್ದಾಗ, ಒಂದು ಸಲ ಬಾಗಿದ್ದವಳು, ಕಾಲುಜಾರಿ ನೀರಿಗೆ ಬೀಳು ವಂತಿದ್ದಳು.

ಅವಳ ಈ ಆಟವನ್ನೇ ಕುತೂಹಲದಿಂದ ನೋಡುತ್ತಿದ್ದ ಶಿವಶಂಕರಂ ಪಿಳ್ಳೈ ಭದ್ರವಾಗಿ ಅವಳ ಕರವನ್ನು ಹಿಡಿದುಬಿಟ್ಟನು. "ಲೇ, ಧನಕೋಟಿ, ಇದೇನೇ ನಿನ್ನ ಆಟ? ಈಗ ನೀನು ಜಾರಿ ನೀರಿನಲ್ಲಿ ಮುಳುಗುತ್ತಿದ್ದೆಯಲ್ಲ" ಎಂದಳು ಅವಳ ತಾಯಿ.

ಧನಕೋಟಿ ನಗೆಯಾಡಿದಳು. "ನಿಮಗೆ ಈಜಲು ಬರುತ್ತದೆಯೊ?" ಎಂದು ಆಕೆ ಶಿವಶಂಕರಂ ಪಿಳ್ಳೈಯವರನ್ನು ಕೇಳಿದಳು. ಅವರು "ಬರುತ್ತದೆ" ಎಂದೊಡನೆ "ಹಾಗಾದರೆ ನನ್ನನ್ನು ಯಾಕೆ ಹಿಡಿದಿರಿ? ನೀರಿಗೆ ಬಿದ್ದಾಗ ಎತ್ತಿಹಾಕಬಹುದಿತ್ತು" ಎಂದಳು.

ತಮ್ಮ ಜೀವನದಲ್ಲಿ ಇಂಥ ಮಧುರ ಅನುಭವ ಪಿಳ್ಳೈಯವರಿಗೆ ಹೊಸದು. ಅವರು ಯಾವುದೋ ಹೊಸ ಜಗತ್ತಿನಲ್ಲಿ ಈಗ ಸಂಚರಿಸಿಕೊಂಡಿದ್ದರು.

ದೋಣಿ ಆಚೆ ದಂಡೆಯನ್ನು ಮುಟ್ಟಿತು. ತಮಗಾಗಿ ಸಿದ್ಧವಾಗಿದ್ದ ಗಾಡಿಯಲ್ಲಿ ಶಿವಶಂಕರಂ ಪಿಳ್ಳೈ ಹೋಗಿ ಕುಳಿತರು. ಆ ಹುಡುಗಿಯನ್ನೂ ಅವಳ ತಾಯಿಯನ್ನೂ ಕರದೊಯ್ಯಲು ಮೂರು ನಾಲ್ಕು ಜನ ಬಂದಿದ್ದರು. ಆದರೆ ಅವರು ಅಷ್ಟು ಬೇಗ ಹೊರಡುವ ಹಾಗೆ ಕಾಣಲಿಲ್ಲ. ಪಿಳ್ಳೈಯವರ ಗಾಡಿ ಟಕಟಕವೆಂದು ಓಡಿತು. ಧನಕೋಟಿ ತನ್ನನ್ನೆ ನೋಡುತ್ತಿರುವ ಹಾಗೆ ಅವರ ಮನಸ್ಸಿನ ಭಾವನೆ.

'ಅವಳು ಯಾರು? ಎಲ್ಲಿಂದ ಬಂದಿದ್ದಾಳೆ? ಎಲ್ಲಿಗೆ ಹೋಗುತ್ತಾಳೆ? ಇನ್ನು ಮುಂದೆ ಅವಳನ್ನು ಕಾಣಲು ಸಾಧ್ಯಸಾಗುತ್ತದೆಯ? ಆಹಾ, ಅವಳು ಎಷ್ಟು ಸುಂದರಿ! ಆ ಕಣ್ಣುಗಳು, ಅವಳ ತುಂಟ ನಗೆ. ಪ್ರತಿಸಲವೂ ಅವಳು ತಮ್ಮನ್ನು ಕದ್ದು ಕದ್ದು ನೋಡಿ ದಳು. ಹೌದು, ಒಂದು ದಿನ ಮೊದಲೆ ಈಕೆಯನ್ನು ಭೆಟ್ಟಿಯಾಗಿದ್ದರೆ ಈ ಲಗ್ನದ ಏರ್ಪಾಡನ್ನು ನಿಲ್ಲಿಸಬಹುದಿತ್ತು. ಛೆ, ಛೆ, ಇದೆಂತಹ ಹುಚ್ಚು ಕಲ್ಪನೆಗಳು!' ಎಂದು ಪಿಳ್ಳೈ ನಾನಾ ವಿಧವಾಗಿ ತಮ್ಮಲ್ಲಿ ಚರ್ಚಿಸಿಕೊಂಡರು.

ಮದುವೆ ವೈಭವದಿಂದ ನಡೆಯಿತು. ಈ ಸಡಗರದಲ್ಲಿ ಶಿವಶಂಕರಂ ಪಿಳ್ಳೈ ದೋಣಿಯ ಘಟನೆಯನ್ನು ಮರೆತರು. ತಮ್ಮ ಕೈ ಹಿಡಿದವಳನ್ನು ನೋಡಿ ನೋಡಿ ಹಿಗ್ಗಿದರು. ಎರಡನೆಯ ದಿನ ನಾಟ್ಯಕಚೇರಿ. ಶಿವಶಂಕರಂ ಪಿಳ್ಳೈರಿಗೆ ನಾಟ್ಯ ಅಷ್ಟಕ್ಕಷ್ಟೇ. ಮದುವೆಯ ಎರಡನೆಯ ದಿನ ಇದು ನಡೆಯಲೇ ಬೇಕು, ಎನ್ನುವುದು ಎಂಥ ಪದ್ಧತಿ ಎಂದು ಅವರು ತಮ್ಮೊಳಗೇ ಹೇಳಿಕೊಂಡರು. ಬಳಿಕ ವಿಧಿಯಿಲ್ಲದೆ ಸಭೆಗೆ ಬಂದು ಕುಳಿತರು. ಇಷ್ಟು ಜನ ಗಂಡಸರ ಮಧ್ಯೆ ಕುಣಿಯುವ ಆ ಹೆಂಗಸು ಯಾರೊ ಎಂದು ನೋಡುವ ಸಲುವಾಗಿ ತಲೆಯತ್ತಿದರು. ನೋಡಿದರು, ಮತ್ತೆ ಮತ್ತೆ ನೋಡಿದರು. ಕಣ್ಣು ರೆಪ್ಪೆ ಬಡಿಯದೆ ಸಹ.

ಹೌದು, ಅಲ್ಲಿಗೆ ನಾಟ್ಯವಾಡಲು ಬಂದಿದ್ದವಳು ತಮ್ಮೊಂದಿಗೆ ದೋಣಿಯಲ್ಲಿ ಕುಳಿತು ನದಿಯನ್ನು ದಾಟಿದ ಅದೇ ಹುಡುಗಿ.

ಶಿವಶಂಕರಂ ಪಿಳ್ಳೈಯವರಿಗೆ ಈಗ ಸ್ವಯಂಪ್ರಜ್ಞೆ ಬರಲು ಸ್ವಲ್ಪ ಸಮಯವೇ ತೆಗೆದುಕೊಂಡಿತು. ಅನಂತರ 'ಛೆ, ನಾನು ಹೀಗೆ ಆ ಹುಡುಗಿಯನ್ನು ದಿಟ್ಟಿಸಿ ನೋಡು ತ್ತಿದ್ದರೆ ನೋಡಿದವರು ಏನು ತಿಳಿದುಕೊಂಡಾರು?' ಎಂದವರೇ ತಮ್ಮ ದೃಷ್ಟಿಯನ್ನು ಬೇರೆ ಕಡೆಗೆ ಹರಿಯಿಸಿದ್ದರು. ಪಕ್ಕದಲ್ಲಿದ್ದ ಸ್ನೇಹಿತನೊಂದಿಗೆ 'ನಾಟ್ಯಗಾತಿ ಯಾವ ಊರಿನವಳು?' ಎಂದರು. ಆತ 'ನಿನಗೆ ಗೊತ್ತಿಲ್ಲವೊ? ಇಷ್ಟು ದಿನಗಳಿಂದ ತಿರುಚಿನಾ ಪಳ್ಳಿಯಲ್ಲಿಯೆ ಇದ್ದೀಯ. ಈಕೆ ಅಲ್ಲಿಯ ಮಲೈಕೊಟ್ಟೈಯಲ್ಲಿರುವ ಪ್ರಸಿದ್ಧ ನಾಟ್ಯಗಾತಿ ಧನಕೋಟಿ' ಎಂದ.

ಧನಕೋಟಿ ಮೊದಲು ಸ್ವಲ್ಪ ಹೊತ್ತು ನಾಟ್ಯವಾಡಿದಳು. ಬಳಿಕ ಪದಗಳನ್ನೂ ಹಾಡಿದಳು. ಶಿವಶಂಕರಂ ಪಿಳ್ಳೈಯವರಿಗೆ ಇದರಲ್ಲೆಲ್ಲ ಶ್ರದ್ಧೆ ಇಲ್ಲ. ಅವರ ಮನಸ್ಸು ಎಲ್ಲಿಯೆಲ್ಲಿಯೊ ಸಂಚರಿಸಿಕೊಂಡಿತ್ತು. ಮಧ್ಯೆ ಮಧ್ಯೆ ಒಂದೊಂದು ಸಲ ಅವರು ಧನ ಕೋಟಿಯನ್ನು ನೋಡುತ್ತಿದ್ದರು. ಮತ್ತೆ ಬೇರೆ ಕಡೆಗೆ ಮುಖವನ್ನು ತಿರುಗಿಸಿಕೊಳ್ಳು ತ್ತಿದ್ದರು. ಆದರೆ ಧನಕೋಟಿ ಈಗ ಒಂದು ಸಂಸ್ಕೃತ ಶ್ಲೋಕಕ್ಕೆ ಅಭಿನಯವನ್ನು ಹಿಡಿದಾಗ ಅವರ ಪೂರ್ಣಾಗಮನವೂ ಈ ಕಡೆಗೆ ಹರಿಯಿತು.

ಅದು ಒಂದು ರಾಗಮಾಲಿಕೆ, ಕಾಕಾಸುರ ವೃತ್ತಾಂತದ ವರ್ಣನೆ. ರಾಮ ಸೀತೆಯ ತೊಡೆಯ ಮೇಲೆ ತಲೆಯಿಟ್ಟು ನಿದ್ರಿಸುತ್ತಿದ್ದಾಗ, ಕಾಕಾಸುರ ಬಂದು ಸೀತೆಯ ದೇಹಕ್ಕೆ ತನ್ನ ಕೊಕ್ಕನ್ನು ಚಾಚುತ್ತಾನೆ. ಎಷ್ಟು ಬೆದರಿಸಿದರೂ ಅವನು ಜಗ್ಗುತ್ತಿಲ್ಲ. ರಾಮ ಕಣ್ತೆರದು ದರ್ಭೆಯ ಅಸ್ತ್ರವನ್ನು ಪ್ರಯೋಗಿಸುತ್ತಾನೆ. ಆ ಅಸ್ತ್ರ ಅವನನ್ನು ಹಿಂಬಾಲಿಸು ತ್ತದೆ. ಕಾಕಾಸುರ ಅದರಿಂದ ತಪ್ಪಿಸಿಕೊಳ್ಳಲು ಮೂರು ಲೋಕಗಳಿಗೂ ಹೋಗಿದ್ದು ಮತ್ತೆ ರಾಮನಲ್ಲಿಯೇ ಶರಣಾಗತಿ ಹೊಂದುತ್ತಾನೆ.

ಧನಕೋಟಿ ಈ ಶ್ಲೋಕಕ್ಕೆ ಸರಿಯಾಗಿ ಹೆಜ್ಜೆ ಹಾಕಿದಳು. ಕಾಗೆಯನ್ನು ತೋರಿಸಲು ಆಕೆ ತನ್ನ ಕೈ ಬೆರಳುಗಳಿಂದ ಕಾಗೆಯ ಹಾಗೆ ಮಾಡಿಕೊಂಡಳು. ಅದರಿಂದ ತನ್ನನ್ನು ರಕ್ಷಿಸಿಕೊಳ್ಳುವ ಸಲುವಾಗಿ ಬಾಗಿದಾಗ ಸಭೆ ಹರ್ಷ ಧ್ವನಿಗೈದಿತು. ಸಭೆಯಲ್ಲಿ ಕುಳಿತಿದ್ದ ಒಬ್ಬ ಒಂದು ಕಣ್ಣಿನವನು ಎದ್ದು ಈಗ ಹೊರಟೇ ಹೋದ.

ಮತ್ತೆ ಸೀತೆ ಕಾಗೆಯನ್ನು ಓಡಿಸಿದ್ದು, ಅದು ಹಾರಿ ಹಾರಿ ಬಂದು ಸೀತೆಗೆ ತೊಂದರೆ ಕೊಟ್ಟದ್ದು, ಬಳಿಕ ರಾಮನ ಬಳಿ ಅದು ಶರಣಾಗತಿಯಾದದ್ದು—ಹೀಗೆ ಮುಗಿದ ಮೇಲೆ ಧನಕೋಟಿ ಒಂದು ಸಲ ಶಿವಶಂಕರಂರವರತ್ತ ಮೆಲ್ಲಗೆ ದೃಷ್ಟಿ ಹಾಯಿಸಿದಳು.

ಆ ನೋಟ ಈಗ ತಮ್ಮ ಕಣ್ಣ ಮುಂದೆ ಬಂದು ನಿಂತಿರುವ ಹಾಗಿದೆಯಲ್ಲ.

## ೪

ಮದುವೆ ಮುಗಿದ ಮೇಲೆ ಮತ್ತೆ ಪಿಳ್ಳೈ ಅವರು ತಮ್ಮ ವಿದ್ಯಾಭ್ಯಾಸವನ್ನು ಮುಂದುವರಿಸಲು ತಿರುಚಿರಾಪಳ್ಳಿಗೆ ಹೊರಟರು.

ಆದರೆ ಈಗ ಅವರಿಗೆ ಓದಿನಲ್ಲಿ ಅಭಿರುಚಿ ಕೆರಳಲಿಲ್ಲ. ಅವರಿಗೆ ಸದಾಕಾಲವೂ ಧನ ಕೋಟಿಯ ನೆನಪೇ. ತಿರುಚಿರಾಪಳ್ಳಿಯಲ್ಲಿ ಅವಳ ಭರತನಾಟ್ಯ ಎಲ್ಲಿ ನಡೆದರೂ ಇವರು ಅಲ್ಲಿ ಹಾಜರಾಗುತ್ತಿದ್ದರು. ಒಂದು ದಿನ ಪಿಳ್ಳೈ ಒಂದು ನಾಟ್ಯ ಕಚೇರಿ ಮುಗಿದ ಮೇಲೆ ಹೊರಬರುವಾಗ ಧನಕೋಟಿಯ ತಾಯಿಯನ್ನು ಸಂಧಿಸಿದರು. ಎಂಥದೊ ಧೈರ್ಯ ದಿಂದ "ನಿಮ್ಮ ಮನೆ ಎಲ್ಲಿದೆ?" ಎಂದು ವಿಚಾರಿಸಿದರು. ಆಕೆ ವಿಳಾಸವನ್ನು ತಿಳಿಸಿ ಒಂದು ದಿನ ನಮ್ಮ ಮನೆಗೆ ಬನ್ನಿ" ಎಂದು ಆಹ್ವಾನಿಸಿದಳು.

ಮುಂದೆ ಶಿವಶಂಕರಂ ಪಿಳ್ಳೈ ಆಗಾಗ್ಗೆ ಧನಕೋಟಿಯ ಮನೆಗೆ ಹೋಗಿ ಬರಲಾರಂಭಿ ಸಿದರು. ಅವರ ಮನಸ್ಸಿನಲ್ಲಿ ಈಗ ಭಾರೀ ಸಂದೇಹ. ತಮ್ಮ ಬರವನ್ನು ಧನಕೋಟಿ ಸ್ವಾಗತಿಸುತ್ತಾಳೋ ಇಲ್ಲವೊ ಎಂದು. ನದೀತಟದಲ್ಲಿ ಅವಳು ತೋರಿಸಿದ ಆಸಕ್ತಿ ಈಗ ಇಲ್ಲವಾಗಿದೆ. ಅವಳ ಮುಖದಲ್ಲಿ ಯಾಕೋ ಸಂತಸದ ಬುಗ್ಗೆಗಿಂತ ದುಃಖದ ಛಾಯೆಯೇ ವ್ಯಾಪಿಸಿಕೊಂಡಿದೆ. ಅವಳು ಅವರೊಂದಿಗೆ ಮಾತಾಡಿದರೂ ನಾಲ್ಕಾರು ವಾಕ್ಯಗಳು ಅಷ್ಟೇ. ಅವಳ ಈ ವರ್ತನೆ ಶಿವಶಂಕರಂ ಅವರಿಗೆ ಮನೋವ್ಯಥೆಯನ್ನು ತಂದಿತ್ತು.

ಒಂದು ಸಲ ಧನಕೋಟಿ ಪಿಳ್ಳೈಯವರನ್ನು ಕೇಳಿದಳು:

"ನೀವು ಫೋಟೋ ತೆಗೆಸಿಕೊಂಡಿದ್ದೀರಾ?"

"ಓ, ತೆಗೆಸಿಕೊಂಡಿದ್ದೇನೆ."

"ಹಾಗಾದರೆ ನನಗೆ ಒಂದು ಪ್ರತಿ ಕೊಡಿ. ಬೇಗ ಕೊಡಬೇಕು."

ದೀಪಾವಳಿ ಇನ್ನು ನಾಲ್ಕು ದಿನಗಳು ಮಾತ್ರ ಇದ್ದಿತು. ಅಳಿಯ ದೀಪಾವಳಿ ಯಲ್ಲವೆ? ಮೊದಲ ವರ್ಷವಾದುದರಿಂದ ಊರಿಗೆ ಬರಬೇಕು ಎಂದು ಕಾಗದ ಬಂದಿತು. ಆದರೆ ಊರಿಗೆ ಹೋಗುವುದಿಲ್ಲ ಎಂದು ಪಿಳ್ಳೈ ತೀರ್ಮಾನಿಸಿದರು. ಮೊದಲು ಈ ಸುದ್ದಿ ಊರಿಗೆ ತಿಳಿಯಬಾರದು ಎಂದು ದೀಪಾವಳಿ ಹಿಂದಿನ ದಿನ ಹೋಗಿ ಸೇರುವ ಕಾಗದ ಹಾಕಿದರು. "ತನಗೆ ತುಂಬಾ ಓದುವುದಿದೆ. ಆದುದರಿಂದ ಬರಲು ಸಾಧ್ಯವಿಲ್ಲ" ಎಂದು ಕಾಗದದಲ್ಲಿ ಬರೆದಿದ್ದರು.

ಹೀಗೆ ಶಿವಶಂಕರಂ ತೀರ್ಮಾನಿಸಲು ಮುಖ್ಯ ಕಾರಣ ದೀಪಾವಳಿಯ ದಿನವೇ ತಮ್ಮ ಭಾವಚಿತ್ರದ ಪ್ರತಿಯೊಂದನ್ನು ಧನಕೋಟಿಗೆ ತೆಗೆದುಕೊಂಡು ಹೋಗಿ ಕೊಡಬೇಕು

ಎನ್ನುವ ಉದ್ದೇಶ. ಅಂತೆಯೇ ಆ ಬೆಳಕಿನ ಹಬ್ಬದ ದಿನ ಸ್ನಾನಮಾಡಿ ಹೊಸ ಬಟ್ಟೆ ಧರಿಸಿ ಪಿಳ್ಳೈ ಧನಕೋಟಿಯ ಮನೆಗೆ ಹೋದರು.

ಧನಕೋಟಿಗೆ ಇವರನ್ನು ನೋಡಿ ಆಶ್ಚರ್ಯವಾಯಿತು. ಆಕೆ ಕೇಳಿದಳು:

"ಏನು? ದೀಪಾವಳಿಗೆ ನೀವು ಊರಿಗೆ ಹೋಗಲಿಲ್ಲವೊ?"

"ಇಲ್ಲ, ನನ್ನ ಈ ಫೋಟೊವನ್ನು ಹಬ್ಬದ ದಿನ ನಿನಗೆ ಕೊಡುವುದಕ್ಕಾಗಿಯೇ ನಾನು ಉಳಿದುಕೊಂಡೆ."

"ತುಂಬ ಸಂತೋಷ" ಎನ್ನುತ್ತ ಧನಕೋಟಿ ಆ ಭಾವಚಿತ್ರವನ್ನು ತೆಗೆದುಕೊಂಡಳು. ಆದರೆ ಅವಳು ಸಂತೋಷ ಎಂದು ಹೇಳಿದಳೇ ವಿನಾ ಅವಳ ಮುಖದಲ್ಲಾಗಲಿ ಧ್ವನಿಯಲ್ಲಾಗಲಿ ಉತ್ಸಾಹ ಕಂಡುಬರಲಿಲ್ಲ.

ಅವಳು ಉತ್ಸಾಹರಹಿತಳಾಗಿರುವುದನ್ನು ಗಮನಿಸಿದ ಪಿಳ್ಳೈ, ಆ ಮನೆಯಿಂದ ಹೊರಬಂದವರೆ ನೆನಹು ತಪ್ಪಿದಂತೆ ಬೀದಿಯುದ್ದಕ್ಕೂ ನಡೆದರು. ಆಗ, ಸ್ವಲ್ಪ ದೂರದಲ್ಲಿ, ಅವರಿಗೆ ಎದುರಾಗಿ ಅವರ ತಂದೆ ಬರುತ್ತಿರುವುದನ್ನು ನೋಡಿ ಪಿಳ್ಳೈ ದಿಗ್ಭ್ರಮೆಗೊಂಡರು. 'ಅಯ್ಯೋ, ನಾನು ಧನಕೋಟಿಯ ಮನೆಯಿಂದ ಬರುತ್ತಿರುವುದನ್ನು ತಂದೆ ನೋಡಿದರೊ ಹೇಗೆ?' ಎಂದುಕೊಳ್ಳುತ್ತ 'ಈವಾಗ ಎಲ್ಲಿ ಬಂದಿರಪ್ಪ?' ಎಂದು ತಂದೆಯನ್ನು ವಿಚಾರಿಸಿದರು.

"ನಿನ್ನನ್ನು ಕರೆದುಕೊಂಡು ಹೋಗಲು ಬಂದೆ" ಎಂದರು ತಂದೆ.

ಮನೆಗೆ ಹೋದೊಡನೆ ಆ ಮನೆಯನ್ನೆ ತೆರವು ಮಾಡಲು ತಂದೆ ಏರ್ಪಾಡು ಮಾಡಿದರು. "ಇದು ಯಾಕಪ್ಪಾ ಹೀಗೆ?" ಎಂದು ಪಿಳ್ಳೈ ಪ್ರಶ್ನೆಮಾಡಲು, "ದೀಪಾವಳಿಗೆ ಊರಿಗೆ ಬಾರದಷ್ಟು ಓದು ನಿನಗೆ ಇದ್ದರೆ, ಅಂಥ ಓದು ಬೇಕಾದ್ದಿಲ್ಲ" ಎಂದು ಖಡಾಖಂಡಿತವಾಗಿ ಹೇಳಿದರು ತಂದೆ.

ಈ ಜಗತ್ತಿನಲ್ಲಿ ಮಾಡದೆ ಇರುವ ಕೆಲಸವೊಂದು ಪಿಳ್ಳೈಯವರಿಗೆ ಇದೆ. ಅದು ತಂದೆಯ ಮಾತನ್ನು ಮೀರಲು ಸಾಧ್ಯವಿಲ್ಲದೆ ಇರುವುದು.

ಪಿಳ್ಳೈ ಈಗ ತಮ್ಮ ಸ್ವಗ್ರಾಮಕ್ಕೆ ಹೊರಟರು. ಸ್ವಲ್ಪ ಕಾಲದ ವರೆಗೆ ಅವರಿಗೆ ಹುಚ್ಚು ಹಿಡಿದ ಹಾಗೆಯೆ ಇತ್ತು. ಧನಕೋಟಿಯನ್ನು ನೋಡದೆ ಇರುವುದು ಒಂದು ಕಾರಣ. ತಂದೆ ತನ್ನ ವಿದ್ಯಾಭ್ಯಾಸವನ್ನೇ ನಿಲ್ಲಿಸಲು ಏನು ಕಾರಣ ಎನ್ನುವುದು ಮತ್ತೊಂದು ಚಿಂತೆ. ಕೊನೆಯದಾಗಿ ಇದಕ್ಕೆ ಕಾರಣವನ್ನು ಅವರು ಕಂಡುಹಿಡಿದರು.

ಒಂದು ದಿನ ಅವರು ಯಾತಕ್ಕೋ ಆಭರಣಗಳ ಪೆಟ್ಟಿಗೆಯನ್ನು ತೆರೆಯುವ ಸಂದರ್ಭ ಒದಗಿ ಬಂದಾಗ, ಅಲ್ಲಿ ಒಂದು ಕಾಗದ ಅವರ ಕೈಗೆ ಸಿಕ್ಕಿತು. ಅದಕ್ಕೆ ತಿರುಚಿರಾಪಳ್ಳಿಯ ಮೊಹರು ಬಿದ್ದಿತ್ತು. ಅದನ್ನು ತೆರೆದವರೆ ಅವರು ಓದತೊಡಗಿದರು. ಮುದ್ದಾದ ಅಕ್ಷರಗಳಲ್ಲಿ ಬರೆದಿದ್ದ ಆ ಕಾಗದದ ಒಕ್ಕಣೆ ಹೀಗಿತ್ತು:

ಸ್ವಾಮಿ,

ತಾವು ತಮ್ಮ ಮಗನ ಮದುವೆಗೆ ಭರತನಾಟ್ಯದ ಏರ್ಪಾಡು ಮಾಡಿದಿರಿ. ಅದರ ಪರಿಣಾಮ ಕೋವಲನ್–ಮಾಧವಿ ಕತೆಯಾಗಿ ಮುಗಿಯುವ ಹಾಗಿದೆ. ನಿಮ್ಮ ಮಗನನ್ನು ಉಳಿಸಿಕೊಳ್ಳಬೇಕಾದರೆ ಮಲ್ಲಿಕೊಟ್ಟೈ ಮನೆಗೆ ಹೋಗದಂತೆ ನಿರ್ಬಂಧ ಹಾಕುವುದೊಂದೇ ಸರಿಯಾದ ಮಾರ್ಗ ವಾಗಿದೆ.

ಇಂತು ತಮ್ಮ
ಸತ್ಯವನ್ನು ಹೇಳುವವನು.

ಶಿವಶಂಕರಂ ಪಿಳ್ಳೈಯವರಿಗೆ ಈಗ ಎಲ್ಲವೂ ಅರ್ಥವಾಯಿತು. ಆದರೆ ಈ ಕಾಗದವನ್ನು ಬರೆದ ಪಾಪಿ ಯಾರು? ಒಂದು ಸಮಯ ಧನಕೋಟಿಯ ಮನೆಗೆ ಬರುವ ಮತ್ತೊಬ್ಬ ಈ ಕಾಗದವನ್ನು ಬರೆದಿರಬಹುದೋ? ಹಾಗಲ್ಲದೆ ತಮ್ಮ ಸಹಪಾಠಿ ಗಳಲ್ಲಿ ಯಾರಾದರೂ ಈ ಕೆಲಸವನ್ನು ಮಾಡಿದರೋ? ಅವರು ಯಾರಾದರೂ ಸರಿಯೆ, ಅಯೋಗ್ಯರು, ಎಂದು ಬೈದುಕೊಂಡರು ಪಿಳ್ಳೈ.

ದಿನಗಳು ಕಳೆದಂತೆ, ಎರಡು ವರ್ಷ ಕಳೆಯಲು, ಧನಕೋಟಿಯ ಮೇಲಿದ್ದ ಅವರ ವ್ಯಾಮೋಹ ಕರಗುತ್ತ ಬಂದಿತು. ಹಾಗೆ ಕಾಗದ ಬರೆದವನು ಒಳ್ಳೆಯ ಕೆಲಸವನ್ನೆ ಮಾಡಿದ, ಎನ್ನುವ ಭಾವನೆಯೂ ಉಂಟಾಯಿತು. ಕುಲಗೌರವಕ್ಕೆ ಕುಠಾರಪ್ರಾಯವಾದ ಕಾರ್ಯವನ್ನು ತಾವು ಕೈಗೊಂಡುದು ಆಗಿತ್ತು. ಧನಕೋಟಿಯ ಮನೆಗೆ ಹೋಗು ತ್ತಿದ್ದಾಗ. ಆಕೆಯ ತಾಯಿ, ಊರಿನ ದೊಡ್ಡ ಮನುಷ್ಯರನ್ನೆಲ್ಲ ಎಷ್ಟು ತುಚ್ಛವಾಗಿ ಮಾತಾಡುತ್ತಿದ್ದಳು? ಹಾಗೆಯೆ ತಮ್ಮನ್ನೂ ಒಂದು ದಿನ ಆಕೆ ಮಾತಾಡದೆ ಇರುತ್ತಿದ್ದಳೆ? ಕೋವಲನ್–ಮಾಧವಿ ಕತೆ ಎಂದು ಆ ಕಾಗದದಲ್ಲಿ ಬರೆದಿರುವುದು ಸರಿಯಾಗಿಯೆ ಇದೆ. ಛೆ, ಎಂಥ ತಪ್ಪು ಮಾರ್ಗದಲ್ಲಿ ತಾನು ಅಡಿಯಿಡುತ್ತ ಇದ್ದೆ !

೫

ಮಂಚದ ಮೇಲೆ ಮಲಗಿದ್ದ ಶಿವಶಂಕರಂ ಪಿಳ್ಳೈಯವರಿಗೆ ಹಳೆಯ ನೆನಪುಗಳೆಲ್ಲವೂ ಒಂದೊಂದಾಗಿ ಮರುಕಳಿಸಿ ಬಂದುವು. ಈ ಸಂಭವಗಳೆಲ್ಲವೂ ನಿನ್ನೆ ಮೊನ್ನೆ ನಡೆ ದಂತೆಯೇ. ಆದರೆ ಇದು ಏನು ಆಶ್ಚರ್ಯ? ಈ ಭಾವಚಿತ್ರ ಇಲ್ಲಿಗೆ ಹೇಗೆ ಬಂದಿತು? ಒಂದು ಸಮಯ ತಲೆನೆರೆತ ಈ ಹೆಂಗಸು, ಒಂದು ಕಾಲದಲ್ಲಿ ತಮ್ಮನ್ನು ಮೋಹದ ಬಲೆಗೆ ಬೀಳಿಸಿದ ಅದೇ ಧನಕೋಟಿ ಆಗಿರಬಹುದೊ? ಹೇಗೆ? ಇದ್ದರೂ ಇರಬಹು ದೇನೊ? ಇದರಲ್ಲಿ ಅತಿಶಯ ಏನಿದೆ?

ಹೊರಗೆ ಹೋಗಿದ್ದ ಆ ಹೆಂಗಸು ಮತ್ತೆ ಈಗ ಒಳಗೆ ಬಂದಳು. ಶಿವಶಂಕರಂ ಪಿಳ್ಳೈ ಮನಸ್ಸನ್ನು ದೃಢಮಾಡಿಕೊಂಡು ಆಕೆಯನ್ನು ಪ್ರಶ್ನಿಸಿದರು:

"ಆ ಫೋಟೋದಲ್ಲಿರುವ ಹುಡುಗ ಯಾರು? ಎಲ್ಲಿಯೊ ನಾನು ಆತನನ್ನು ನೋಡಿದ ನೆನಪು."

"ಸ್ವಾಮಿ, ಅವರು ನನಗೆ ಪ್ರಾಣ ಇದ್ದ ಹಾಗೆ. ಆದರೆ ಬಾಲ್ಯದಲ್ಲಿಯೇ ನಾನು ಅವರನ್ನು ಕಳೆದುಕೊಂಡೆ."

"ಏನು?" ಎನ್ನುತ್ತ ಪಿಳ್ಳೈ ಆಶ್ಚರ್ಯದಿಂದ ಕೇಳಿದರು.

"ಹೌದು, ಅದು ಒಂದು ದೊಡ್ಡ ಕತೆ. ಇದುವರೆಗೆ ನಾನು ಅದನ್ನು ಯಾರೊಂದಿಗೂ ಹೇಳಿರಲಿಲ್ಲ. ಆದರೆ ಈಗ ನಿಮ್ಮೊಂದಿಗೆ ಹೇಳಬೇಕೆಂದು ಯಾಕೊ ಆಸೆಯಾಗುತ್ತಿದೆ."

ಶಿವಶಂಕರಂ ಪಿಳ್ಳೈ ಹಾಗೆಯೇ ಮೆಲ್ಲಗೆ ಒರಗಿ ಕುಳಿತವರೆ ಆ ಕತೆಯನ್ನು ಕೇಳಲು ಉತ್ಸುಕರಾದರು:

"ಈ ಕತೆಯನ್ನು ಕೇಳಿದರೆ ನೀವು ನನ್ನನ್ನು ದ್ವೇಷಿಸುತ್ತೀರೊ ಏನೊ? ನಾನು ದೇವದಾಸಿ ಕುಲದವಳು . . . ." ಎಂದು ಆಕೆ ಪ್ರಾರಂಭಿಸಿದಳು.

ಆ ಮೇಲೆ ಆಕೆ ಹೇಳಿದ್ದೆಲ್ಲವೂ ಶಿವಶಂಕರಂ ಪಿಳ್ಳೈಯವರಿಗೆ ತಿಳಿದ ಸಂಗತಿಯೇ. ಆಕೆ ಬೇರೆ ಯಾರೂ ಆಗಿರದೆ ಧನಕೋಟಿಯೇ ಆಗಿದ್ದಳು. ನದೀತಟದಲ್ಲಿ ಸಂಧಿಸಿದ ದಿನದಿಂದ ದೀಪಾವಳಿಯ ವರೆಗಿನ ಸಂಭವವೆಲ್ಲವನ್ನೂ ಹೇಳಿ "ಮತ್ತೆ ಅವರನ್ನು ನಾನು ಕಾಣಲೆ ಇಲ್ಲ......" ಎಂದು ಆಕೆ ಹೇಳಿ ಮುಗಿಸಿದಾಗ "ಹಾಗಾದರೆ ಯಾಕೆ ನೀನು ಇನ್ನೂ ಅವರನ್ನು ನೆನಪಿನಿಂದ ಅಳಿಸಿಹಾಕಿಲ್ಲ?" ಎಂದು ಪಿಳ್ಳೈ ಪ್ರಶ್ನಿಸಿದರು.

"ಅದು ಅವರ ತಪ್ಪಲ್ಲ" ಎಂದು ಹೇಳಿ ಮಾತನ್ನು ನಿಲ್ಲಿಸಿದ ಧನಕೋಟಿ ಸ್ವಲ್ಪ ಹೊತ್ತು ಬಿಟ್ಟು ತನ್ನ ಕತೆಯನ್ನು ಮುಂದುವರಿಸಿದಳು:

"ಆ ನಂತರ ಸ್ವಲ್ಪ ಕಾಲದ ವರೆಗೆ ನಾನು ನಾಟ್ಯಕಚೇರಿ ಮಾಡುತ್ತಿರಲಿಲ್ಲ. ಬಳಿಕ ಅಭ್ಯಾಸಕ್ಕೆ ಇಳಿದೆ. ಸಭೆಯನ್ನು ಒಂದು ಸಲ ನಾನು ಕಣ್ಣಾಡಿಸುತ್ತಿದ್ದೆ. ಎಲ್ಲಿಯಾದರೂ ಅವರ ಮುಖ ಕಂಡಿತೇನೋ ಎನ್ನುವ ಆಸೆ. ಆದರೆ ಅವರು ಎಲ್ಲಿಯೂ ಸಿಗುತ್ತಿಲ್ಲ ಎಂದ ಮೇಲೆ ನನಗೆ ನಿರಾಶೆ ಕವಿಯುತ್ತಿತ್ತು. ಬಳಿಕ ಕೆಲವು ವರ್ಷಗಳು ನಾಟ್ಯವಾಡು ವುದನ್ನು ನಿಲ್ಲಿಸಿಕೊಂಡೆ. ಈಗ ನನ್ನ ಮನೋರಥ ಒಂದೇ. ನಾನು ಸಾಯುವುದರೊಳ ಗಾಗಿ ಅವರನ್ನು ಒಂದು ಸಲ ನೋಡಿಬಿಡಬೇಕು. ಈ ಆಸೆ ನೆರವೇರುತ್ತದೆ ಎನ್ನುವ ನಂಬಿಕೆ ನನಗಿದೆ. ದೇವರು ಕೃಪೆ ತೋರಬೇಕು" ಎನ್ನುತ್ತ ಧನಕೋಟಿ ಮಾತನ್ನು ಮುಗಿಸಿಕೊಂಡಳು.

ಶಿವಶಂಕರಂ ಪಿಳ್ಳೈ ಅಂದು ಹಗಲು ಮತ್ತು ರಾತ್ರಿ ಅಲ್ಲಿಯೆ ಕಳೆದರು. ಅವರ ಮನಸ್ಸಿನಲ್ಲಿ ಭಾರೀ ತುಮುಲ. ಒಂದು ಸಲ ಅವರು 'ನಾನೇ ಈ ನಿರ್ಭಾಗ್ಯ, ನ್ಯಾಯಾ

ಲಯದ ತೀರ್ಥದಲ್ಲಿ ಎಲ್ಲವನ್ನೂ ಕಳೆದುಕೊಂಡಿದ್ದೇನೆ,' ಎಂದು ಹೇಳಬೇಕು ಎನ್ನಿಸಿದರೆ, ಮತ್ತೊಂದು ಸಲ 'ಛೆ,ಛೆ, ಇದು ಏನು ನಾಚಿಕೆಗೇಡು? ಎಂಥ ಜೀವನ? ಈ ಸ್ಥಿತಿಯಲ್ಲಿ ನಾನು ನನ್ನ ಸ್ವರೂಪ ದರ್ಶನ ಮಾಡಿಸಲೆ? ಧನಕೋಟಿ ಆರಾಧಿಸುತ್ತಿದ್ದ ಆ ಯೌವನದ ಸುಂದರ ಮೂರ್ತಿ ಶಿವಶಂಕರಂ ಎಲ್ಲಿ? ಚಿಂತೆ ಮಡುಗಟ್ಟಿದ ಈ ಮುದಿಮುಖದವನು ಎಲ್ಲಿ?' ಎಂದು ಪೇಚಾಡಿಕೊಳ್ಳುವರು.

ಕೊನೆಗೆ ಎರಡನೇ ದಿನ ಸತ್ಯಕ್ಕೇ ಜಯವಾಯಿತು.

ಟಣ್ ಟಣ್ ಟಣ್ ಟಣ್ ಎಂದು ಗಡಿಯಾರದಲ್ಲಿ ಮೂರು ಗಂಟೆ ಹೊಡೆಯಿತು. ಮನೆಯಲ್ಲಿ ಎಲ್ಲರೂ ಗಾಢವಾದ ನಿದ್ರೆಯಲ್ಲಿ ಮುಳುಗಿದ್ದರು. ಶಿವಶಂಕರಂ ಪಿಳ್ಳೈ ಮೆಲ್ಲಗೆ ಎದ್ದು, ಶಬ್ದಮಾಡದೆ, ಬಾಗಿಲು ತೆರೆದು, ಬೀದಿಗೆ ಬಂದು ಸೇರಿದರು. ಆಹಾ, ಇದು ಏನು? ದೇಹ ಇಷ್ಟು ಲವಲವಿಕೆಯಿಂದ ಇದೆಯಲ್ಲ. ಸ್ವಲ್ಪವೂ ಆಲಸ್ಯ ತೋರುತ್ತ ಇಲ್ಲವಲ್ಲ. ಗಾಳಿಯ ಹಾಗೆ ದೇಹ ಹಗುರವಾಗಿದ್ದು ಹೆಜ್ಜೆ ಹಾಕುತ್ತಿದ್ದರೆ ಬಾನಿನಲ್ಲಿ ಸಂಚರಿಸುತ್ತಿರುವ ಹಾಗಿದೆ. ಒಂದು ಸಮಯ ಇದು ಮರಣಕ್ಕೆ ಹಿಂದಿನ ಸ್ಥಿತಿಯೊ? ಧನಕೋಟಿಯ ಮನೆಯಿಂದ ಈಗ ನಾನು ಎದ್ದು ಬಂದಿದ್ದೇನೆ. ಮರಣ ಇಷ್ಟು ಆನಂದವಾಗಿದೆ ಎಂದು ನನಗೆ ತಿಳಿದೇ ಇರಲಿಲ್ಲವಲ್ಲ.

ಬೀದಿಯ ಕೊನೆಯಲ್ಲಿ ಪಟಾಕಿಗಳ ಶಬ್ದ ಕೇಳಿ ಬರುತ್ತಿದೆ. ಒಡನೆ ಅವರಿಗೆ ಮಕ್ಕಳ ನೆನಪು. ಈ ಪ್ರಪಂಚವನ್ನು ಬಿಟ್ಟು ಹೋಗುವುದಕ್ಕೆ ಮೊದಲು ಒಂದು ಸಲ ಅವರನ್ನು ಕಣ್ತುಂಬ ನೋಡಿಬಿಡಬೇಕು ಎಂದು ಮನಸ್ಸಿನಲ್ಲಾಯಿತು.

ಸ್ವಲ್ಪ ಸಮಯದಲ್ಲಿಯೆ ಶಿವಶಂಕರಂ ಪಿಳ್ಳೈ ತಮ್ಮ ಮನೆಯ ಬಾಗಿಲಲ್ಲಿ ಬಂದು ನಿಂತರು. ಬಾಗಿಲನ್ನು ತಟ್ಟಿದರು. ಆದರೆ ಒಳಗಿಂದ ಉತ್ತರವಿಲ್ಲ. ಮಕ್ಕಳ ಹೆಸರನ್ನು ಹೇಳಿ ಗಟ್ಟಿಯಾಗಿ ಕೂಗಲು ಪ್ರಯತ್ನಿಸಿದರು. ಆದರೆ ಬಾಯಿಂದ ಶಬ್ದವೆ ಹೊರಡಲೊಲ್ಲದು. ಮರಣ ಎಂದರೆ ಇದೇ ಸ್ಥಿತಿ ಎಂದು ಕಾಣುತ್ತದೆ.

"ಶಿವಶಂಕರ ಮೊದಲಿಯಾರೇ, ಶಿವಶಂಕರ ಮೊದಲಿಯಾರೇ" ಎಂದು ಕೂಗುವ ಧ್ವನಿ ಮೆಲ್ಲಗೆ ಈಗ ಕೇಳಿಬರುತ್ತಿದೆ. ಇದೇನು ಆಶ್ಚರ್ಯ! ಇದು ಕಿಟ್ಟು ಐಯ್ಯರ್ ಧ್ವನಿ. ಅವರು ಇಲ್ಲಿಗೆ ಹೇಗೆ ಬಂದರು?

ಶಿವಶಂಕರಂ ಪಿಳ್ಳೈಯವರನ್ನು ಮೊದಲಿಯಾರ್ ಎಂದು ಕೂಗುವುದು ಕಿಟ್ಟು ಅಯ್ಯರ್ ಒಬ್ಬರೇ. ಮೊದಲ ಸಲ ಸಂಧಿಸಿದಾಗ ಅವರು ಅವರನ್ನು ಹಾಗೆ ಸಂಬೋಧಿಸಿದ್ದರು. ಬಳಿಕ ಹಾಗೆಯೇ ಕೂಗಿ ಅವರಿಗೆ ಅಭ್ಯಾಸವಾಗಿ ಹೋಯಿತು.

ಈ ವಕೀಲ ಗುಮಾಸ್ತೆ ಭೂಲೋಕದಲ್ಲಿ ತನಗೆ ಇಷ್ಟು ತೊಂದರೆ ಕೊಟ್ಟದ್ದು ಸಾಲದೆಂದು ಇಲ್ಲಿಗೂ ಬರ ಬೇಕೆ?

"ಶಿವಶಂಕರ ಮೊದಲಿಯಾರ್, ಶಿವಶಂಕರ ಮೊದಲಿಯಾರ್" ಮತ್ತೆ ಅದೇ ಕೂಗು.

"ಇಲ್ಲಿ ಎಲ್ಲಯ್ಯಾ ಬಂದಿರಿ?" ಎಂದು ಪಿಳ್ಳೈಯವರ ಬಾಯಿಂದ ವಾಕ್ಯಗಳು ಹೊರ ಬಿದ್ದುವು. ಅದೇ ಸಮಯದಲ್ಲಿ ಅವರ ಕಣ್ಣುಗಳೂ ತೆರೆದುಕೊಂಡುವು.

ಈಗ ಅವರ ಎದುರಿಗೆ ಸಾಕ್ಷಾತ್ ಕಿಟ್ಟು ಅಯ್ಯರ್ ಕುಳಿತಿದ್ದಾರೆ. ಅವರು ತಮ್ಮನ್ನು ಕುರಿತು ಕೇಳುತ್ತಿದ್ದಾರೆ:

"ಏನು ಮೊದಲಿಯಾರರೇ, ಹೀಗೆ ಅನ್ಯಾಯಮಾಡಲು ಹೊರಟಿರಲ್ಲ?"

ಶಿವಶಂಕರಂ ಪಿಳ್ಳೈಯವರಿಗೆ ಈಗ ಸ್ವಲ್ಪ ಸ್ವಲ್ಪ ತಿಳಿವು ಬರುತ್ತ ಇದೆ. ತಾವು ದಂಡೆಯಲ್ಲಿ ಒರಗಿರುವುದು ಅರಿವಾಗುತ್ತ ಇದೆ. ಚೆನ್ನಾಗಿ ಕತ್ತಲೆ ಕವಿದಿದೆ. ಅವರ ಸನಿಹದಲ್ಲಿ ಇನ್ನೂ ಇಬ್ಬರು ಮೂವರು ನಿಂತಿದ್ದಾರೆ. ಕಿಟ್ಟು ಅಯ್ಯರ್ ಫ್ಲಾಸ್ಕಿಂದ ಕಾಫಿ ತೆಗೆದು ಕುಡಿಯಲು ಹೇಳುತ್ತಿದ್ದಾರೆ.

ಕಾಫಿ ಕುಡಿದಾದ ಮೇಲೆ ಅವರಿಗೆ ಸ್ವಲ್ಪ ಲವಲವಿಕೆ ಉಂಟಾದಂತಾಯಿತು. ಆಗ ಪಿಳ್ಳೈ ಕೇಳಿದರು:

"ನನ್ನನ್ನು ಇಲ್ಲಿ ಹೇಗೆ ಕಂಡುಹಿಡಿದಿರಿ?"

"ತೀರ್ಪು ಹೊರಬಿದ್ದ ಮೇಲೆ ನಾನೂ ವಕೀಲರೂ ಕೊಟಡಿಗೆ ಬಂದಾಗ ನಿಮ್ಮನ್ನು ಕಾಣಲಿಲ್ಲ. ನಾನು ನಿಮ್ಮಲ್ಲಿ ತಮಾಷೆಯಾಗಿ ಹೇಳಿದ್ದುದನ್ನು ವಕೀಲರಿಗೆ ಹೇಳಿದೆ. ಅವರು 'ಛೆ ಮೂರ್ಖ, ಚಾಂಡಾಳ, ಆ ಮನುಷ್ಯ ಈ ಕೇಸಿನಲ್ಲಿ ಜಯವನ್ನು ನಿರೀಕ್ಷಿಸಿ ಕೊಂಡಿದ್ದರು. ಎಲ್ಲಿಯಾದರೂ ಹೋಗಿ ಪ್ರಾಣ ಕಳೆದುಕೊಂಡರೆ ಏನು ಗತಿ?' ಎಂದು ಕೂಗನ್ನು ಹಾಕಿದರು. ನೀವು ಯಾವಾಗಲೂ ಈ ಸಮುದ್ರದಂಡೆಗೆ ಬರುತ್ತಿದ್ದುದು ನನಗೆ ತಿಳಿದ ಸಂಗತಿಯಷ್ಟೆ. ತಮ್ಮನ್ನು ಹುಡುಕಿಕೊಂಡು ನಾನು ಇಲ್ಲಿಗೆ ಬಂದೆ. ವಕೀಲರು ಹೇಳಿದ್ದು ನಿಜವಾಗಿಯೇ ಇದೆ. ಬೆಸ್ತರು ನಿಮ್ಮನ್ನು ದಂಡೆಗೆ ಎತ್ತಿ ಹಾಕ ದಿದ್ದರೆ ನಾನು ಎಲ್ಲಿ ನೋಡಲು ಸಾಧ್ಯವಿತ್ತು?"

"ಹಾಗಾದರೆ ಕೇಸು ಏನು ಆಯಿತು?"

"ಆಗುವುದೇನು? ಜಿಲ್ಲಾ ನ್ಯಾಯಾಧೀಶರು ಮೂರ್ಖತನವಾಗಿ ತೀರ್ಪನ್ನಿತ್ತ ಮಾತ್ರಕ್ಕೆ ಹೈಕೋರ್ಟು ಹಾಗೆ ಮಾಡುತ್ತದೇನು? ನಮಗೆ ಜಯವಾಗಿದೆ."

೬

ಶಿವಶಂಕರಂ ಪಿಳ್ಳೈಯವರ ಮನೆಯಲ್ಲಿ ಆ ವರ್ಷ ಕೋಲಾಹಲವಾಗಿ ದೀಪಾವಳಿ ಹಬ್ಬವನ್ನು ಆಚರಿಸಿದ್ದು ಆಗಿದೆ. ಕೇಸು ಅವರಿಗೆ ಜಯವನ್ನು ತಂದು ಹತ್ತು ಎಕರೆ ಭೂಮಿ ಅವರದೇ ಆಯಿತಲ್ಲ.

ಆದರೆ ಪಿಳ್ಳೈಯವರ ಮನಸ್ಸಿಗೆ ಮಾತ್ರ ಶಾಂತಿ ಇಲ್ಲ. ಸಮುದ್ರದಲ್ಲಿ ಹಾರಿ ನೆನಹು ತಪ್ಪಿದ ಮೇಲೆ ಅವರು ಅನುಭವಿಸಿದ ಅತಿಶಯವಾದ ಯಾವುದೋ ಲೋಕದ ಅನುಭವ ಗಳು ಅವರ ಮನಸ್ಸನ್ನು ಬಿಟ್ಟು ಕದಲಲಿಲ್ಲ. ಒಂದು ಸಮಯ ನಿಜವಾಗಿಯೂ ಧನ ಕೋಟಿ ಜೀವಿಸಿದ್ದಾಳೆಯೆ? ತನ್ನ ಬಗ್ಗೆ ಚಿಂತಿಸಿಕೊಂಡಿದ್ದಾಳೆಯೆ?

ಅವೊತ್ತು ಅವರಿಗೆ ಅಂಚೆಯಲ್ಲಿ ಒಂದು ಪಾರ್ಸೆಲ್ ಬಂದಿತು. ಅದನ್ನು ಬಿಚ್ಚಿ ನೋಡಿದಾಗ ಅವರಿಗುಂಟಾದ ಸಂತೋಷಕ್ಕೆ ಪಾರವೇ ಇಲ್ಲ. ಹೌದು, ಅದರಲ್ಲಿ ಅವರು ತಿರುಚಿರಾಪಳ್ಳಿಯಲ್ಲಿ ಮೂವತ್ತೈದು ವರ್ಷಗಳ ಹಿಂದೆ ತೆಗೆಸಿ ಧನಕೋಟಿಗೆ ಕೊಟ್ಟಿದ್ದ ಭಾವಚಿತ್ರ ಇತ್ತು. ಅದರ ಕೂಡ ಒಂದು ಕಾಗದ ಕೂಡ ಇದೆ.

"ನಾನು ಈ ಜಗತ್ತನ್ನು ಬಿಟ್ಟುಹೋಗುವುದಕ್ಕೆ ಮೊದಲು ತಮ್ಮನ್ನು ಒಂದು ಸಲ ಕಣ್ತುಂಬ ನೋಡಬೇಕು ಎಂದು ತುಂಬಾ ಆಸೆಯಾಗಿದ್ದೆ. ಆ ಮನೋರಥ ಈಗ ನೆರ ವೇರಿದೆ. ಕೆಲವು ದಿನಗಳ ಹಿಂದೆ ಕನಸಿನಲ್ಲಿ ನಿಮ್ಮನ್ನು ನಾನು ನೋಡಿದ್ದೇನೆ.

"ನಾನು ಇನ್ನು ಹೆಚ್ಚು ದಿನ ಬದುಕುವುದಿಲ್ಲ ಎಂದು ಡಾಕ್ಟರುಗಳು ಹೇಳಿದ್ದಾರೆ. ಆದುದರಿಂದ ನನ್ನ ಸಮಸ್ತ ಆಸ್ತಿಯನ್ನೂ ಧರ್ಮಕ್ಕಾಗಿ ಬರೆದು, ನಿಮ್ಮನ್ನು ಅದಕ್ಕೆ ಧರ್ಮದರ್ಶಿಯನ್ನಾಗಿ ನಿಯಮಿಸಿದ್ದೇನೆ. ತಾವು ಈ ಏರ್ಪಾಡಿಗೆ ಒಪ್ಪಬೇಕು. ದೀಪಾವಳಿಯ ದಿನ ತಾವು ನನಗೆ ಕೊಟ್ಟಿದ್ದ ಭಾವಚಿತ್ರವನ್ನು ಹಿಂದಿರುಗಿಸಿದ್ದೇನೆ. ನನ್ನ ನೆನಪಿಗಾಗಿ ಅದು ಯಾವಾಗಲೂ ತಮ್ಮ ಬಳಿಯಲ್ಲಿಯೆ ಇರಲಿ.

ಇಂತು,
ಧನಕೋಟಿ

ಈ ಕಾಗದ ಶಿವಶಂಕರಂ ಪಿಳ್ಳೈಯವರಿಗೆ ತುಂಬಾ ಆಶ್ಚರ್ಯವನ್ನು ಉಂಟು ಮಾಡಿತು ಎಂದು ಹೇಳುವ ಹಾಗೆಯೆ ಇಲ್ಲ. ಆದರೆ ಇದರಲ್ಲಿ ವಿಸ್ಮಯಕರವಾದ ಮತ್ತೊಂದು ಸಂಗತಿ ಸಹ ಇದೆ. ಅದು ಏನೆಂದರೆ ಮೂವತ್ತೈದು ವರ್ಷಗಳ ಹಿಂದೆ ಶಿವಶಂಕರಂ ಪಿಳ್ಳೈಯವರ ತಂದೆಗೆ ಮಗನ ಬಗ್ಗೆ ಎಚ್ಚರಿಕೆ ಹೇಳಿ ಬರೆದಿದ್ದ ಅಕ್ಷರ ಗಳಿಗೂ ಈಗ ಸಹಿಮಾಡಿ ಕಾಗದ ಬರೆದಿರುವುದಕ್ಕೂ ತುಂಬಾ ಹೋಲಿಕೆಯಿದೆ.

# ಸತ್ಯಕ್ಕೊಂದು ನಿಮಿಷ

ಹಟಾತ್ತನೆ ಕಾಲ ಜಡವಾಗಿ ಬಿಟ್ಟಿತೊ? ಸುತ್ತಮುತ್ತ ಇರುವ ಎಲ್ಲರೂ ಎಲ್ಲವೂ ಅಲಕ್ಷ್ಯದಿಂದ ತಾಮಸವೇಗದಲ್ಲಿ ಚಲಿಸುತ್ತ, ಚಟುವಟಿಕೆಯೇ ಇಲ್ಲದ ಹಾಗೆ ಕಾಣುತ್ತ ದಲ್ಲ. ಚಳಿಗಾಲದ ಸಾಧನಗಳು ಇರುವ ಈ ಕೊಠಡಿಯಲ್ಲಿಯೂ ಸಹ ನನ್ನ ದೇಹ ಯಾಕೆ ಹೀಗೆ ಬೆವರುತ್ತಿದೆ? ಛೆ, ಛೆ, ಸಹಿಸಲಶಕ್ಯವಾದ ಒಂದು ವಿಧದ ಏಕಾಂತತೆ. ಇದಕ್ಕೆ ಮೊದಲು ಯಾವಾಗಲೂ ಹೀಗೆ ಸಂಭವಿಸಿದ್ದಿಲ್ಲ. ಈ ಹನ್ನೆರಡು ವರ್ಷಗಳಲ್ಲಿ ತಿರುಮಗಳ್ ಪ್ರೊಡಕ್ಷನ್ಸ್‌ನಲ್ಲಿ ಈ ರೀತಿ ಹಣದ ಮುಗ್ಗಟ್ಟು ಆದದ್ದೇ ಇಲ್ಲ. ಸುಳ್ಳೊ ಪಳ್ಳೊ ಏನಾದರೂ ಮಾಡಿ, ಅದೆಷ್ಟು ಬಾರೀ ಮೊಬಲಗಾದರೂ ಸರಿಯೆ—ನಿಭಾಯಿಸುತ್ತಿದ್ದ ಚಾತುರ್ಯ ಈಗ ತಡೆಯದೆ ಹೋಗಿದೆ.

ದೇಹದ ಯಾವ ಭಾಗದಲ್ಲಿಯೂ ಎಳ್ಳಷ್ಟಾದರೂ ನೆಮ್ಮದಿ ಇಲ್ಲದೆ ಕಾಲಕಳೆಯು ತ್ತಿರುವ ಈ ನಿಮಿಷಗಳಲ್ಲಿ ಟೆಲಿಫೋನ್ ಮೂಲಕವಾಗಿಯೋ ಇಲ್ಲವೆ ಮುಖತಃ ಬಂದೋ ಬೆದರಿಸುವವರಿಗೆ ಏನು ಸಮಾಧಾನ ಹೇಳಲು ಸಾಧ್ಯವಿದೆ? ಯಾವ ರೀತಿಯಲ್ಲಿ ಅವರೊಂದಿಗೆ ಮಾತಾಡಿ ಹಿಂದಿರುಗಿಸಲು ಸಾಧ್ಯ?

ತಿರುಮಗಳ್ ಪ್ರೊಡಕ್ಷನ್ಸ್ ಮಾಲಿಕರಾದ ಪೊನ್ನುರಂಗಂ ಈ ರೀತಿಯಾಗಿ ಯೋಚಿ ಸುತ್ತ ಶತಪಥ ತಿರುಗುತ್ತಿದ್ದರು. ಅವರ ಹಣೆಯ ಮೇಲೆ ಗೆರೆಗಳನ್ನು ಎಳೆದಂತೆ ರೇಖೆ ಗಳು. ನಿದ್ದೆ, ಶಾಂತಿ—ಇಂಥವನ್ನೆಲ್ಲ ಕಳೆದುಕೊಂಡಿರುವ ಶೋಕದ ಕಣ್ಣುಗಳು. ಅವರ ಮುಖದಲ್ಲಿ ಕಳೆಯೂ ಇಲ್ಲ, ಕಲೆಯೂ ಇಲ್ಲ.

ಈ ಹನ್ನೆರಡು ವರ್ಷಗಳಲ್ಲಿ ಭಾರೀ ಬಂಡವಾಳವನ್ನು ಹಾಕಿ ಕೋಲಾಹಲವಾಗಿ ಅವರು ಎಂದೂ ಚಿತ್ರಗಳನ್ನು ತೆಗೆದದ್ದು ಇಲ್ಲ. ಎಲ್ಲರೂ ಹೊರಗೆ ಮಾತಾಡಿಕೊಳ್ಳುವ ಹಾಗೆ ಅವರೊಬ್ಬ ಸಂದರ್ಭವಾದಿ. ಸಮಯೋಚಿತ ಕುಶಾಗ್ರಬುದ್ಧಿಯೂ ಸನ್ನಿವೇಶಕ್ಕೆ ತಕ್ಕ ಹಾಗೆ ನಡೆದುಕೊಳ್ಳುವ ಚಾಣಾಕ್ಷತನವೂ ಇವೇ ಅವರ ಮೂಲ ಬಂಡವಾಳ. ಸ್ವಂತವಾಗಿ ಯಾವಾಗಲೂ ಅವರಲ್ಲಿ ಧನಬಲ ಇರಲೇ ಇಲ್ಲ. ಹೀಗೆಲ್ಲ ಇದ್ದುದರಿಂದಲೋ ಏನೋ ಅವರು ಹೆಸರಾಂತ ಚಿತ್ರ ನಿರ್ದೇಶಕರಾಗಿದ್ದಾರೆ. ಪ್ರಬಲ ಚಿತ್ರನಿರ್ಮಾಪಕರು ಎನ್ನುವ ಹೆಸರು ಪೊನ್ನುರಂಗರಿಗೆ ಇದ್ದರೂ ಆ ನಿರ್ಮಾಪಕರ ಹಿಂದುಗಡೆ ಯಾರದೊ 'ಬಲ' ಅವರಿಗೆ ಇರುತ್ತಿತ್ತು.

ಹಾಗೆ ಹೀಗೆ ಹಣಮಾಡಿ ಒಂದು ಚಿತ್ರವನ್ನು ತೆಗೆದರೆ ಹಳೆಯ ಸಾಲಗಳು ತೀರುತ್ತವೆ. ಹೊಸದಾಗಿ ಸಾಲಮಾಡಲು ಅನುಕೂಲವಾಗುತ್ತದೆ. ಕಾಯಕವೇ ನನ್ನ ಧರ್ಮ' ಎಂದು ಹಿರಿಯರು ಹೇಳಿದ್ದಾರಲ್ಲ, ಅದನ್ನು ಸ್ವಲ್ಪ ಬದಲಾಯಿಸಿ, 'ಸಾಲಮಾಡುವುದೆ ನನ್ನ ಧರ್ಮ' ಎಂದು ಹೇಳುತ್ತಿದ್ದರು ಪೊನ್ನುರಂಗಂ.

ಇನ್ನೂ ಸ್ವಲ್ಪ ಹೇಳುವುದಾದರೆ, ಈ ಹನ್ನೆರಡು ವರ್ಷಗಳಲ್ಲಿ, ಚಿತ್ರರಂಗದಲ್ಲಿ ಹೆಸರು ಮಾಡಿದ್ದು ಅವರಲ್ಲ. ಸುಳ್ಳು ಹೇಳಿ ನಿಭಾಯಿಸಿಕೊಳ್ಳುವ ಅವರ ಚಾಣಾಕ್ಷತನ ಅಷ್ಟೇ. ಅವರು ಹೇಳುವ ಮಿಥ್ಯೆಗೆ ಲಕ್ಷ್ಮೀ ಕಟಾಕ್ಷ ಒದಗಿ ಬಂದು ಅವರಿಗೆ ಯಶಸ್ಸನ್ನೂ ಕೀರ್ತಿಯನ್ನೂ ಒದಗಿಸಿಕೊಟ್ಟವು. ಆ ಕಟಾಕ್ಷ ಈಗ ಜಾರಿದ್ದು, ಅವರು ಹೇಳುವ. ಹೇಳಲು ಸಿದ್ಧವಾಗಿರುವ ಸತ್ಯಸಂಗತಿಗಳೂ, ಅವರನ್ನು ಈಗ ಕೈಬಿಡುವ ಹಾಗೆ ಕಾಣುತ್ತ ಇದೆ. ಇದಕ್ಕೇ ಅದೃಷ್ಟ ಎಂದು ಹೇಳುತ್ತಾರೋ ಏನೊ?

ಶತಪಥ ಹಾಕುತ್ತಿದ್ದುದನ್ನು ನಿಲ್ಲಿಸಿ ಪೊನ್ನುರಂಗಂ ಈಗ ಕುರ್ಚಿಯಲ್ಲಿ ಕುಳಿತರು. ಅವರ ಕೈಗಳು ತಾವಾಗಿಯೇ ಕೆನ್ನೆಗಳ ಮೇಲೆ ಹೋದುವು. ನಿಟ್ಟುಸಿರು, ಎಲ್ಲಿಯೋ ನೋಟ. ಎದುರಿನ ಗೋಡೆಯಲ್ಲಿ ತಾವರೆ ಹೂವಿನ ಮೇಲೆ ನಿಂತಿರುವ ಲಕ್ಷ್ಮಿಯ ದೊಡ್ಡ ಚಿತ್ರಪಟ. ತಿರುಮಗಳ್ ಪ್ರೊಡಕ್ಷನ್ಸ್‌ರವರ ಚಿಹ್ನೆ ಅದು.

ಈಗ ಆ ಚಿತ್ರವಲ್ಲಿರುವ ಲಕ್ಷ್ಮಿಯೇ ತಮ್ಮನ್ನು ಪರಿಹಾಸ್ಯ ಮಾಡುತ್ತಿದ್ದಾಳೋ ಎನ್ನುವ ಭಾವನೆ ಪೊನ್ನುರಂಗಂ ಅವರಿಗೆ. ಹೂವನ್ನು ತುಳಿದು ನಿಂತಿರುವ ದೈವ ತಮ್ಮ ಮನಸ್ಸನ್ನೂ ತುಳಿಯುತ್ತ ಇದೆಯೋ ಹೇಗೆ?

ಪ್ರಾರಂಭಮಾಡಿ ಮುಗಿಸದೆ ಇರುವ ಮೂರು ಚಿತ್ರಗಳು ಅರ್ಧಂಬರ್ಧ ಆಗಿವೆ. ಮುಂಗಡ ಕೊಟ್ಟಿರುವ ಹಂಚಿಕೆದಾರರು ಬೆದರಿಕೆ ಹಾಕುತ್ತ ಇದ್ದಾರೆ. ನಟನಟಿಯರಿಂದ ಕಾಲ್ಷೀಟ್ ಸಿಕ್ಕಿಲ್ಲ. 'ಫೈನಾನ್ಷಿಯರ್' ಯಾರೂ ಸಾಲಕೊಡಲು ಮುಂದೆ ಬರಲಿಲ್ಲ. ಚಿತ್ರಗಳ ವಿಳಂಬಕ್ಕಾಗಿ ಪ್ರಚಾರ ಕಂಪೆನಿಯವರು ಬಿಲ್ ಕಳಿಸಿದ್ದಾರೆ. ಹೊರಗೆ ಹೇಳಿದರೆ ನಾಚಿಕೆಗೇಡು. ಸರ್ವೀಸಿಗೆ ಕೊಟ್ಟಿದ್ದ ಕಾರನ್ನು ರಿಪೇರಿ ಹಣ ಪಾವತಿಮಾಡಿ ತೆಗೆದು ಕೊಂಡು ಬರಲೂ ಅವರ ಕೈಯಲ್ಲಿ ಬಿಡಿಗಾಸೂ ಇಲ್ಲ. ಆದರೆ ಪೊನ್ನುರಂಗಂ ಮಾತ್ರ ಏರ್‌ಕಂಡೀಷನ್ ಕೊಠಡಿಯಲ್ಲಿ ಶತಪಥ ಹಾಕುತ್ತಿದ್ದಾನೆ.

"ಸರ್ವೀಸು ಮುಗಿದು ಕಾರು ಸಿದ್ಧವಾಗಿದೆ. ಬಿಲ್ಲು ಕಳಿಸಿ ತೆಗೆದುಕೊಂಡು ಹೋಗ ಬಹುದು" ಎಂದು ಫೋನ್ ವಟಗುಟ್ಟಿದೆ.

"ನನಗೆ ಕಾರಿನ ನೆನಪೇ ಬರಲಿಲ್ಲ, ಸಾರ್. ಅಷ್ಟು ಗಡಿಬಿಡಿಯಲ್ಲಿದ್ದೇನೆ ಹೊರಾಂಗಣ ದೃಶ್ಯಕ್ಕೆ ಇವೊತ್ತು ಊಟಿಗೆ ಹೋಗುತ್ತ ಇದ್ದೇನೆ. ಅಲ್ಲಿಂದ ಬೆಂಗಳೂರಿಗೆ ಹೋಗ ಬೇಕು. ಸಮಯವೇ ಇಲ್ಲ. ಕಾರಿಗೆ ಈಗ ಏನು ಅವಸರ? ಬಂದಮೇಲೆ ತೆಗೆದುಕೊಳ್ಳು ತ್ತೇನೆ." ಹೀಗೆ ಪೊನ್ನುರಂಗಂ ಉತ್ತರ ಹೇಳುತ್ತಿದ್ದಾರೆ.

ಷೂಟಿಂಗ್ ಹೊರಾಂಗಣ ದೃಶ್ಯ—ಎಲ್ಲವೂ ಇಲ್ಲಿಯೇ ನಡೆದುಕೊಂಡಿದೆ. ಹಣ ಹಾಕಿದರಲ್ಲವೆ ಚಿತ್ರ ತೆಗೆಯಲು ಸಾಧ್ಯ?

'ಸುಳ್ಳು ಎನ್ನುವುದು ಒಂದು ಇದೆ. ನನ್ನಂಥವರಿಗೆ ಅದು ವರಪ್ರಸಾದ. ಇಷ್ಟು ವರ್ಷಗಳಿಂದ ಈ ವ್ಯಾಪಾರಕ್ಕೆ ನಾನು ಹಾಕಿದ ಮೂಲಬಂಡವಾಳ ಇದೊಂದೇ' ಎಂದು

ಪೊನ್ನುರಂಗಂ ತಮ್ಮೊಳಗೇ ಹೇಳಿಕೊಂಡರು. ಮೆಲ್ಲನೆ ತಲೆ ಎತ್ತಿದರು. ಲಕ್ಷ್ಮಿಯೂ ತಲೆಯೆತ್ತುತ್ತ ಇರುವ ಹಾಗಿದೆ.

'ಹೂವನ್ನು ತುಳಿದು ನಿಂತದ್ದು ಸಾಕು. ನನ್ನ ಮನಸ್ಸನ್ನೂ ಮೇಲೂ ತುಳಿಯ ಬೇಡ.'

ಚಳಿಗಾಲದ ಸಾಧನದ ಕೊಠಡಿಯಲ್ಲಿ ಕನ್ನಡಿ ಬಾಗಿಲು ತೆರೆಯುತ್ತ ಇದೆ. ಪೊನ್ನು ರಂಗಂ ತಲೆಯನ್ನು ಮಾತ್ರ ಮೇಲೆತ್ತಿದ್ದಾರೆ. ಕೆಲಸದ ಹುಡುಗ ತಲೆಯನ್ನು ಒಳಗೆ ಹಾಕಿ ಹೇಳುತ್ತಿದ್ದಾನೆ:

"ಸಾರ್, ಕಲಾಜ್ಯೋತಿ ಕಂದಪ್ಪನ್ ನಿಮ್ಮನ್ನು ನೋಡಲು ಬಂದಿದ್ದಾರೆ. ತುಂಬಾ ಕೋಪದಿಂದಿರುವ ಹಾಗೆ ಕಾಣುತ್ತದೆ."

"ಒಳಗೆ ಬರಹೇಳು."

ಆತ ಯಾಕೆ ಬಂದಿದ್ದಾನೆ ಎನ್ನುವುದು ತಿಳಿದ ಸಂಗತಿಯೇ. ನಿನ್ನೆ ಕೊಟ್ಟ ಚೆಕ್ ಕ್ಯಾಷ್ ಆಗದೆ ಬ್ಯಾಂಕಿನಿಂದ ಹಿಂದಿರುಗಿ ಬಂದಿರಬೇಕು. ಈತನಿಗೆ ಏನು ಸುಳ್ಳನ್ನು ಹೇಳಿ ಸಮಾಧಾನ ಪಡಿಸಲು ಸಾಧ್ಯವಿದೆ ಎನ್ನುವ ಯೋಚನೆ, ಸಿದ್ಧತೆ, ಪೊನ್ನುರಂಗಂ ಅವರಿಗೆ. ರಸಿಕರಿಂದ ಕಲಾಜ್ಯೋತಿ ಬಿರುದು ಪಡೆದಿರುವ ನಟಶ್ರೇಷ್ಠ ಕಂದಪ್ಪನ್ ಮುಖದಲ್ಲಿ ಈಗ ಎಳ್ಳು ಸಿಡಿತ. ಆತನ ಸುಂದರವಾದ ಮುಖ ಈಗ ಕ್ರೂರವಾಗಿ ಹೋಗಿದೆ.

"ತಿರುಮಗಳ್ ಪ್ರೊಡಕ್ಷನ್ ಅಲ್ಲವೆ! ಹೆಸರು ನೋಡಿ ಎಷ್ಟು ಚೆನ್ನಾಗಿದೆ? ಬಾಗಿಲಲ್ಲಿ ಬಡಿದಿರುವ ಆ ಬೋರ್ಡನ್ನು ತೆಗೆದುಹಾಕಿ 'ಮೂದೇವಿ ಪ್ರೊಡಕ್ಷನ್ಸ್' ಎಂದು ಬದ ಲಾಯಿಸಿ ಬರೆಯಿರಿ.........'

ಕಥಾನಾಯಕನ ಮಾತು ಸಿನೆಮಾ ಧಾಟಿಯಲ್ಲಿಯೇ ಮುಂದುವರಿದಿದೆ. ಆತ ಚೆಕ್ಕನ್ನು ಎಸೆದಿದ್ದಾನೆ. ಅದು ಪೊನ್ನುರಂಗಂ ಮುಖಕ್ಕೆ ಬಡಿದು ಕೆಳಗೆ ಬಿದ್ದಿದೆ.

"ಯಾಕೆ ಇಷ್ಟು ಕೋಪವಾಗಿದ್ದೀರಿ, ಕಂದಪ್ಪಾ? ಅದರಲ್ಲಿ ನೋಡಿ......ಬ್ಯಾಂಕಿನಲ್ಲಿ ಹಣಕಟ್ಟಿ ನಿಮಗೆ ಚೆಕ್‌ಕೊಡಲು ಹೇಳಿದ್ದೆ. ನಮ್ಮವರು ಮಾಡಿರುವ ಮುಠ್ಠಾಳ ಕೆಲಸ ಇದು......"

ಪೊನ್ನುರಂಗಂ ಹೀಗೆ ಹೇಳಿ ಮೆಲ್ಲಗೆ ನಗುತ್ತಾರೆ. 'ಸುಳ್ಳು, ಸುಳ್ಳು, ಶುದ್ಧ ಸುಳ್ಳು. ಹನ್ನೆರಡು ವರ್ಷಗಳಿಂದಲೂ ಇವರದು ಇದೇ ಸುಳ್ಳಿನ ಕಂತೆ' ಎಂದು ಅವರ ಮನಸ್ಸಾಕ್ಷಿ ಲೊಚಗುಡುತ್ತದೆ. ಪೊನ್ನುರಂಗಂ ನಟವರನನ್ನು ಸಮಾಧಾನಪಡಿಸಲು ಯತ್ನಿಸು ತ್ತಾರೆ.

"ಲೋ, ಹುಡುಗಾ, ಕಂದಪ್ಪ, ಅವರಿಗೆ ಒಳ್ಳೇ ಜೂಸ್ ತೆಗೆದುಕೊಂಡು ಬಾ."

"ನನಗೆ ಜ್ಯೂಸ್‌ಗೀಸ್ ಯಾವುದೂ ಬೇಡ. ಕ್ಯಾಷ್ ಆಗುವ ಹಾಗೆ ಒಂದು ಚೆಕ್ ಕೊಟ್ಟರೆ ಸಾಕು."

"ಅದೇ ನೋಡಿ......ಕಂದಪ್ಪಾ, ನೀವು ತಮಿಳು ನಾಡಿಗೇ ಕೀರ್ತಿತರುವ, ತಂದಿರುವ ನಟಶ್ರೇಷ್ಠರು, ನಟಸಾರ್ವಭೌಮರು. ಅಸಂದರ್ಭವಾಗಿ ನಮ್ಮ ಆಫೀಸಿನವರ ಕೈತಪ್ಪಿನಿಂದ ಹೀಗಾಯಿತಲ್ಲ ಎಂದು ನನಗೆ ತುಂಬಾ ವ್ಯಥೆಯಾಗಿದೆ."

"ವ್ಯಥೆಪಟ್ಟು ಏನು ಸಾರ್ ಪ್ರಯೋಜನ? ಕಲಾವಿದರನ್ನು ತಾವು ಗೌರವಿಸಬೇಕು."

"ನಿಜ. ತಾವು ಹೇಳುವುದನ್ನೇ ನಾನೂ ಹನ್ನೆರಡು ವರ್ಷಗಳಿಂದ ಹೇಳುತ್ತ ಬಂದಿದ್ದೇನೆ. ಕಲಾವಿದರಿಗೂ ಹಣ ಎಂದಿಗೂ ಮುಖ್ಯವಲ್ಲ, ಗೌರವ......"

'ಎಲಾ ಪಾಪಿ, ಮಾತನ್ನು ಹೇಗೆಲ್ಲ ಕೊಂಡೊಯ್ಯುತ್ತಿದ್ದೇಯಾ?' ಎನ್ನುತ್ತದೆ ಮನಸ್ಸು, ಅವರ ಮನಸ್ಸೇ.

ಅರ್ಧ ಗಂಟೆ ಏನೇನೋ ಚಾತುರ್ಯವಾಗಿ ಮಾತಾಡಿ ನಟಶ್ರೇಷ್ಠನಿಗೆ ಜ್ಯೂಸ್ ಕುಡಿಸಿ ಹೊರಹಾಕುತ್ತಾರೆ ನಿರ್ಮಾಪಕ ಪೊನ್ನುರಂಗಂ. ಪರಿಸ್ಥಿತಿಯನ್ನು ನಯವಾಗಿ ಎದುರಿಸುವುದರಲ್ಲಿ ಅವರು ರಾಜರ ರಾಜ.

ಟೆಲಿಫೋನ್ ಕರೆ. ರಿಸೀವರನ್ನು ಕೈಗೆತ್ತಿ ಮಾತಾಡುತ್ತಾರೆ:

"ಹಲೋ......ಹಲೋ......ನಮಸ್ಕಾರ ಸಾರ್, ಪಬ್ಲಿಸಿಟಿ ಬಿಲ್ ತಾನೆ? ಅದು ಬಂದು......ನೋಡಿ, ಇವೊತ್ತು ಶುಕ್ರವಾರ, ಬಿಡಿಗಾಸಾದರೂ ಸರಿ, ಶುಕ್ರವಾರ ನಾನು ಚೆಕ್ ಕೊಡೋದಿಲ್ಲ. ಶುಕ್ರವಾರ ಲಕ್ಷ್ಮೀ ಮನೆಬಿಟ್ಟು ಹೋಗಬಾರದಂತೆ ಸಂಪ್ರದಾಯ. ನಾಳೆಗೆ ಶನಿವಾರ. ಬ್ಯಾಂಕು ಅರ್ಧ ದಿನ ಮಾತ್ರ ಇರುತ್ತೆ. ನಿಮಗೆ ಸೋಮವಾರ ಚೆಕ್ ಕೊಡುತ್ತೇನೆ. ಮನಸ್ಸಿನಲ್ಲಿ ಏನೂ ತಿಳಿದುಕೊಳ್ಳಬೇಡಿ ಸಾರ್... ರೈಟ್ಟೋ......ಸೋಮವಾರ......ಖಂಡಿತಾ......"

ರಿಸೀವರನ್ನು ಕೆಳಗಿಡುತ್ತಾರೆ. ಎದುರಿಗೆ ಲಕ್ಷ್ಮಿಯ ಚಿತ್ರಪಟ ತಲೆಯೆತ್ತಿದರೆ. 'ಛೆ, ಛೆ, ಒಂದು ನಿಮಿಷ ಕೂಡ ನಿಜ ಹೇಳೋಣಾಂದರೆ ಸಾಧ್ಯ ಇಲ್ಲವಲ್ಲ. ಒಳ್ಳೇ ಶನಿ ಕಾಟ ಆಗೋಯ್ತು, ಈ ಸಾಲಗಾರ್ರದ್ದು. ಎಲ್ಲಿಗಾದರೂ ಓಡಿ ಹೊರಟು ಹೋಗೋಣ ಎನ್ನಿಸ್ತಾ ಇದೆ. ಕಾರ್ ಇದ್ದಿದ್ದರೆ ಎರಡು ದಿನ ಬೆಂಗಳೂರಿಗಾದರೂ ಹೋಗಿ ಬರಬಹುದಿತ್ತು. ಹಾಳಾದ್ದು ಅದೂ ಸರ್ವೀಸಿಗೆ ಹೊರಟುಹೋಗಿದೆ. ಈ ಸಲ ನಾನು ದಡ ಸೇರೋ ನಂಬಿಕೆ ಕಾಣ್ತಾನೇ ಇಲ್ಲ' ಎಂದು ಪೊನ್ನುರಂಗಂ ತನ್ನೊಳಗೇ ಹೇಳಿಕೊಂಡರು. ತಲೆಕೂದಲ ಮೇಲೆ ಬೆರಳಾಡಿಸಿದರು. ಕನ್ನಡಕವನ್ನೂ ತೆಗೆದು ಮೇಜಿನ ಮೇಲೆ ಇಟ್ಟರು. ಈಗ ಅವರ ಮುಖ ಕ್ರೂರವಾಗಿದೆ.

ಮೇಜಿನ ಮೇಲಿದ್ದ ಪಿನ್‌ಕುಷನ್‌ನಿಂದ ಒಂದೊಂದೇ ಗುಂಡುಸೂಜಿಯನ್ನು ತೆಗೆದು ಮತ್ತೆ ಅದಕ್ಕೇ ಚುಚ್ಚಿದರು. ಅದರಲ್ಲಿ ಸ್ವಲ್ಪ ಹೊತ್ತು ಕಳೆಯಿತು. ಗೋಡೆ ಗಡಿಯಾರ ಹನ್ನೊಂದನ್ನು ಹೊಡೆದಿದೆ. ಗಂಟೆ ಎಷ್ಟಾದರೆ ಏನು? ಏರ್‌ಕಂಡೀಷನ್ ಕೊಠಡಿಯಲ್ಲಿ ಸೆಕೆ ಹೇಗೆ ಆಗಬೇಕು?

ಮತ್ತೆ ಟೆಲಿಫೋನ್ ಕರೆ:

"ಹಲೋ......ಯಾರು......ಹರಿಣಿ ಸ್ಟುಡಿಯೋದಿಂದಲೊ? ನಿಮ್ಮ ಬಿಲ್ಲು... ಸೋಮವಾರ ಕಳಿಸುತ್ತೇನೆ......ಹಲ್ಲೋ......ಏನೆಂದಿರಿ?......ಹುಂ......ಅವಸರ ವಾಗಿ ಇವೊತ್ತು ಬೆಂಗಳೂರಿಗೆ ಹೋಗುತ್ತ ಇದ್ದೇನೆ......ಚೆಕ್ ಬರೆಯುವುದಕ್ಕೆ ಹೇಳಲು ಈಗ ಆಫೀಸಿನಲ್ಲಿ ಸಹ ಯಾರೂ ಇಲ್ಲ......ತನಗಾಗಿ ಎರಡು ದಿನ...... ಪ್ಲೀಸ್......ಎರಡೇ ದಿನ......ಸೋಮವಾರ ಪೂರಾ ಕಳಿಸಿಬಿಡ್ತೇನೆ......ಗೊತ್ತಾಯ್ತು ಸಾರ್......ನಮಸ್ಕಾರ......."

ರಿಸೀವರನ್ನು ಕೆಳಗಿಟ್ಟ ಮೇಲೆ ಪೊನ್ನುರಂಗಂ ಹಾಗೆ ಹೀಗೆ ಹೆಜ್ಜೆಹಾಕುತ್ತಾರೆ. ಅವರ ಬಾಯಿ ಗುಣುಗುಣಿಸುತ್ತಿದೆ.

"ಆ ಹಾಳಾದವನು ಹೇಳಿ ಹೋದದ್ದೇ ಸರಿ. ತಿರುಮಂಗಳ್ ಪ್ರೊಡಕ್ಷನ್ಸ್ ಎಂದಿರು ವುದನ್ನು ತೆಗೆದುಹಾಕಿ 'ಮೂದೇವಿ ಪ್ರೊಡಕ್ಷನ್ಸ್' ಎಂದು ಹೆಸರಿಡಬೇಕು.

ತಲೆನೋವು. ತಲೆ ಎರಡು ಭಾಗವಾಗಿ ಹೋಗುತ್ತದೇನೋ ಎನ್ನುವ ಹಾಗಿದೆ. ಬೆಳಗಿನಿಂದ ಒಂದೇ ಸಮನಾಗಿ ಹೇಳಿಕೊಂಡು ಬಂದ ಸುಳ್ಳಿನ ಕಂತೆಗಳು ಅಷ್ಟೂ ತಲೆ ಯೊಳಗೆ ಹೊಕ್ಕು ಘನವಾಗಿರುವ ಹಾಗಿದೆ. ಒಂದೇ ಒಂದು ನಿಮಿಷ ಯಾರಾದರೂ ಆತ್ಮೀಯರಲ್ಲಿ ನಿಜ ಹೇಳಿದರೆ ಸಾಕು, ಈ ಭಾರ ಕಡಿಮೆಯಾಗಬಹುದು ಎಂದು ಹೇಳು ತ್ತಿದೆ ಅವರ ಮನಸ್ಸು; ಅಂತರಂಗ. ಹನ್ನೆರಡು ವರ್ಷಗಳಿಂದ ಚಿತ್ರಪ್ರಪಂಚದ ಜೀವನ ಅವರಿಗೆ ತಂದಿರುವ ಬಳುವಳಿ. ಈ ಮಾನಸಿಕ ಯಾತನೆ ಅಷ್ಟೇ.

ಇಂಥ ಯೋಚನೆ, ಒಂದು ನಿಮಿಷವಾದರೂ ನಿಜ ಹೇಳಲೇ ಬೇಕು. ಹನ್ನೆರಡು ವರ್ಷಗಳಲ್ಲಿ ಕನಸಿನಲ್ಲಿ ಕೂಡ ಪೊನ್ನುರಂಗಂಗೆ ಹೊಳೆದಿದ್ದಿಲ್ಲ. ಯಾವಾಗಲೂ ಅವರಿಗೆ ಧೈರ್ಯವೊಂದೇ ಸಾಧನ. ಕೈಯಲ್ಲಿ ಏನೂ ಇಲ್ಲದಿದ್ದರೂ ಚಾತುರ್ಯದಿಂದ ಪರಿಸ್ಥಿತಿ ಯನ್ನು ಸುಧಾರಿಸಿ ಲಕ್ಷಲಕ್ಷ ರೂಪಾಯಿಗಳ ಖರ್ಚಿನಿಂದ ಚಿತ್ರತೆಗೆದು ಅದರಲ್ಲಿ ಅವರು ಯಶಸ್ಸನ್ನು ಪಡೆದಿದ್ದಾರೆ. ಇವೊತ್ತು ಯಾಕೋ ಮನಸ್ಸಿಗೆ ತುಂಬಾ ಬೇಜಾರಾಗಿ ಹತಾಶ ರಾದ ಸ್ಥಿತಿಯಲ್ಲಿ ಪೊನ್ನುರಂಗಂ ಇದ್ದಾರೆ.

ಇವೊತ್ತೇ ಅವರು ಪ್ರಪ್ರಥಮವಾಗಿ ಲಕ್ಷ್ಮಿಯ ಚಿತ್ರವನ್ನು ನೋಡಿ ಕೈಮುಗಿದು ಬೇಡಿಕೊಂಡದ್ದು.

'ಹೂವನ್ನು ತುಳಿದು ನಿಂತಿರುವ ಹಾಗೆ ನನ್ನ ಹೃದಯವನ್ನು ತುಳಿಯಬೇಡ. ನಾನು ತಡೆದುಕೊಳ್ಳಲು ಅಸಮರ್ಥ......'

"ಸಾರ್?" ಹುಡುಗ ಮತ್ತೆ ತಲೆಯನ್ನು ಒಳಗೆ ಹಾಕಿದ.

"ಯಾರೋ ಒಬ್ಬರು ಮುದುಕರು ಬಂದು ಹುಡುಗಿಯನ್ನು ಕರೆದುಕೊಂಡು ಬಂದಿ ದ್ದಾರೆ. ತಮ್ಮನ್ನು ನೋಡಬೇಕಂತೆ."

"ಯಾರೋ ಅದು?"

"ಗೊತ್ತಾಗಲಿಲ್ಲ, ಸಾರ್."

ಏರ್ ಕಂಡೀಷನ್ ಕೊಟಡಿಯಿಂದ ಪೊನ್ನುರಂಗಂ ಹೊರಗೆ ಬಂದರು. ಚೆನ್ನಾಗಿ ಅಲಂಕರಿಸಿಕೊಂಡ ಸುಂದರಿಯಾದ ಒಬ್ಬಳು ಹುಡುಗಿ ಅಲ್ಲಿ ನಿಂತಿದ್ದಾಳೆ. ಅವಳ ಸನಿಹ ದಲ್ಲಿ ಹರಕಲು ಅಂಗಿಯನ್ನು ತೊಟ್ಟ ಒಬ್ಬರು ಮುದುಕರು.

ಪೊನ್ನುರಂಗಂ ಅವರನ್ನು ಕಂಡೊಡನೆ ಆ ವೃದ್ಧರು ಭಯಭಕ್ತಿಯಿಂದ ನಮಸ್ಕಾರ ಮಾಡಿದರು. ಹುಡುಗಿಯ ಮುಖದಲ್ಲಿ ಒಳ್ಳೆಯ ವರ್ಚಸ್ಸು; ಲಕ್ಷ್ಮೀಯ ಕಲೆ; ಒಳಗಿನ ಚಿತ್ರದಲ್ಲಿರುವ ಲಕ್ಷ್ಮೀ ಈಗ ಇಲ್ಲಿ ಎದ್ದು ಬಂದು ನಿಂತಿರುವ ಹಾಗಿದೆ.

ಅವರನ್ನು ನೋಡಿ ಅಲಕ್ಷ್ಯದಿಂದಲೇ ಪೊನ್ನುರಂಗಂ ಪ್ರಶ್ನೆ ಹಾಕಿದರು:

"ಯಾರು ನೀವು? ಎಲ್ಲಿಂದ ಬಂದಿದ್ದೀರಿ?"

"ಸಾರ್, ತಾವು ಸ್ವಲ್ಪ ಕೃಪೆಮಾಡಬೇಕು. ತಾವು ಕಣ್ಣುತೆರೆದರೆ ನನ್ನ ಕುಟುಂಬಕ್ಕೆ ಬೆಳಕಾಗುತ್ತದೆ. ರೈಲುಚಾರ್ಜಿಗೆ ಸಾಲಮಾಡಿ ನಂಬಿಕೆಯಿಂದಲೇ ನಾನು ಮಧುರೆಯಿಂದ ಇಲ್ಲಿಗೆ ಬಂದಿದ್ದೇನೆ. ತಮ್ಮ ಸ್ನೇಹಿತರು ಶಿಫಾರಸು ಪತ್ರ ಕೊಟ್ಟಿದ್ದಾರೆ."

ಮುಖ ಬೀಗಿದ್ದಂತೆಯೇ ಪೊನ್ನುರಂಗಂ ಆ ಕಾಗದವನ್ನು ತೆಗೆದುಕೊಂಡು ಓದ ತೊಡಗಿದರು. ಆ ಕಾಗದ, ಅವರಿಗೆ ಹಲವು ಸಲ ಹಣ ಸಹಾಯವನ್ನು ಮಾಡಿರುವ ಒಬ್ಬ ದೊಡ್ಡ ಮನುಷ್ಯರಿಂದ ಬಂದಿದೆ.

"ಈ ಕಾಗದವನ್ನು ತೆಗೆದುಕೊಂಡು ಬಂದಿರುವ ವೇಲುಸಾಮಿ ಎಂಬವರು ತುಂಬಾ ಬಡವರು, ದೊಡ್ಡ ಕುಟುಂಬ. ಎಂಟು ಹೆಣ್ಣುಮಕ್ಕಳ ತಂದೆ. ಕಷ್ಟ ಜೀವನ ನಡಿಸು ತ್ತಿದ್ದಾರೆ. ಇವರ ದೊಡ್ಡ ಮಗಳಿಗೆ ಹಾಡು, ಡ್ಯಾನ್ಸ್ ಎಲ್ಲ ಬರುತ್ತದೆ. ನೋಡು ವುದಕ್ಕೂ ಲಕ್ಷಣವಾಗಿದ್ದಾಳೆ. ಇಲ್ಲಿ ಕೆಲವು ನಾಟಕಗಳಲ್ಲಿಯೂ ಆಕೆ ಅಭಿನಯಿಸಿದ್ದಾಳೆ. ನನಗಾಗಿ ಈ ಹುಡುಗಿಗೆ ಒಂದು ಚಾನ್ಸ್ ಮಾಡಿಕೊಡಿ. ಮುಂದಕ್ಕೆ ತರಲು ಪ್ರಯತ್ನಿಸಿ."

ಆ ಕಾಗದವನ್ನು ಓದಿದ ಮೇಲೆ ಪೊನ್ನುರಂಗಂಗೆ ಅಳಬೇಕೊ ನಗಬೇಕೊ ತಿಳಿಯಲಿಲ್ಲ.

ಆ ಹುಡುಗಿಯನ್ನು ಅವರು ಮತ್ತೆ ನೋಡಿದರು. ಆಕೆ ಸೊಗಸಾಗಿ ನಕ್ಕಳು. ಒಳಗಿನ ಚಿತ್ರಪಟದಲ್ಲಿರುವ ಲಕ್ಷ್ಮೀ ನಗುವ ಹಾಗೆಯೇ.

ಬೆಳಗಿನಿಂದ ಒಂದೇ ಸಮನೆ ಸುಳ್ಳನ್ನು ಹೇಳಿ ಹೇಳಿ ಅವರ ತಲೆ ಭಾರವಾಗಿ ಹೋಗಿದೆ ಯಷ್ಟೆ! ಆ ಭಾರವನ್ನು ಕಡಿಮೆಮಾಡಲು ಈಗ ಈ ಹುಡುಗಿ ಬಂದಿದ್ದಾಳೊ ಹೇಗೆ?

ಪೊನ್ನುರಂಗಂಗೆ ಈಗ ನಗೆ ಬಂದುಬಿಟ್ಟಿತು. ಅವರು ನಗುತ್ತ, 'ಹಿರಿಯರೇ, ಇಲ್ಲಿ ಬನ್ನಿ' ಎಂದು ಎದ್ದು ಒಳಗೆ ಹೋದರು. ವೃದ್ಧರು ಅವರನ್ನು ಹಿಂಬಾಲಿಸಿದರು. ತಮ್ಮ ಜೀವನದಲ್ಲಿ ಇಂದೇ ಈ ವೃದ್ಧರು ಏರ್‌ಕಂಡೀಷನ್ ಕೊಟಡಿಗೆ ಪ್ರಥಮವಾಗಿ ಪ್ರವೇಶಿಸಿದ್ದು.

"ಕುಳಿತುಕೊಳ್ಳಿ."

ವೃದ್ಧರು ಅಲ್ಲಿದ್ದ ಸೋಫಾದ ಮೇಲೆ ಮೆಲ್ಲಗೆ ಕುಳಿತುಕೊಂಡರು.

"ನೋಡಿ ಹಿರಿಯರೆ, ನಾನು ಈ ನಿಮಿಷದಲ್ಲಿ ಹೇಳುವ ಸತ್ಯಸಂಗತಿಯನ್ನು ತಾವು ಯಾವಾಗಲೂ ಮರೆಯುವುದಿಲ್ಲ ಎಂದು ಮಾತು ಕೊಡುತ್ತೀರಾ?"

ವೃದ್ಧರಿಗೆ ಪೊನ್ನುರಂಗಂ ಮಾತುಗಳು ಅರ್ಥವಾಗದೆ ಅವರು ಮೆಲ್ಲಗೆ ಹೇಳಿದರು:

"ನೀವು ಹ್ಯಾಗೆ ಹೇಳಿದರೂ ಸರಿ, ಸ್ವಾಮಿ."

'ನಿಮ್ಮ ಹುಡುಗಿಯನ್ನು ಸಿನೆಮಾದಲ್ಲಿ ಸೇರಿಸುವ ಯೋಚನೆಯನ್ನು ಖಂಡಿತ ಬಿಟ್ಟುಬಿಡಿ. ಊರಿಗೆ ಹೋಗಿ ನಾಲ್ಕು ಮನೆಯಲ್ಲಿ ಕೆಲಸಮಾಡಿ ಜೀವನ ಸಾಗಿಸಿದರೂ ಅಡ್ಡಿಯಿಲ್ಲ. ಈ ಚಿತ್ರಪ್ರಪಂಚ ಬರೇ ಗಾಳಿಮೂಟ್ಟೆ; ಸುಳ್ಳಿನ ಕಂತೆ. ನನ್ನನ್ನೆ ತೆಗೆದು ಕೊಳ್ಳಿ. ಈ ನಿಮಿಷದಲ್ಲಿ ನಾನು ಭಿಕಾರಿ. ಸುತ್ತಮುತ್ತ ಹುತ್ತದ ಹಾಗೆ ಸಾಲ. ಹೊಸ ದಾಗಿ ಹಣ ಹಾಕುವವರಿಗಾಗಿ ಪ್ರಯತ್ನಿಸಿಕೊಂಡು ಇದ್ದೇನೆ. ಆದರೆ ಈ ಸತ್ಯವಾದ ಸಂಗತಿಯನ್ನು ಹೊರಗೆ ಹೇಳಿದರೆ ನನ್ನ ಮಾನ ಹೊರಟುಹೋಗುತ್ತದೆ."

ಪೊನ್ನುರಂಗಂ ಅವರಿಗೆ ಈ ಮಾತುಗಳನ್ನು ಹೇಳುವಾಗ ಅಳು ಬರುವ ಹಾಗೆಯೆ ಆಯಿತು. ಆ ವೃದ್ಧರು ಈಗ ಮೆಲ್ಲಗೆ ಮೇಲಕ್ಕೆದ್ದರು.

"ಊರಿಗೆ ಹಿಂದಿರುಗಲು ಚಾರ್ಜಿಗೆ ಹಣ ಇದೆಯೊ?"

ಉತ್ತರವನ್ನು ಹೇಳದೆ ಆ ವೃದ್ಧರು ಈಗ ಪೊನ್ನುರಂಗಂ ಅವರ ಮುಖವನ್ನೇ ನೋಡಿದರು.

ಪೊನ್ನುರಂಗಂ ತಮ್ಮ ಮನಿಪರ್ಸನ್ನು ತೆರೆದರು. ಅದರಲ್ಲಿ ನಾಲ್ವತ್ತೇಳು ರೂಪಾಯಿ ಗಳು ಇದ್ದುವು. ಮೂವತ್ತು ರೂಪಾಯಿಗಳನ್ನು ತೆಗೆದು ವೃದ್ಧರ ಕೈಗಿತ್ತು ಪೊನ್ನುರಂಗಂ ಹೇಳಿದರು:

"ಊರಿಗೆ ಹೋಗಿ ಮಾನದಿಂದ ಬದುಕಿ. ಈ ನಿಮಿಷದಲ್ಲಿ ನಾನು ಹೇಳಿದ ಸತ್ಯ ಸಂಗತಿಯನ್ನು ಮಾತ್ರ ಯಾರೊಂದಿಗೂ ಹೇಳಬೇಡಿ. ಹೋಗಿದ್ದು ಬನ್ನಿ."

ಆ ಹಿರಿಯರು ನೋಟುಗಳನ್ನು ತೆಗೆದುಕೊಂಡವರೇ ಪೊನ್ನುರಂಗಂ ಅವರಿಗೆ ನಮಸ್ಕಾರ ಮಾಡಿ ಹೊರನಡೆದರು. ಈ ಒಂದು ನಿಮಿಷದಲ್ಲಾದರೂ ತಾವು ಸತ್ಯವಾದ ಮಾತನ್ನು ಆಡಿದುದಕ್ಕಾಗಿ ಪೊನ್ನುರಂಗಂ ಅವರಿಗೆ ಮನಸ್ಸಿಗೆ ತುಂಬಾ ಸಮಾಧಾನ ವಾಯಿತು.

ಮತ್ತೆ ಟೆಲಿಫೋನ್ ಕರೆ. ರಿಸೀವರನ್ನು ಕೈಗೆತ್ತಿಕೊಂಡದ್ದು ಆಗಿದೆ. ಆ ಕಡೆಯಿಂದ ಮಾತು:

"ಹಲೋ......ಯಾರು? ಪೊನ್ನುರಂಗನೊ? ಒಬ್ಬ ಸರಿಯಾದವನು ಸಿಕ್ಕಿದ್ದಾನೆ. ಒಂದು ಲಕ್ಷದ ವರೆಗೆ ಖರ್ಚುಮಾಡಲು ಸಿದ್ಧವಾಗಿದ್ದಾನೆ. ನಿನ್ನ ಚಿತ್ರ ಹನ್ನೊಂದು

ಸಾವಿರ ಅಡಿ ಮುಗಿದಿದೆ. ಹಾಗಂತ ಹೇಳು. ಹಾಗಾದರೆ ಕೆಲಸ ಆಗುತ್ತೆ. ಸುಳ್ಳು ಹೇಳಿಯೇ ಈ ಕೆಲಸ ಮುಗಿಸಬೇಕು. ನಿನ್ನ ಸ್ಥಿತಿ ನನಗೆ ತಿಳಿದಿದೆಯಲ್ಲ. ಅದಕ್ಕೇ ನಾನು ಹೀಗೆ ಹೇಳಿದ್ದೇನೆ. ನಿನಗಿಂತ ಚೆನ್ನಾಗಿ ಸುಳ್ಳು ಹೇಳಿದ್ದೇನೆ."

"ಓಹೋ ಸ್ವಲ್ಪವೇನು? ಧಾರಾಳವಾಗಿ ಸುಳ್ಳು ಹೇಳ್ತೀನೆ. ನಾನು ಅಲ್ಲಿಗೆ ಬಂದು ಸೇರಲಾ?"

"ಆಲ್‌ರೈಟ್......ಬಂದು ಸೇರು. ಒಂದು ಗಂಟೆಗೆ ಸರಿಯಾಗಿ ವುಡ್‌ಲ್ಯಾಂಡಿಗೆ ಬಾ......ಮಾತಾಡಿ ಮುಗಿಸೋಣ."

"ಬರೋದು ಸರಿ. ಆದರೆ ಯಾತರಲ್ಲಿ ಬರೋದು ಹಾಗಂತ ತಿಳೀಲಿಲ್ಲ. ನನ್ನ ಕಾರನ್ನು ಎರಡು ದಿನಕ್ಕೇಂತ ನನ್ನ ಫ್ರೆಂಡಿಗೆ ಕೊಟ್ಟುಬಿಟ್ಟಿದ್ದೇನೆ. ಸ್ವಲ್ಪ ನಿನ್ನ ಕಾರನ್ನು ಕಳಿಸ್ತೀಯಾ?

"ಕಳಿಸ್ತೇನೆ. ಆದರೆ ಯಾಕೆ ಸುಳ್ಳು ಹೇಳ್ತೀಯಾ? ನಿನ್ನ ಕಾರ್ ಸರ್ವೀಸಿಗೆ ಹೋಗಿದೆ. ಹೌದಲ್ಲವೊ?"

"ಸುಳ್ಳು ಹೇಳಿದ್ದು ಸರಿಯೆ. ಆದರೆ ಇದು ನಿನಗೆ ಹೇಗೊ ಗೊತ್ತಾಗಿಬಿಟ್ಟಿದೆ. ಈಗ ನಿಜವಾಗಿಯೂ ಹೇಳ್ತೇನೆ. ಈಗ ಸ್ವಲ್ಪ ಸಮಯದ ಹಿಂದೆ ನಿಜವಾದ ಮಾತನ್ನು ನಾನು ಆಡಿದ್ದೇನೆ."

"ಆಲ್‌ರೈಟ್......ನೀನು ಬಂದು ಸೇರು. ನೀನು ಮುಳುಗದ ಹಾಗೆ ನಾನು ನೋಡಿಕೊಳ್ಳೇನೆ."

ಪೊನ್ನುರಂಗಂ ರೀಸೀವರನ್ನು ಕಳಗಿಟ್ಟರು. ತಲೆಯನ್ನು ಮೇಲಕ್ಕೆತ್ತಿದರು. ಆಗ ಅವರ ಎದುರಿಗಿದ್ದ ಲಕ್ಷ್ಮಿಯ ಚಿತ್ರ ನಗುತ್ತಿರುವ ಹಾಗಿದೆ. ಸತ್ಯಕ್ಕೂ ಒಂದು ನಿಮಿಷ ಎಂದು ಲಕ್ಷ್ಮಿ ನಗೆಯಾಡುತ್ತಿದ್ದಾಳೊ ಏನೊ?

# ಜಲಪಾತದ ದಂಡೆಯಲ್ಲಿ

ಈ ವರ್ಷದ ಚಳಿಗಾಲಕ್ಕೆ ಮುಂಚೆ, ನಾವು ನಿರೀಕ್ಷಿಸದಿದ್ದ, ಆದರೆ ಸಂತೋಷವನ್ನು ನೀಡುವ, ಆ ಕಾಗದ ನಮಗೆ ಬಂತು.

ಪ್ರತಿ ವರ್ಷವೂ ಹುಟ್ಟಿದ ಊರಿನ ನೆನಪೂ ಮಲೆನಾಡಿನ ಸ್ವರ್ಗಸುಖವೂ ಸೇರಿ ಕುಟ್ರಾಲಕ್ಕೆ ನಮ್ಮ ಮನಸ್ಸು ಹಾಯುವುದೂ ಉಂಟು. ಹೀಗೆ ನಾವು ಕುಟ್ರಾಲಕ್ಕೆ ಹೋಗುವಾಗ, ನಮ್ಮ ಮನೆವೈದ್ಯರಾದ ಡಾಕ್ಟರ್ ಮುತ್ತುಕುಮಾರ ಸ್ವಾಮಿಯವರನ್ನು ನಮ್ಮ ಕುಟುಂಬದೊಂದಿಗೆ ಬರುವಂತೆ ಪ್ರತಿ ವರ್ಷವೂ ನಾವು ಆಹ್ವಾನಿಸುತ್ತೇವೆ. ಅವರು ಏನಾದರೂ ಒಂದು ಕಾರಣದಿಂದ ನಮ್ಮ ಆಹ್ವಾನವನ್ನು ತಿರಸ್ಕರಿಸುತ್ತಲೇ ಬಂದಿದ್ದಾರೆ.

"ಎರಡು ತಿಂಗಳು ನೀವು ನಮ್ಮೊಂದಿಗೆ ಇರುವುದು ಬೇಡ. ಎರಡು ವಾರ ಮಾತ್ರ ಇದ್ದು ಬರುವಿರಂತೆ, ಬನ್ನಿ" ಎಂದು ನಾನು ಒತ್ತಾಯಪಡಿಸುತ್ತಿದ್ದೆ.

"ಅಬ್ಬಬ್ಬಾ, ಎರಡು ವಾರ? ಎರಡು ದಿನಗಳೂ ನಾನು ಮದರಾಸನ್ನು ಬಿಟ್ಟು ಬರುವ ಹಾಗಿಲ್ಲ" ಎಂದು ಡಾಕ್ಟರ್ ಉತ್ತರ ಹೇಳುತ್ತಿದ್ದರು.

ಮುತ್ತುಕುಮಾರ ಸ್ವಾಮಿಗಳು ಹಾಗೆ ಹೇಳಲು ಸರಿಯಾದ ಕಾರಣವೂ ಇದೆ. ಈ ಮದರಾಸು ಮಹಾನಗರದಲ್ಲಿ ಲಂಡನ್, ಎಡಿನ್‌ಬರೊ ಇತ್ಯಾದಿ ಪರದೇಶಗಳಿಗೆ ಹೋಗಿ ಡಿಗ್ರಿ ಪಡೆದು, ಆಂಗ್ಲಭಾಷೆಯ ಇಪ್ಪತ್ತಾರು ಹೆಸರುಗಳನ್ನೂ ತಮ್ಮ ಹೆಸರಿನ ಮುಂದೆ ಹಾಕಿಕೊಂಡಿರುವ ಡಾಕ್ಟರ್ ಪಡೆಯೇ ಇದ್ದರೂ, ಅರುವತ್ತು ವರ್ಷ ದಾಟಿದ ಈ ಮುದುಕರ ಬಳಿಗೇ ರೋಗಿಗಳು ಬರುವುದು ಜಾಸ್ತಿ. ಕತ್ತರಿಸುವುದು, ಸೇರಿಸುವುದು– ಹೀಗೆ ಆಪರೇಶನ್ ಕೆಲಸಗಳಲ್ಲಿ ಕುಮಾರಸ್ವಾಮಿಗಳದು ಪಳಗಿದ ಕೈ. ಸರಕಾರದ ಆಸ್ಪತ್ರೆಗಳಲ್ಲಿ ಸಹ ಕೆಲವು ಸಮಯ ಇವರ ನೆರವನ್ನು ಪಡೆಯುತ್ತಾರೆ.

ಊಟಮಾಡಲೂ ಡಾಕ್ಟರರಿಗೆ ಪುರುಸೊತ್ತಿಲ್ಲ. ಅವರ ಪತ್ನಿಯನ್ನು ಕೇಳಿ: 'ಸರಿಯಾಗಿ ಕುಳಿತು ಅವರು ಯಾವೊತ್ತೂ ಊಟಮಾಡಿದ್ದಿಲ್ಲ' ಎನ್ನುತ್ತಾರೆ. ಅನ್ನವನ್ನೂ, ಸಾರನ್ನೂ ಹಾಕಿ ತಟ್ಟೆಯಲ್ಲಿ ಕಲಸಿ, ಆಕೆ ಅವರ ಮುಂದೆ ನೀಡುತ್ತಾರೆ. ಡಾಕ್ಟರು ಗಬಗಬನೆ ಅವನ್ನು ತಿಂದು ಆಪರೇಶನ್ ಥಿಯೇಟರಿಗೆ ಎಂದು ಓಡುತ್ತಾರೆ. ಎಷ್ಟೋ ದಿನಗಳು ಇದನ್ನು ನಾನು ಕಣ್ಣಾರೆ ಕಂಡಿದ್ದೇನೆ.

ಹೀಗೆ ರೋಗಿಗಳ ಶುಶ್ರೂಷೆ ಮಾಡುತ್ತಿರುವ ಇಂಥ ಡಾಕ್ಟರರನ್ನು ಹೇಗಾದರೂ ಮಾಡಿ ನಾವು ಎರಡು ತಿಂಗಳು ಹೊರಗೆ ಕರೆದುಕೊಂಡು ಹೋದರೆ ಅಷ್ಟು ಜನ ವ್ಯಾಧಿಗ್ರಸ್ಥರ ಶಾಪ ನಮಗೆ ತಟ್ಟುತ್ತದೆ ಎಂದು ನನ್ನ ಹೆಂಡತಿಯ ಅನೇಕ ಸಲ ನನ್ನೊಂಟಗೆ ಹೇಳಿದ್ದಾಳೆ.

ಇಂಥ ಡಾಕ್ಟರ್ ಮುತ್ತುಕುಮಾರ್ ಸ್ವಾಮಿಗಳಿಂದ ನಮಗೆ ಆ ಕಾಗದ ಬಂದಿತು. ಕುಟ್ರಾಲಕ್ಕೆ ಹೋಗಿ ಸೇರಿದ ಎರಡು ವಾರಗಳ ಮೇಲೆ. ಏಕಕಾಲದಲ್ಲಿ ನಮಗೆ ಸಂತೋಷವೂ ಆಶ್ಚರ್ಯವೂ ಉಂಟಾಯಿತು. ಸಂತೋಷ ಎಂದರೆ ನಮ್ಮ ಕುಟುಂಬದೊಡನೆ ಅವರು ಕುಟ್ರಾಲದಲ್ಲಿ ಬಂದು ನಮ್ಮೊಡನೆ ಈ ರಜೆಯ ದಿನಗಳಲ್ಲಿ ಇರುವುದು. ಇದೇನು ಸಾಮಾನ್ಯದ ವಿಷಯವಲ್ಲ.

೨

ತಿರುಕುಟ್ರಾಲದಲ್ಲಿ ನಾವು ಇಳಿದುಕೊಂಡಿದ್ದ ಜಾಗ ನಮ್ಮ ಬಂಧುವೊಬ್ಬರ ಬೇಸಿಗೆ ಮನೆ. ಬೆಟ್ಟದ ಅಡಿವಾರದಿಂದ ದೇವಸ್ಥಾನಕ್ಕೆ ಹೋಗುವ ಆ ತಿರುವಿನಲ್ಲಿ ಮರಗಳೂ ಹೂವಿನ ಗಿಡಗಳೂ ಸುತ್ತುವರಿದಂತೆ ತುಂಬಾ ಸುಂದರವಾಗಿದೆ ಆ ಮನೆ. ಜಲಪಾತದಿಂದ ಸಿಂಪಡಿಸಿ ಹೊರಡುವ ನೀರ್ಪನಿಗಳು ಈ ಮನೆಗೂ ತೂರಿ ಬರುತ್ತವೆ. ಈ ರೀತಿಯಲ್ಲಿ ಆ ಮನೆಯನ್ನು ಅದರ ಮಾಲಿಕರು ಕಟ್ಟಿದ್ದಾರೆ.

ಮನೆ ದೊಡ್ಡದೇ. ಅದರ ಸುತ್ತಲೂ ತೋಪಿನ ಹಾಗೆ ಮಾವು, ತೆಂಗು, ಹಲಸಿನ ಮರಗಳು ಇವೆ. ಹೂಬಳ್ಳಿಗಳೂ ಇವೆ. ಜಲಪಾತದ ನೋಟ ಜಾಸ್ತಿ ರಮಣೀಯವಾಗಿ ಕಾಣುವುದು ದಕ್ಷಿಣಕ್ಕೆ ಸೇರಿದ ಹಾಗಿರುವ ಒಂದು ಕೊಟಡಿಯಲ್ಲಿ. ಆ ಕೊಟಡಿಯನ್ನು ಡಾಕ್ಟರಿಗಾಗಿ ಮೀಸಲಾಗಿಡಲಾಗಿದೆ. ಮದರಾಸು ಮಹಾನಗರದ ಆರ್ಭಟದಿಂದ ಬಿಡುಗಡೆಯಾಗಿ ಇಲ್ಲಿಗೆ ಬಂದವರು, ಈ ಕೊಟಡಿಯ ಕಿಟಕಿಯ ಬಾಗಿಲುಗಳನ್ನು ತೆರೆದರೆ, ಗಿಡಮೂಲಿಕೆಗಳ ಔಷಧ ಮಿಶ್ರವಾದ ಗಾಳಿಯ ಸೇವನೆಯಿಂದ ಎಂಥ ರೋಗಪೀಡಿತನ ವ್ಯಾಧಿಯೂ ಗುಣವಾಗುವ ಹಾಗಿದೆ, ಈ ತಾಣದಲ್ಲಿ. ರಾತ್ರಿಯಲ್ಲಿ ಚಂದ್ರ ಜಲಪಾತದೊಡನೆ ಮಿಲನವಾಗಿ ಧುಮುಕುವಂಥ ನೋಟ. ಡಾಕ್ಟರು ಬೆಳದಿಂಗಳನ್ನು ಬಹಳವಾಗಿ ಅಪೇಕ್ಷಿಸುತ್ತಾರೆ ಎಂದು ನಾವು ಈ ಕೊಟಡಿಯನ್ನು ಮೀಸಲಾಗಿಟ್ಟು ಅವರ ಬರವಿಗಾಗಿ ಕಾದೆವು.

ಡಾಕ್ಟರ್ ತಮ್ಮ ಪತ್ನಿ, ದೆಹಲಿಯಲ್ಲಿ ಕೆಲಸಕ್ಕಿರುವ ತಮ್ಮ ಮಗ, ಮದರಾಸಿನಲ್ಲಿ ಸೇಂಟ್ ಮೇರಿ ಕಾಲೇಜಿನಲ್ಲಿ ಓದುತ್ತಿರುವ ಮಗಳು—ಇವರೊಂದಿಗೆ ಬಂದು ಸೇರಿದರು. ನಮಗೆ ಎಲ್ಲಿಲ್ಲದ ಉತ್ಸಾಹ.

ಡಾಕ್ಟರ ಮಗನೂ, ಮಗಳೂ ಜಲಪಾತದಲ್ಲಿ ಹೋಗಿ ಸ್ನಾನಮಾಡುವುದು ಸುತ್ತಾಡುವುದು, ಹಸಿವು ಏರ್ಪಡಿಸುತ್ತಲೆ ಹಿಂದಿರುಗಿ ಬಂದು ಎಂದಿಗಿಂತ ಹೆಚ್ಚಾಗಿ ಆಹಾರ ತೆಗೆದುಕೊಳ್ಳುವುದು ಹೀಗೆ ಮಾಡುತ್ತಿದ್ದರು. ಡಾಕ್ಟರರ ಪತ್ನಿಯೂ ಶುದ್ಧವಾಗಿ ಸ್ನಾನ

ಮಾಡಿ, ಹೆಂಗಸರೊಡನೆ ಹರಟೆ ಮುಗಿಸಿ, ಕುಟ್ರಾಲದ ಸುತ್ತಮುತ್ತ ಇರುವ ಶಿವಕಾಶಿ, ಸೆಂಗೋಟ್ಟೈ, ಮದ್ದಳಂ ಇಲ್ಲಿಗೆಲ್ಲ ಹೋಗಿ ಬರುವುದರಲ್ಲಿ ದಿನಗಳನ್ನು ಕಳೆಯುತ್ತಿದ್ದರು.

ಆ ಮೇಲಷ್ಟೆ ಆ ತೊಡಕು ಉಂಟಾದದ್ದು. ಡಾಕ್ಟರ್ ಮುತ್ತುಕುಮಾರ್ ಸ್ವಾಮಿಗಳವರಲ್ಲಿ.

ಹೌದು, ಕುಟ್ರಾಲಕ್ಕೆ ಬಂದು ಸೇರಿದ ದಿನವೆ ಡಾಕ್ಟರಲ್ಲಿ ಬದಲಾವಣೆಯಾಗುವುದನ್ನು ನಾನು ಗಮನಿಸಿದೆ. ಯಾವಾಗಲೂ ಗಣಗಣವೆಂದು ನಗೆಯಾಡುತ್ತಾ ಸುತ್ತಮುತ್ತ ಇರುವವರನ್ನು ನಗೆಕಡಲಲ್ಲಿ ಮುಳುಗಿಸುವ ಡಾಕ್ಟರರು, ಇಲ್ಲಿ ಈಗ ಮೌನಿಯಾಗಿದ್ದರು. ಹೆಚ್ಚಾಗಿ ಯಾರೊಂದಿಗೂ ಮಾತಿಲ್ಲ. ಬೆಳಗ್ಗೆ ಜಲಪಾತಕ್ಕೆ ಹೋಗಿ ಸ್ನಾನಮಾಡಿ ಫಲಾಹಾರ ಮುಗಿಸಿ ಕೊಟಡಿಗೆ ಹೋದರೆ ತೀರಿತು. ಮಧ್ಯಾಹ್ನದ ಊಟಕ್ಕೆ ನಾವು ಹೋಗಿ ಅವರನ್ನು ಕರೆತರಬೇಕು. ಅಷ್ಟರ ವರೆಗೂ ಅವರು ಆ ಕೊಟಡಿಯಲ್ಲಿ ಒಬ್ಬರೇ ಕುಳಿತಿರುತ್ತಿದ್ದರು. ಮತ್ತೆ ನಾಲ್ಕು ಗಂಟೆಗೆ ಕೈಕೋಲನ್ನು ಹಿಡಿದು ಜಲಪಾತದ ಸನಿಹದಲ್ಲಿಯೊ, ಬೆಟ್ಟದ ಹಾದಿಯಲ್ಲಿಯೊ ಒಬ್ಬರೇ ಹೋಗುವರು. ಮರ್ಯಾದೆಗಾಗಿಯೂ ನಮ್ಮನ್ನು ತಮ್ಮೊಂದಿಗೆ ಬರುವಂತೆ ಹೇಳುತ್ತಿರಲಿಲ್ಲ. ಚೆನ್ನಾಗಿ ಕತ್ತಲಾದ ಮೇಲಷ್ಟೆ ಮನೆಗೆ ಹಿಂದಿರುಗುವರು. ಅವರ ಈ ವರ್ತನೆ ನನಗೆ ತುಂಬಾ ಆಶ್ಚರ್ಯವನ್ನು ಉಂಟು ಮಾಡಿತ್ತು.

ನಾಲ್ಕು ಐದು ದಿನಗಳು ಕಳೆದ ಮೇಲೂ ನನಗೆ ವಿಸ್ಮಯವಾಯಿತು. ಒಂದು ದಿನ ಡಾಕ್ಟರು ಸ್ನಾನಮಾಡಿ ಬಂದು, ಫಲಹಾರ ಮುಗಿಸಿ, ಮತ್ತೆ ಹೊರಗೆ ಹೊರಟರು. ಕೈಯಲ್ಲಿದ್ದ ಅಲ್ಯೂಮಿನಿಯಂ ಬಾಕ್ಸ್‌ನಲ್ಲಿ ಒಂದೆರಡು ದೋಸೆಗಳನ್ನೂ ಹಾಕಿಕೊಂಡಿದ್ದರು.

"ಇವೊತ್ತು ನಾನು ಸ್ವಲ್ಪ ಬೆಟ್ಟದ ಮೇಲೆ ಹೋಗಿದ್ದು ಬರುತ್ತೇನೆ" ಎಂದು ಹೇಳಿ ಹೋದವರು ರಾತ್ರಿ ಚೆನ್ನಾಗಿ ಕತ್ತಲಾದ ಮೇಲೆಯೇ ಅವರು ಮನೆಗೆ ಹಿಂದಿರುಗಿದ್ದು.

ಒಂದು ವಾರದ ವರೆವಿಗೂ ಡಾಕ್ಟರು ಹೀಗೆಯೇ ಪ್ರತಿನಿತ್ಯವೂ ಒಬ್ಬರೆ ಅವರೆಲ್ಲಿಯೋ ಬೆಟ್ಟದ ಮೇಲಕ್ಕೆ ಹೋಗಿದ್ದು ಹಿಂದಿರುಗಿ ಬರುತ್ತಿದ್ದರು. ಡಾಕ್ಟರರ ಪತ್ನಿಗೆ ಇದು ಯೋಚನೆಗಿಟ್ಟುಕೊಂಡಿತು. ಒಂದು ದಿನ ಆಕೆ ನನ್ನ ಕೂಡ ತಮ್ಮ ಈ ಚಿಂತೆಯನ್ನು ವ್ಯಕ್ತಪಡಿಸಿದರು.

ರಾಜಸ್ಥಾನದಿಂದ ತಮಿಳುನಾಡಿಗೆ ಬಂದ ಒಂದು ಕಲಾಗೋಷ್ಠಿ ರೈಲು ದುರಂತಕ್ಕೆ ಈಡಾಗಿತ್ತು. ಡಾಕ್ಟರ್ ಮುತ್ತುಕುಮಾರ ಸ್ವಾಮಿಗಳು ಈ ಗೋಷ್ಠಿಗೆ ಆಸ್ಪತ್ರೆಯಲ್ಲಿ ಚಿಕಿತ್ಸೆ ನಡೆಸಿದ್ದರು. ಈ ಸುದ್ದಿಯನ್ನು ನಾನು ಮೊದಲೆ ಪತ್ರಿಕೆಗಳಲ್ಲಿ ಓದಿದ್ದೆ. ಈ ಸಂಭವದ ನಂತರ ಡಾಕ್ಟರ ದಿನಚರಿಯಲ್ಲಿ ಗಮನಾರ್ಹವಾದ ಬದಲಾವಣೆಯಾಗಿದೆ ಎಂದು ಅವರ ಪತ್ನಿ ಹೀಗೆ ಹೇಳಿದರು:

"ನೋಡು ತಮ್ಮಾ, ಅವೊತ್ತಿನಿಂದ ನಿಮ್ಮ ಡಾಕ್ಟರ್ ಯಾರೊಂದಿಗೂ ಹೆಚ್ಚಿಗೆ ಮಾತಾಡುವುದಿಲ್ಲ. ಯಾವಾಗಲೂ ಎಂಥದೋ ಗಾಢವಾದ ಯೋಚನೆಯಲ್ಲಿ ಇರುತ್ತಾರೆ. ಕುಟ್ರಾಲಕ್ಕೆ ಹೋಗಿದ್ದು ಬರೋಣ ಎಂದು ಅವರು ಹೇಳಿದ್ದು ಈ ಬದಲಾವಣೆ ಯಿಂದಲೇ. ನನಗೆ ಮೊದಲು ಆಶ್ಚರ್ಯ. ಆದರೆ ಇಲ್ಲಿಗೆ ಬಂದರೆ ಅವರ ಮೌನವೂ ರೀತಿಯೂ ಬೇರೆಯಾಗುತ್ತದೆ ಎಂದು ನಾನು ಭಾವಿಸಿದೆ. ಇಲ್ಲಿ ಬಂದರೆ ಅವರು ಯಾರೊಡನೆಯೂ ಬೆರೆಯದೆ ಇದ್ದ ಹಾಗೆಯೇ ಇದ್ದಾರೆ. ಎಲ್ಲಿಗಾದರೂ ನಮ್ಮೊಂದಿಗೆ ಬರಲು ನಿರಾಕರಿಸುತ್ತಾರೆ. ಏಕಾಂತವನ್ನು ಬಯಸುವುದೂ, ಬೆಟ್ಟದಲ್ಲಿ ಹೋಗಿ ಅಡ್ಡಾಡಿ ಬರುವುದೂ ಅವರ ಹವ್ಯಾಸವಾಗಿ ಹೋಗಿದೆ. ನೀನು ಸ್ವಲ್ಪ ಇದನ್ನು ಗಮನಿಸು."

೩

ಒಂದು ದಿನ ಡಾಕ್ಟರರಿಗೆ ತಿಳಿಯದಂತೆ ನಾನು ಅವರನ್ನು ಹಿಂಬಾಲಿಸಿದೆ.

ಬೆಟ್ಟದ ಹಾದಿಯಲ್ಲಿ ಟಕ್‌ಟಕ್ ಎಂದು ಕೈಕೋಲಿನಿಂದ ಕುಟ್ಟುತ್ತಾ ಡಾಕ್ಟರ್ ಹೆಜ್ಜೆಹಾಕಿದರು. ಅವರು ಹಿಂದಿರುಗಿ ನೋಡುತ್ತಾ ಅಡಿಯಿಡುತ್ತಿದ್ದಾಗ, ಅವರ ಕಣ್ಣಿಂದ ತಪ್ಪಿಸಿಕೊಳ್ಳಲು ನಾನು ಗಿಡಮರಗಳ ಹಿಂದೆ ಅಡಗಿಕೊಳ್ಳಬೇಕಾಯಿತು.

ಮಧ್ಯಾಹ್ನದ ಸಮಯಕ್ಕೆ ಸರಿಯಾಗಿ ಡಾಕ್ಟರ್ ಚಂಪಕಾರಣ್ಯಕ್ಕೆ ಬಂದು ಸೇರಿ ದರು. ಎತ್ತರವಾಗಿ ಬೆಳೆದಿರುವ ಹುಲ್ಲಿನ ರಾಶಿಯಲ್ಲಿ ಅಡಗಿ ನಾನು ಅವರನ್ನೇ ಗಮ ನಿಸಿದೆ.

ಚಂಪಕಾದೇವಿಯ ದೇಗುಲಕ್ಕೆ ಸೇರಿದ ಹಾಗೆ ಒಂದು ಗುಹೆ ಇದೆಯಲ್ಲವೆ? ಗುಹೆ ಯನ್ನು ಸುತ್ತಿ ಧಿಗ್ ಧಿಗ್ ಧಿಗ್ ಎಂದು ನೀರು ಹರಿಯುತ್ತಿದೆ. ಅಲ್ಲೆಲ್ಲ ದೊಡ್ಡ ದೊಡ್ಡ ಬಂಡೆಕಲ್ಲುಗಳು, ಮನೋಹರವಾದ ತಾಣ. ಡಾಕ್ಟರ್ ಈಗ ಅಲ್ಲಿ ಒಂದು ಜಾಗದಲ್ಲಿ ಕುಳಿತು ಕಣ್ಣುಗಳನ್ನು ಮುಚ್ಚಿಕೊಂಡರು.

ತಂಬೂರಿಯ ಶ್ರುತಿಯ ಹಾಗೆ ಅಲ್ಲಿನ ತೋಡಿನ ಶಬ್ದವೂ, ಅದಕ್ಕೆ ಹಿಮ್ಮೇಳದಂತೆ ಹಕ್ಕಿಗಳ ಕಿಚುಕಿಚು ಕೂಜನವೂ ಈ ಕಚೇರಿಗೆ ಮೃದಂಗ ಬಾರಿಸುವಂತೆ ಜಲಪಾತದ ಭೋರ್ಗರೆತವೂ ಕೇಳಿಬರುತ್ತಿದೆ. ಡಾಕ್ಟರ್ ಮುತ್ತುಕುಮಾರ್ ಸ್ವಾಮಿಗಳು ಈ ನಾದ ದೊಂದಿಗೆ ಐಕ್ಯವಾಗಿ ಕುಳಿತುಬಿಟ್ಟರೊ ಹೇಗೆ? ಹಾಗಲ್ಲದೆ ಅವರ ಮನಸ್ಸು ಮತ್ತೆಲ್ಲಿಯೊ ಲೀನವಾಗಿ ಹೀಗೆ ಮೌನಿಯಾಗಿದ್ದಾರೊ?

ಅಡಗಿದ್ದ ನಾನು ಹೊರಬಂದು ಅವರ ಬಳಿ ನಿಂತ , ಮೆಲ್ಲಗೆ ಕೂಗಿದೆ:

"ಡಾಕ್ಟರ್, ಡಾಕ್ಟರ್......"

ಡಾಕ್ಟರ ಎದುರಿಗೇ ಈಗ ನಾನು ಕುಳಿತುಬಿಟ್ಟೆ. ದಿಗ್ಭ್ರಮೆಗೊಂಡವರಂತೆ ಡಾಕ್ಟರ್ ಕಣ್ಣುಗಳನ್ನು ತೆರೆದರು. ಅವರ ಏಕಾಂತತೆಗೆ ನಾನು ಭಂಗತಂದೆನೆಂದೋ ಏನೋ ತೆರೆದ ಆ ಕಣ್ಣುಗಳಿಂದ ಒಂದು ಸಲ ನನ್ನನ್ನು ಧಿಟ್ಟಿಸಿ ನೋಡಿದರು.

"ನನ್ನನ್ನು ಕ್ಷಮಿಸಿ, ಡಾಕ್ಟರ್. ತಾವು ಹೀಗೆ ಇಲ್ಲಿ ಬಂದು ಒಬ್ಬರೇ ಇರುವುದೂ, ಯಾವಾಗಲೂ ನಗೆಬುಗ್ಗೆಯಾಗಿರುವ ತಾವು ಏನೋ ಚಿಂತೆಯಲ್ಲಿ ಮುಳುಗಿರುವುದೂ ನಮಗೆಲ್ಲ ವ್ಯಸನವಾಗಿದೆ. ತಮ್ಮ ಪತ್ನಿಯವರು ತುಂಬಾ ವ್ಯಾಕುಲಕ್ಕೀಡಾಗಿದ್ದಾರೆ. ಆದ್ದರಿಂದಲೇ ನಾನು......"

"ನಿಮ್ಮ ಚಿಂತೆ ನನಗೆ ಅರ್ಥವಾಗುತ್ತಿದೆ. ಆದರೆ ನನ್ನ ಯತ್ನದಲ್ಲಿ ತಾವು ಪ್ರವೇಶಿಸುವುದಿಲ್ಲವೆಂದು ವಾಗ್ದಾನವಿತ್ತರೆ ಮಾತ್ರ ತಮ್ಮೊಂದಿಗೆ ನಾನು ಮಾತಾಡುತ್ತೇನೆ. ಇಲ್ಲದಿದ್ದಲ್ಲಿ......"

"ಇಲ್ಲ, ಇಲ್ಲ. ತಮಗೆ ಭರವಸೆ ಕೊಡುತ್ತೇನೆ. ತಾವು ಏನು ಬೇಕಾದರೂ ಹೇಳಬಹುದು."

"ನೋಡಿ, ರಾಜಸ್ಥಾನದಿಂದ ಒಂದು ಕಲಾಗೋಷ್ಠಿ ಇಲ್ಲಿಗೆ ಬಂದು ಭಯಂಕರವಾದ ರೈಲು ಅಪಘಾತಕ್ಕೆ ಈಡಾದದ್ದು, ಆ ಕಲಾವಿದರಿಗೆ ಆಸ್ಪತ್ರೆಯಲ್ಲಿ ಚಿಕಿತ್ಸೆ ನಡೆದದ್ದು, ಇವನ್ನೆಲ್ಲ ನೀವು ಪತ್ರಿಕೆಯಲ್ಲಿ ಓದಿದ್ದೀರಿ. ಆ ಕಲಾವಿದರಿಗೆ ಮೂವರಿಗೆ ಬಲವಾದ ಪೆಟ್ಟು ಬಿದ್ದು ಆ ಆಘಾತದಿಂದ ಜನ್ನಿ ಉಂಟಾಯಿತು. ಇವರಿಗೆ ಚಿಕಿತ್ಸೆ ನಡೆಸುವ ಭಾರವನ್ನು ನನಗೆ ವಹಿಸಿದ್ದರು.

"ಇದರಲ್ಲಿ ದೊಡ್ಡ ತೊಂದರೆಯೆಂದರೆ ನನ್ನ ಶುಶ್ರೂಷೆಯಲ್ಲಿ ಇದ್ದವಳು ಒಬ್ಬಳು ಕಲಾವಿದೆ. ಅವಳ ಕಾಲನ್ನೇ ತೆಗೆಯಬೇಕಿತ್ತು. ಮತ್ತೊಬ್ಬ ಯುವಕನಿಗೆ ಕಣ್ಣಿನ ಬಳಿ ಊತ ಕಂಡಿದೆ. ನನ್ನ ಸಹಾಯಕ ಕಣ್ಣು ಡಾಕ್ಟರಿಂದ, ನನ್ನ ಮೇಲ್ವಿಚಾರಣೆಯಲ್ಲಿಯೆ ಶಸ್ತ್ರಚಿಕಿತ್ಸೆ ಆಗಬೇಕಾಗಿದೆ. ಮತ್ತೊಬ್ಬರಿಗೊ ತೋಳನ್ನು ಕತ್ತರಿಸಿ ಹಾಕಿದರೇ ಅವರು ಬದುಕಲು ಸಾಧ್ಯವಿದೆ.

"ನನ್ನ ಸಂಗತಿ ನಿಮಗೆ ತಿಳಿದಿದೆಯಲ್ಲ. ಶಸ್ತ್ರಚಿಕಿತ್ಸೆಯಲ್ಲಿ ಹಾಗೆ ಹೀಗೆ ನಿಧಾನ ಮಾಡುವ ಅಭ್ಯಾಸವೇ ನನಗಿಲ್ಲ. ಮಾನವರನ್ನು ಬಾಳೆಕಾಯಿ, ಬದನೆಕಾಯಿಗಳ ಹಾಗೆಯೆ ನಾನು ಭಾವಿಸಿದ್ದವನು.

ಡಾಕ್ಟರ್ ಹೀಗೆ ಹೇಳಿ ನಿಲ್ಲಿಸುತ್ತಲೆ ನನಗೆ ಆಶ್ಚರ್ಯವಾಯಿತು.

"ಯಾಕೆ ಡಾಕ್ಟರ್, ಹೀಗೆಲ್ಲ ಮಾತಾಡುತ್ತೀರಿ? ಹಾಗೆ ಮಾಡದಿದ್ದವರಿಗೆ ಜೀವಕ್ಕೇ ಆಪತ್ತು ಎಂದಲ್ಲವೊ ಹೇಳಿದಿರಿ? ಅದರಲ್ಲಿ ಏನು ತಪ್ಪು?

"ಹೀಗೆಯೆ ಆ ಮೂವರನ್ನೂ ಶಸ್ತ್ರಚಿಕಿತ್ಸೆಯನ್ನು ಮಾಡಬೇಕೆಂದು ತೀರ್ಮಾನಿಸಿದೆ."

"ಯಾಕೆ? ಹಾಗೆ ಮಾಡಿಯೂ ಅವರು ಬದುಕಲಿಲ್ಲವೇನು?"

"ಬದುಕಿದರು. ಅದರಿಂದಲೇ ನನಗೆ ಇಷ್ಟು ಚಿಂತೆ. ಅವರು ಸತ್ತಿದ್ದರೆ ನಾನು ಹೀಗೆ ದುಃಖಿಸುತ್ತಿರಲಿಲ್ಲ."

ಹೀಗೆ ಹೇಳುವಾಗ ಡಾಕ್ಟರ ಕಣ್ಣುಗಳಲ್ಲಿ ನೀರು ಚಿಮ್ಮಿತ್ತು.

"ಏನು ಡಾಕ್ಟರ್, ನನಗೆ ಅರ್ಥವಾಗದ ರೀತಿಯಲ್ಲಿಯೆ ಮಾತಾಡುತ್ತೀರಲ್ಲ"

"ನೋಡಿ, ಆ ಮೂವರಿಗೂ ಜೀವ ಉಳಿದು ನೆನಪು ಬಂದ ಮೇಲೆ, ಈ ಜಗತ್ತಿಗೆ ಹಿಂದಿರುಗಿದ ಮೇಲೆ ಅವರು ಅನುಭವಿಸಿದ ಸಂಕಟವನ್ನು ನಿಮಗೆ ಹೇಗೆ ಹೇಳಲು ಸಾಧ್ಯವಾದೀತು, ಹೇಳಿ? ನಾನು ಅನುಭವಿಸಿದ, ಅನುಭವಿಸುತ್ತಿರುವ, ಮುಂದೆಯೂ ಅನುಭವಿಸಬೇಕಾಗಿರುವ ಮಾನಸಿಕ ಯಾತನೆಗೆ ಒಂದು ಮಿತಿಯೇ ಇರುವುದಿಲ್ಲ. ನಾನು ಕಾಲನ್ನು ಕತ್ತರಿಸಿ ಹಾಕಿದ್ದ ಆ ಕಲಾವಿದೆ ರಾಜಸ್ಥಾನದಲ್ಲಿ ಖ್ಯಾತಿವೆತ್ತ ಒಬ್ಬ ನರ್ತಕಿ, ಕಣ್ಣುಚಿಕಿತ್ಸೆಗೆ ಈಡಾದವನು ಪ್ರಸಿದ್ಧ ಚಿತ್ರಕಾರ. ದಯೆ-ದಾಕ್ಷಿಣ್ಯವಿಲ್ಲದೆ ಬಲದ ತೋಳನ್ನು ಕತ್ತರಿಸಿದೆನಲ್ಲ, ಆತ ಖ್ಯಾತ ಸಾರಂಗಿ ವಾದಕ. ಆ ಕಲಾಗೋಷ್ಠಿಯಲ್ಲಿದ್ದವರಲ್ಲಿ ಈ ಮೂವರೂ ಖ್ಯಾತರಾದವರು.

"ಆ ನರ್ತಕಿಗೆ ಪ್ರಾಣ ಎಷ್ಟು ಮುಖ್ಯವೋ ಅಷ್ಟೇ ಅವಳ ಕಾಲುಗಳು ಮುಖ್ಯ. ಚಿತ್ರಕಾರನಿಗೂ ಅಷ್ಟೆಯೇ. ಆ ಸಂಗೀತ ವಿದ್ವಾಂಸನಿಗೂ ಹಾಗೆಯೇ. ಪಾಪ, ಅವನ ಬೆರಳುಗಳನ್ನೇ ನಾನು ಕತ್ತರಿಸಿಹಾಕಿದೆ."

ಡಾಕ್ಟರ ಕಣ್ಣುಗಳಿಂದ ಧಾರಾವಾಹಿಯಾಗಿ ಕಣ್ಣೀರು. ನಾನು ಏನು ಮಾತಾಡಲೂ ಈಗ ಅಸಮರ್ಥನಾಗಿದ್ದೆ.

"ಬೇರೆಯವರ ಜೀವನವನ್ನು ರಕ್ಷಿಸುವವನು ಎಂಬ ಹೆಮ್ಮೆಯಿಂದ ನಾನು ಇದುವರೆಗೂ ಬೀಗಿದ್ದೆ. ಮದ್ರಾಸನ್ನು ಬಿಟ್ಟು ಕುಟ್ರಾಲಕ್ಕೆ ಎರಡು ದಿನ ಬಂದರೂ ಯಮ ತನ್ನ ಹುಯ್ಯಿಯನ್ನು ತೀರಿಸಿಕೊಳ್ಳುತ್ತಾನೆ, ಎಂದು ನಾನು ಭಾವಿಸಿದ್ದೆ. ಅದಕ್ಕೆ ಇದೇ ಶಿಕ್ಷೆ. ಈ ಮೂವರ ಪ್ರಾಣಗಳನ್ನು ಉಳಿಸಲು ಹೋಗಿ ಅವರನ್ನು ನಾನು ಜೀವಂತ ಹೆಣಗಳನ್ನಾಗಿ ಮಾಡಿದೆನಲ್ಲವೆ? ಈ ಚಿಂತೆ ನನ್ನನ್ನು ಬಾಧಿಸುತ್ತಿದೆ. ನನ್ನ ಪ್ರಾಣ ಹೋದ ಹಾಗಾಗಿದೆ. ಆ ಮೂರು ಜೀವಿಗಳೂ ತಮ್ಮ ಮುಖ್ಯವಾದ ಅಂಗಗಳನ್ನು ಕಳೆದುಕೊಂಡಾಗ ಪರಿತಪಿಸಿದವರಲ್ಲ, ಆ ಸಂಕಟ, ಈ ಕುಟ್ರಾಲದ ಜಲಪಾತದ ಸನ್ನಿಧಿಯಲ್ಲಿದ್ದರೂ ಅದರ ಬೇಗೆ ನನ್ನನ್ನು ಸುಡುತ್ತ ಇದೆ. ಇಲ್ಲಿನ ಹಿತವಾದ ಗಾಳಿ ನನ್ನ ದೇಹದಲ್ಲಿ ಸುಡುತ್ತಿರುವ ಬೆಂಕಿಯನ್ನು ತಣಿಸಿಲ್ಲ. ಮನಸ್ಸು ಚಂಚಲವಾಗಿದೆ, ದೇಹ ಸತ್ತ್ವಹೀನವಾಗಿದೆ.

"ಅದರಿಂದಲೇ ನಾನು ಹೀಗೆ ಏಕಾಂಗಿಯಾಗಿ ಈ ಬೆಟ್ಟದ ರಸ್ತೆಯಲ್ಲಿ ಅಡ್ಡಾಡುತ್ತಿದ್ದೇನೆ. ಏಕಾಂತತೆ ಮನಸ್ಸಿಗೆ ಸ್ವಲ್ಪ ಸಮಾಧಾನವನ್ನು ತಂದಿತೇನೋ ಎನ್ನುವ ಆಸೆ. ಜೀವ-ಮರಣದ ಸುತ್ತು ಹೆಣೆದಿರುವ ಅದ್ಭುತವನ್ನು ಕಣ್ಣುತೆರೆದು ನೋಡಿ ಕಂಡು

ಹಿಡಿಯಲು ಸಾಧ್ಯವಿಲ್ಲ. ಕಣ್ಣುಗಳನ್ನು ಭದ್ರವಾಗಿ ಮುಚ್ಚಿನೋಡಿದರ ಅರ್ಥವಾದೀ ತೇನೊ ಎನ್ನುವ ಭಾವನೆ ನನಗೆ. ಅದೂ ಸಾಧ್ಯವಾಗಿಲ್ಲ, ಚಂಚಲ. ತನ್ನ ಮನಸ್ಸು ಈಗ ಹೊಯ್ದಾಡಿಕೊಂಡೇ ಇದೆ."

೪

ಈ ಸಂಭವ ನಡೆದ ನಂತರ ಡಾಕ್ಟರರ ವರ್ತನೆಯ ಮೇಲೂ ಬದಲಾವಣೆಯನ್ನು ಗಮನಿಸಿದೆ. ಕಾಡಿನೊಳಗೆ ಹೋಗಿ ಕಣ್ಣುಮುಚ್ಚಿ ಕುಳಿತಿರಲು ಯತ್ನಿಸುತ್ತಿದ್ದವರು, ಈಗ, ಮನೆಯಲ್ಲಿಯೇ ಒಂದು ಕಡೆ ಕುಳಿತು ಧ್ಯಾನಾಸಕ್ತರಾಗುತ್ತಿದ್ದರು.

ಅವರ ಈ ವರ್ತನೆ ಮನೆಯವರ ಚಿಂತೆಯನ್ನು ಮತ್ತಷ್ಟು ಹೆಚ್ಚಿಸಿತು.

ಇದರಿಂದ ನಾನು ಎಲ್ಲಿಯಾದರೂ ಹೊರಗೆ ಹೊರಟರೆ ಬಲವಂತ ಮಾಡಿ ಡಾಕ್ಟ ರನ್ನೂ ನಮ್ಮೊಡನೆ ಬರುವಂತೆ ಒತ್ತಾಯಪಡಿಸುತ್ತಿದ್ದರು. ಮದರಾಸಿನ ನೆನಪೋ, ತಮ್ಮನ್ನು ನಂಬಿರುವ ರೋಗಿಗಳ ಚಿಂತೆಯೋ ಎಲ್ಲವನ್ನೂ ಮರೆತು, ಡಾಕ್ಟರರು ಈಗ ಚಿಂತೆಯ ಮಡುವಿನಲ್ಲಿ ಹೋಗಿದ್ದರು.

ಈ ಸಂದರ್ಭದಲ್ಲಿಯೇ ಧಿಡೀರೆಂದು ಪಾಳ್ಯೆಯಂಕೋಟ್ಟೈಯಿಂದ ಒಂದು ಸುದ್ದಿ ಬಂದಿತು.

ರಾತ್ರಿವೇಳೆಯಲ್ಲಿ, ಮದರಾಸಿನಲ್ಲಿ, ತುಪಾಕಿ ತೋರಿಸಿ ಹೆದರಿಸಿ ಕೊಳ್ಳೆಹೊಡೆದ ಮೂವರು ಕಳ್ಳರನ್ನು ಪಾಳ್ಯೆಯಂಕೋಟ್ಟೈಯಲ್ಲಿ ಬಂಧಿಸಲಾಗಿದೆಯೆಂದೂ ಅವರನ್ನು ಇಲ್ಲಿ ಶೋಧಿಸಿದಾಗ ಎರಡು ವರ್ಷಗಳ ಹಿಂದೆ ನಮ್ಮ ಮನೆಯಲ್ಲಿ ಕಳುವಾದ ಕೆಲವು ಬೆಳ್ಳಿ ಆಭರಣಗಳು ಈಗ ಸಿಕ್ಕಿವೆಯೆಂದೂ ಅದನ್ನು ಗುರುತಿಸಬೇಕೆಂದೂ ನನಗೆ ಕರೆ ಬಂದಿತು. ಬೆಳಗ್ಗೆ ಹೋಗಿ ಸಂಜೆಯೇ ಹಿಂದಿರುಗಬಹುದೆಂದು ಡಾಕ್ಟರನ್ನೂ ಕರೆದು ಕೊಂಡು ಪಾಳ್ಯೆಯಂಕೋಟೆಗೆ ಹೊರಟೆ.

ಬಂಧಿತರಾದವರಲ್ಲಿ ಒಬ್ಬ ಕಳ್ಳ ಗುರಿ ನೋಡಿ ತುಪಾಕಿಯಿಂದ ಗುಂಡು ಹಾರಿಸು ವುದರಲ್ಲಿ ನಿಪುಣನಂತೆ. ಮತ್ತೊಬ್ಬ ಮನೆಗಳಿಗೆ ಕನ್ನಹಾಕುವುದರಲ್ಲಿ ಖ್ಯಾತನಂತೆ. ಇನ್ನೊಬ್ಬ ಎಷ್ಟೇ ಭಾರವಾದರೂ ಎತ್ತಿ ಓಡುವುದರಲ್ಲಿ ಗಟ್ಟಿಗನಂತೆ. ಈ ಮೂವರ ದರ್ಶನಭಾಗ್ಯವೂ ಅಲ್ಲಿಗೆ ಹೋದ ಮೇಲೆ ನಮಗೆ ಲಭಿಸಿತು.

ಆದರೆ ಇದರಲ್ಲಿ ಒಂದು ಆಶ್ಚರ್ಯವೆಂದರೆ, ನಾವು ಅಲ್ಲಿಗೆ ಹೋದಾಗ, ಈ ಮೂವರು ಕಳ್ಳರೂ ಡಾಕ್ಟರನ್ನು ನೋಡಿ ಅವರಿಗೆ ದೀರ್ಘವಾಗಿ ನಮಸ್ಕಾರ ಮಾಡಿ ದರು. ಡಾಕ್ಟರು ಇದನ್ನು ಲಕ್ಷ್ಯಕ್ಕೆ ತಂದುಕೊಳ್ಳಲಿಲ್ಲ. ಇಷ್ಟರ ವರೇಗೆ ಅವರು

ನಮ್ಮೊಂದಿಗಿದ್ದು ತಮ್ಮ ಮೌನವನ್ನು ತೊರೆದುದೇ ನಮ್ಮ ಭಾಗ್ಯ. ವಿಚಾರಣೆ ಮುಗಿದ ಕೂಡಲೇ ನಾವು ಕುಟ್ರಾಲಕ್ಕೆ ಹಿಂದಿರುಗಿದೆವು.

ನಾವು ಹಿಂದಿರುಗಿದ ಮೇಲೆ ಪೋಲೀಸಿನವರು ಆ ಕಳ್ಳರನ್ನು ಮೇಲ್ವಿಚಾರಿಸಿ ದ್ದಾರೆ.

"ಈ ಡಾಕ್ಟರು ಮೊದಲೆ ನಿಮಗೆ ಗೊತ್ತೊ?" ಎಂದು ಅವರನ್ನು ಕೇಳಲು ಇನ್ನಷ್ಟು ಸಂಗತಿಗಳು ಹೊರಬಿದ್ದಿವೆ. ಹಲವು ಸಂದರ್ಭಗಳಲ್ಲಿ, ಬೇರೆ ಬೇರೆ ಹೆಸರುಗಳಲ್ಲಿ, ಈ ಕಳ್ಳರು ಆಸ್ಪತ್ರೆಯಲ್ಲಿ ಚಿಕಿತ್ಸೆ ಪಡೆದಿದ್ದರು. ಅದರಲ್ಲಿ ಮುಖ್ಯವಾಗಿ ಹೇಳಬೇಕಾದ್ದು, ಕನ್ನ ನಿಪುಣ ಕಂದಸಾಮಿ, ಒಂದು ಸಲ ಮಹಡಿಯಿಂದ ಕೆಳಗೆ ಹಾರಿಬಿದ್ದು, ಕೈ ಮುರಿದ ಸ್ಥಿತಿಯಲ್ಲಿ ಆಸ್ಪತ್ರೆಗೆ ಬಂದು ಸೇರಿದ. ಅವನ ಕೈಯನ್ನು ಸರಿಪಡಿಸಿ ನಡೆಸಿದ ಹಿರಿಮೆ ಡಾಕ್ಟರ್ ಮುತ್ತುಕುಮಾರ್ ಸ್ವಾಮಿಗಳಿಗೇ ಸಂದಿದೆ. ಆ ಕೈಯೇ ಈಗ ಮತ್ತೆ ಕನ್ನ ಹಾಕಿದೆ. ತುಪಾಕಿ ಹಿಡಿದ ದೊರೆಸಾಮಿ ಹೇಗೆ? ಒಂದು ಸಂದರ್ಭದಲ್ಲಿ ಅವನ ಕಣ್ಣಿನ ಬಳಿ ಗಾಜು ಚುಚ್ಚಿತ್ತು. ಆಗ ಅವರು ಕಣ್ಣುಗಳನ್ನು ಕಳೆದುಕೊಳ್ಳದಂತೆ ಎಚ್ಚರ ವಹಿಸಿ ದವರು ಬೇರೆ ಯಾರೂ ಅಲ್ಲ. ನಮ್ಮ ಡಾಕ್ಟರೇ. ಓಟದ ಮುತ್ತು? ಮೂರನೆಯವನು? ಏನು ಬೇಜಾರಾಗಿತ್ತೊ? ತಿಗಣೆ ಸಾಯಿಸುವ ಔಷಧಿಯನ್ನು ಕುಡಿದಿದ್ದ ಅವನನ್ನೂ ಡಾಕ್ಟರು ರಕ್ಷಿಸಿದರು.

ಮತ್ತೆ ಕಣ್ಣನ್ನು ಪಡೆದ ದೊರೆಸ್ವಾಮಿ, ಈಗ, ಗುರಿಯಿಟ್ಟು ಗುಂಡು ಹಾರಿಸಿದ್ದಾನೆ. ಕೈ ಮುರಿದಿದ್ದ ಕಂದಸ್ವಾಮಿ ಅದೇ ಕೈಗಳಿಂದ ಮತ್ತೆ ಕನ್ನಹಾಕಿದ್ದಾನೆ. ಯಥಾಪ್ರಕಾರ ಇವರೆಲ್ಲ ಪೈಲ್ವಾನ್‌ಗಳೇ ಆಗಿದ್ದಾರೆ. ಈ ಮೂವರೂ ಸೇರಿ ಕದ್ದಿದ್ದ ಬೆಳ್ಳಿ ಪಾತ್ರೆಗಳು ನಮ್ಮ ಮನೆಯವು ಎಂದು ಗುರುತಿಸಿ ಹೇಳಿದ್ದು ಆಯಿತು.

ಸಿ ಐ ಡಿಗಳಿಂದ ಈ ಸುದ್ದಿ ಬಹಿರಂಗವಾದ ಮೇಲೆ, ಮಾರನೆಯ ದಿನ, ಡಾಕ್ಟರರು ಮದರಾಸಿಗೆ ಹೊರಟರು.

"ಯಾಕೆ ಡಾಕ್ಟರ್, ಹೀಗೆ ಹಠಾತ್ತನೆ ಹೊರಟಿರಿ?" ಎಂದು ನಾನು ಕೇಳಿದೆ.

"ಒಂದು ತಿಂಗಳಿಂದಲೂ ನಾನು ನನ್ನ ರೋಗಿಗಳನ್ನು ಮರೆತು ನಾನೇ ಒಂದು ವ್ಯಾಧಿಗೆ ಈಡಾಗಿದ್ದೆ. ಈಗ ನನ್ನ ಮನೋವ್ಯಾಧಿ ಗುಣವಾಗಿದೆ. ಇನ್ನು ಮುಂದೆ ನನ್ನ ರೋಗಿಗಳನ್ನು ನಾನು ಗಮನಿಸಿಕೊಳ್ಳಬೇಕು. ಎಷ್ಟು ಜನ ನನಗಾಗಿ ಮದರಾಸಿನಲ್ಲಿ ಕಾದಿದ್ದಾರೆಯೊ ಏನು ಕತೆಯೊ?"

"ನೀವು ಏನು ಹೇಳುತ್ತಿದ್ದೀರಿ?"

"ನರ್ತಕಿಯ ಕಾಲನ್ನು ಕತ್ತರಿಸಿದೆನೆಂದೂ ಚಿತ್ರಕಾರ, ವಿದ್ವಾಂಸ ಇವರಿಗೆ ಶಸ್ತ್ರ ಯಾಯಿತೆಂದೂ ಇದುವರೆಗೂ ನಾನು ಮನಸ್ಸಿನ ಹೋರಾಟದಲ್ಲಿ ತೊಡಗಿದ್ದೆ. ಆದರೆ ಈಗ ನನ್ನ ಭಾವನೆ ಏನಾಗಿದೆ ಗೊತ್ತೆ? ಕಷ್ಟಪಟ್ಟು ಒಬ್ಬನ ಕಣ್ಣುಗಳನ್ನು ಉಳಿ

·ಸಿದ್ದೇನೆ, ಕೈಕಾಲುಗಳನ್ನು ಮರಳಿ ಕೊಟ್ಟಿದ್ದೇನೆ. ಅವರು ಇದರಿಂದ ಬೇರೆ ಪ್ರಯೋಜನ ಪಡೆದರು, ನಿಜ. ಆದರೆ ಅದು ನನಗೆ ಸಂಬಂಧಿಸಿದ್ದಲ್ಲ. ಕತ್ತರಿಸಿ ಹಾಕಿದ್ದಂತೆ, ಜೀವ ತುಂಬುವ ಪ್ರಯತ್ನದಲ್ಲೂ ನಾನು ಯಶಸ್ವಿಯಾಗಿದ್ದೇನೆ ಅಲ್ಲವೆ?"

ಡಾಕ್ಟರ್ ಒಂದು ಕ್ಷಣ ನನ್ನನ್ನು ದಿಟ್ಟಿಸಿ ಮೇಲೆ ಮುಂದುವರಿಸಿದರು:

"ನನ್ನ ಕೆಲಸ ಶಸ್ತ್ರಚಿಕಿತ್ಸೆ ಮಾಡುವುದು. ಮುಂದಿನದನ್ನು ಕುರಿತು ನಾನು ಯೋಚಿಸಲೇ ಕೂಡದು. ನನ್ನ ಕರ್ತವ್ಯ ವೃತ್ತಿಯೊಂದಿಗೆ ಮುಗಿಯಿತು. ದೈವದ ಕೆಲಸ ವನ್ನೆಲ್ಲ ನಾನೇ ಮಾಡುತ್ತೇನೆ ಎಂದು ನಾನು ಭಾವಿಸುವುದು ಅಲ್ಪತನ. ಕಣ್ಣು, ಕೈಕಾಲು ಇವುಗಳನ್ನು ತೆಗೆಯುವುದೂ ಸೇರಿಸುವುದೂ ವೈದ್ಯಶಾಸ್ತ್ರದಲ್ಲಿ ಹೇಳುವ ಚಿಕಿತ್ಸಾ ವಿಧಾನ. ಇದರಲ್ಲಿ ಯಶಸ್ವಿಯಾಗುವುದು, ಆಗದೆ ಇರುವುದು, ಇದಕ್ಕೆ ನಾನು ಹೊಣೆ ಯಲ್ಲ. ಅದು ಅವರವರ ಹಣೆಬರಹ."

"ಹಣೆ ಬರಹವನ್ನು ಬದಲಾಯಿಸುವುದೆ ನಿಮ್ಮ ಕೆಲಸವೆಂದು ನೀವು...."

"ಇಲ್ಲ, ಹಾಗೆ ಒಂದು ಕಾಲದಲ್ಲಿ ನಾನು ಭಾವಿಸಿದ್ದೆ. ಅದು ತಪ್ಪು ತಿಳಿವಳಿಕೆ. ಹುಟ್ಟು, ಮರಣ, ವ್ಯಾಧಿ, ನಿವಾರಣೆ—ಇವುಗಳನ್ನೆಲ್ಲ ವೈದ್ಯ ವಿಧಾನದಿಂದ ಆಚೆ ನೋಡುತ್ತೇನೆನ್ನುವುದು ಮೂರ್ಖತನ. ದೇವರ ಕೆಲಸವನ್ನೆಲ್ಲ ವೈದ್ಯ ಪರಿಶೀಲಿಸು ವುದಕ್ಕೆಂದು ಹೊರಟರೆ ಆ ವೈದ್ಯನೆ ವ್ಯಾಧಿಗ್ರಸ್ಥನಾಗುತ್ತಾನೆ, ಅಷ್ಟೇ. ಮತ್ತೆ ಅದಕ್ಕೆ ಔಷಧವೇ ಇಲ್ಲ. ಬನ್ನಿ, ಜಲಪಾತದಲ್ಲಿ ನಾನು ಸ್ನಾನಮಾಡಿ ಬಂದು ಊರಿಗೆ ಹೊರಡಬೇಕು. ಮದರಾಸಿನಲ್ಲಿ ಎಷ್ಟೋ ಜನ ರೋಗಿಗಳು ನನಗಾಗಿ ಕಾದಿದ್ದಾರೆ. ನನ್ನ ಧರ್ಮ ಅವರ ಸೇವೆಗೇ ಮೀಸಲು."

ಹೀಗೆ ಹೇಳಿಕೊಂಡು ಡಾಕ್ಟರ್ ಮುತ್ತುಕುಮಾರ್‌ಸ್ವಾಮಿಗಳು ನದಿಯ ದಂಡೆ ಯಲ್ಲಿ ಹೆಜ್ಜೆ ಹಾಕತೊಡಗಿದರು.

# ಕತೆಗಾರರ ಪರಿಚಯ

**ಸಿ. ರಾಜಗೋಪಾಲಾಚಾರಿ (ರಾಜಾಜಿ): ದೇವಾನ್ನೈ:** ೧೮೭೮ರಲ್ಲಿ ಹೊಸೂರಿನಲ್ಲಿ ಜನನ. ೧೯೦೦ರಲ್ಲಿ ವಕೀಲರಾಗಿ ಸೇಲಂನಲ್ಲಿ ವೃತ್ತಿಗೆ ಪ್ರವೇಶ. ಅಸಹಕಾರ ಚಳವಳಿಯಲ್ಲಿ ಭಾಗವಹಿಸಿ, ವೃತ್ತಿಯನ್ನು ತೊರೆದು, ಗಾಂಧೀಜಿಯ ಬಲದ ಕೈಯಂತೆ ಸ್ವಾತಂತ್ರ್ಯ ಹೋರಾಟದಲ್ಲಿ ಮುಖ್ಯ ಪಾತ್ರ. ಹಲವು ಸಲ ಕಾರಾಗೃಹ ವಾಸ. ಮದರಾಸಿನ ಮುಖ್ಯ ಮಂತ್ರಿಯಾಗಿ ಎರಡು ಸಲ ನಾಡಿನ ಸೇವೆ. ಭಾರತದ ಗವರ್ನರ್ ಜನರಲ್ ಆಗಿಯೂ ನೇಮಕ. ಮಾತಿನಲ್ಲಿಯೂ ಬರವಣಿಗೆಯಲ್ಲಿಯೂ ಪ್ರಖ್ಯಾತರಾದವರು. ನೂರಕ್ಕೆ ಮಿಕ್ಕಿದ ಸಂಖ್ಯೆಯಿಂದ ಹಲವು ಪ್ರಕಾರಗಳಲ್ಲಿ ತಮಿಳಿನಲ್ಲಿಯೂ ಇಂಗ್ಲಿಷಿನಲ್ಲಿಯೂ ಅದ್ಭುತ ಸೃಷ್ಟಿ. ತಮಿಳು ಭಾಷೆಗೆ ರಾಜಾಜಿಯ ಸೇವೆ ಅಪಾರ.

**ಪುದುಮೈಪಿತ್ತನ್ (ಸೊ. ವೃದ್ಧಾಚಲಂ): ಶಾಪವಿಮೋಚನೆ:** ೧೯೦೬ರಲ್ಲಿ ಜನನ. ತಿರುನಿಲ್ವೇಲಿಯಲ್ಲಿ ಬಿ. ಎ. ಪದವೀಧರರಾದ ಮೇಲೆ, ಮದರಾಸಿನಲ್ಲಿ ಪತ್ರಿಕಾರಂಗಕ್ಕೆ ಪ್ರವೇಶಿಸಿ, ಪ್ರಖ್ಯಾತರಾದರು. ಇವರದು ಹರಿತವಾದ ಬರವಣಿಗೆ. ಮಣಿಕ್ಕೊಡಿ ಮತ್ತು ಇತರ ತಮಿಳು ಪತ್ರಿಕೆಗಳಲ್ಲಿ ಇವರ ಸಣ್ಣ ಕತೆಗಳೂ, ಲೇಖನಗಳೂ ಧಾರಾವಾಹಿಯಾಗಿ ಪ್ರಕಟವಾಗಿವೆ. ೧೯೪೮ರಲ್ಲಿ ಇವರು ನಿಧನ ಹೊಂದಿದರು.

**ಕು. ಪ. ರಾ. (ಕು. ಪ. ರಾಜಗೋಪಾಲ್): ಮಂದಪ್ರಕಾಶ:** ಜನನ ೧೯೦೯; ಮರಣ ೧೯೪೪. ತಮಿಳು ಮಾತ್ರವಲ್ಲದೆ ತೆಲುಗು, ಸಂಸ್ಕೃತ, ಇಂಗ್ಲಿಷ್, ಬಂಗಾಳಿ ಭಾಷೆಗಳಲ್ಲೂ ಪರಿಣತರು. ತಿರುಚಿರಾಪಳ್ಳಿಯ ದೇಶೀಯ ಕಾಲೇಜಿನಲ್ಲಿ ವಿದ್ಯಾಭ್ಯಾಸವನ್ನು ಮುಗಿಸಿ, ಸರಕಾರದ ಕೆಲಸಕ್ಕೆ ಸೇರಿದರು. ಅನಾರೋಗ್ಯದ ಕಾರಣ, ಕೆಲಸಕ್ಕೆ ರಾಜೀನಾಮೆಯಿತ್ತು ಬರಹವನ್ನೆ ವೃತ್ತಿಯಾಗಿ ಕೈಗೊಂಡರು. ತಮ್ಮದೇ ಆದ ಕಲ್ಪನಾಶಕ್ತಿಯಿಂದ ಓದುಗರ ಚಿತ್ತವನ್ನು ಸೆರೆ ಹಿಡಿದಿದ್ದ ಕು. ಪ. ರಾ. ಅವರ ಸಣ್ಣ ಕತೆಗಳು ರಂಜನೀಯವೂ ಬೋಧಪ್ರದವೂ ಆಗಿವೆ.

**ಬಿ. ಎಸ್. ರಾಮಯ್ಯ: ಹಣ ಬದುಕಿತು:** ೧೯೦೫ರಲ್ಲಿ ವತ್ತಲಗುಂಡಿಯಲ್ಲಿ ಜನನ. ಸಣ್ಣ ಕತೆಗಳು ಮಾತ್ರವಲ್ಲದೆ ನಾಟಕ ರಚನೆಯಲ್ಲಿಯೂ ಸಿದ್ಧಹಸ್ತರು. ಚಿತ್ರರಂಗದಲ್ಲಿಯೂ ಸಾಕಷ್ಟು ಸೇವೆ ಮಾಡಿದ್ದಾರೆ. ಮಣಿಕ್ಕೊಡಿ ಎನ್ನುವ ಸಾಹಿತ್ಯ ಪತ್ರಿಕೆಯ ಸಂಪಾದಕರಾಗಿದ್ದು ತಮ್ಮ ವಿಶಿಷ್ಟವಾದ ಕತೆಗಳ ಮೂಲಕವೂ ಇತರ ಲೇಖಕರಿಗೆ ಸಾಕಷ್ಟು ಉತ್ತೇಜನವಿತ್ತು ತಾಯ್ನುಡಿಗೆ ಅಪಾರ ಸೇವೆ ಸಲ್ಲಿಸಿದ್ದಾರೆ.

ಇವರ ಕಥೆಗಳು ಎಲ್ಲರ ಮೆಚ್ಚುಗೆಗೂ ಪ್ರಶಂಸೆಗೂ ಪಾತ್ರವಾಗಿದೆ. ಉನ್ನತ ಲಕ್ಷ್ಯದ ಮನೋಭಾವ. ಆ ಭಾವಕ್ಕೆ ತಕ್ಕಂತೆ ಬರವಣಿಗೆ.

**ಮೌನಿ: ಪ್ರಜ್ಞೆಯ ಹೊರಗೆ:** ೧೯೦೭ರಲ್ಲಿ ತಂಜಾವೂರಿನಲ್ಲಿ ಜನನ. ಮಣಿಕ್ಕೊಡಿ ಪತ್ರಿಕೆಯ ಮೂಲಕ ಇವರು ಓದುಗರಿಗೆ ಪರಿಚಿತರಾದರು. ೧೯೩೭ರ ಅವಧಿಯೊಳಗೆ ಇವರ ಸಣ್ಣ ಕಥೆಗಳು ಇವರಿಗೆ ಕೀರ್ತಿಯನ್ನು ತಂದುವು. ಹಿರಿಯ ಕಥೆಗಾರರೂ ಇವರ ಬರವಣಿಗೆಯನ್ನು ಮೆಚ್ಚಿದರು. ಜೀವನದ ಪರಿಕ್ಷಿತಗಳನ್ನು ಚಿತ್ರಿಸುವುದರಲ್ಲಿ ಮೌನಿ ಪ್ರಸಿದ್ಧರು.

**ತ. ನಾ. ಕುಮಾರಸ್ವಾಮಿ: ಉಂಗುರ:** ೧೯೦೭ರಲ್ಲಿ ತಂಡಲಂ ಗ್ರಾಮದಲ್ಲಿ ಜನನ. ಸಂಸ್ಕೃತ, ಬಂಗಾಳಿ, ಇಂಗ್ಲಿಷಿನಲ್ಲಿಯೂ ವಿಶೇಷ ಪಾಂಡಿತ್ಯವನ್ನು ಪಡೆದಿದ್ದರು. ಭಾಷಾಂತರ ಕಲೆಯಲ್ಲಿಯೂ ಪರಿಣತರು. ಮೂವತ್ತು ವರುಷಗಳ ಹಿಂದೆಯೆ ಆನಂದ ವಿಕಟನ್ ಪತ್ರಿಕೆಯಲ್ಲಿ ಇವರ ಕಥೆಗಳು ಪ್ರಕಟವಾಗಿ ಪ್ರಸಿದ್ಧಿಗೆ ಬಂದಿದ್ದುವು. ನವುರಾದ ಶೈಲಿಯೂ ಕಲಾದೃಷ್ಟಿಯೂ ಇವರ ಬರವಣಿಗೆಯಲ್ಲಿ ವಿಶೇಷ.

**ಪೂರನ್ (ಎಂ. ಪಿ. ಪೆರಿಯಸಾಮಿ ಪೂರನ್): ಅವು ಒಳ್ಳೆಯ ಮೃಗಗಳಲ್ಲ:** ೧೯೦೮ರಲ್ಲಿ ಈರೋಡಿಗೆ ಸಮೀಪವಾಗಿ ಒಂದು ಹಳ್ಳಿಯಲ್ಲಿ ಜನನ. ಹಲವು ವರ್ಷಗಳ ಕಾಲ ಶಾಲಾ ಉಪಾಧ್ಯಾಯರಾಗಿದ್ದು ಬಳಿಕ ತಮಿಳು ವಿಶ್ವಕೋಶದ ಸಂಪಾದಕರಾದರು. ಈಗ ಮಕ್ಕಳ ಸಾಹಿತ್ಯರಚನೆಯಲ್ಲಿ ತೊಡಗಿದ್ದಾರೆ. ನೂರಕ್ಕೆ ಮೇಲ್ಪಟ್ಟು ಕವಿತೆಗಳು, ಸಣ್ಣ ಕಥೆಗಳು. ಪ್ರಬಂಧ, ನಾಟಕ. ಶಿಶು ಸಾಹಿತ್ಯ—ಹೀಗೆ ಎಲ್ಲ ಪ್ರಕಾರಗಳಲ್ಲಿಯೂ ಇವರು ತಮ್ಮ ಪ್ರತಿಭೆಯನ್ನು ಬೆಳಗಿದ್ದಾರೆ. ಮನಸ್ಸಿನ ತುಮುಲಗಳನ್ನು, ಸಂವೇದನೆಯನ್ನು ಇವರ ಬರವಣಿಗೆಯಲ್ಲಿ ಗುರುತಿಸಬಹುದಾಗಿದೆ.

**ತಿ. ಜ. ರ. (ತಿ. ಜ. ರಂಗನಾಥನ್): ಪೆಟ್ಟಿಗೆ ಗಾಡಿ:** ೧೯೦೧ರಲ್ಲಿ ಜನನ. ೧೯೩೩ರಲ್ಲಿ ಉಪ್ಪುಸತ್ಯಾಗ್ರಹದಲ್ಲಿ ಭಾಗವಹಿಸಿ ಸೆರೆಮನೆ ಸೇರಿದರು. ಹಲವು ಪತ್ರಿಕೆಗಳಲ್ಲಿ ಕೆಲಸ ಮಾಡಿದ್ದಾರೆ. ಈವಾಗ 'ಮಂಜರಿ'ಯ ಸಂಪಾದಕರಾಗಿದ್ದಾರೆ. ಕಿರಿಯ ಲೇಖಕರನ್ನು ಬೆಳಕಿಗೆ ತರುವುದರಲ್ಲಿ ತುಂಬಾ ಆಸಕ್ತಿ. ವಿದ್ಯೆಯೂ ಸಂಶೋಧನೆಯೂ ಮಿಳಿತವಾಗಿರುವ ಶಾಂತ ಸ್ವಭಾವ. ಇವರ ಬರವಣಿಗೆಯಲ್ಲಿಯೂ ನಾವು ಆ ಅಂಶವನ್ನು ಗಮನಿಸಬಹುದಾಗಿದೆ.

**ತಿ. ಜಾನಕಿರಾಮನ್: ಬೆರಳು:** ೧೯೨೧ರಲ್ಲಿ ಜನನ. ಬಿ. ಎ. ಪದವೀಧರರಾದ ಮೇಲೆ ಹಲವು ವರ್ಷಗಳ ಕಾಲ ಶಿಕ್ಷಕರಾಗಿದ್ದರು. ಬಳಿಕ ದೆಹಲಿ ಆಕಾಶವಾಣಿ ಕೇಂದ್ರದಲ್ಲಿ ಸಹಾಯಕ ನಿರ್ದೇಶಕರಾಗಿದ್ದರು. ಸಣ್ಣ ಕಥೆಯ ರಚನೆಯಲ್ಲಿ ವಿಶೇಷ ಪರಿಶ್ರಮವನ್ನು ಪಡೆದವರು. ಹೃದಯವನ್ನು ಮುಟ್ಟುವ ಶೈಲಿ, ಪಾತ್ರ ನಿರ್ವಹಣೆ—ಇವುಗಳನ್ನು ಇವರ ಕಥೆಗಳಲ್ಲಿ ಕಾಣಬಹುದಾಗಿದೆ.

**ಆರ್. ವಿ. (ಆರ್. ವೆಂಕಟರಾಮನ್): ಅಪ್ಪ ಬೇಡ:** ೧೯೨೧ರಲ್ಲಿ ಜನನ. 'ಕಣ್ಣನ್' ಎನ್ನುವ ಮಕ್ಕಳ ಪತ್ರಿಕೆಯ ಸಂಪಾದಕರು. ಹಲವು ಕಾದಂಬರಿಗಳನ್ನೂ ಕಥೆಗಳನ್ನೂ ರಚಿಸಿ ಪ್ರಖ್ಯಾತರಾಗಿದ್ದಾರೆ. ಮಕ್ಕಳ ಸಾಹಿತ್ಯದಲ್ಲಿ ವಿಶೇಷ ಶ್ರದ್ಧೆ. ಬಾಳಿನ ಸುಖದುಃಖಗಳನ್ನೂ ಬರಹಗಳಲ್ಲಿ ಚಿತ್ರಿಸುವುದರಲ್ಲಿ ಸಮರ್ಥರು. ಉಲ್ಲಾಸದಿಂದಲೂ ವೇಗದಿಂದಲೂ ಕೂಡಿದ ಇವರ ಬರವಣಿಗೆ ಓದುಗನ ಚಿತ್ತವನ್ನು ಸೂರೆಗೊಳ್ಳುವಂತಿದೆ.

**ಎಲ್. ಎಸ್. ರಾಮಾಮೃತಂ: ಹಗಲು ಕನಸು:** ೧೯೧೬ರಲ್ಲಿ ಜನನ. ಸಣ್ಣ ವಯಸ್ಸಿನಲ್ಲಿಯೇ ತಮಿಳುನಲ್ಲಿಯೂ ಇಂಗ್ಲಿಷಿನಲ್ಲಿಯೂ ಬರೆಯಲು ಪ್ರಾರಂಭಿಸಿದರು. ಹಲವು ಸೊಗಸಾದ ಕಥೆಗಳ ಸೃಷ್ಟಿಯಿಂದ ಓದುಗರಿಗೆ ಪರಿಚಿತರಾದರು. ಪಂಜಾಬ್ ನೇಶನಲ್ ಬ್ಯಾಂಕಿನಲ್ಲಿ ಉದ್ಯೋಗ.

**ರಘುನಾಥನ್ (ತೊ. ಮು. ಚಿದಂಬರ ರಘುನಾಥನ್): ಕೆಸರಿನಲ್ಲಿ ಅರಳಿದ ಹೊಂದಾವರೆ:** ೧೯೨೩ರಲ್ಲಿ ತಿರುನೆಲ್ವೇಲಿ ಜಿಲ್ಲೆಯಲ್ಲಿ, ಹೆಸರಾಂತ ಚಿತ್ರಕಾರರಾದ ಮುತ್ತೈಯ ತೊಂಡೈಮಾನ್ ಅವರ ಕಿರಿಯ ಮಗನಾಗಿ ಜನಿಸಿದರು. ಬಾಲ್ಯದಲ್ಲಿಯೆ ಕವಿತಾ ರಚನೆ, ಕಥೆಗಳ ಸೃಷ್ಟಿ ಪ್ರಾರಂಭವಾಯಿತು. ಯಾವುದನ್ನೂ ಸ್ಪಷ್ಟವಾಗಿ ಹೇಳುವ ಸ್ವಭಾವ. ಪುದುಮೈಪಿತ್ತನ್‌ಗೆ ಆತ್ಮೀಯ

ರಾಗಿದ್ದ ರಘುನಾಥನ್ ಅವರ ಶೈಲಿಗೆ ಮನಸೋತದ್ದು ಸ್ವಾಭಾವಿಕ. ಈ ಅಂಶವನ್ನು ಇವರ ಕಥೆಗಳಲ್ಲಿಯೂ ನಾವು ಕಾಣಬಹುದು.

**ಟಿ. ಜಯಕಾಂತನ್: ಮೌನವೇ ಒಂದು ಭಾಷೆ:** ೧೯೩೪ರಲ್ಲಿ ಕಡಲೂರಿನಲ್ಲಿ ಜನನ. ಪ್ರಗತಿಶೀಲ ಲೇಖಕರು. ಚಿತ್ರರಂಗದಲ್ಲಿಯೂ ತುಂಬಾ ಖ್ಯಾತಿಯನ್ನು ಪಡೆದಿದ್ದಾರೆ. ಇನ್ನೂರಕ್ಕೂ ಮಿಗಿಲಾದ ಕಥೆಗಳನ್ನು ಬರೆದು ಜಯಕಾಂತನ್ ವಿಕ್ರಮವನ್ನೂ ಸ್ಥಾಪಿಸಿದ್ದಾರೆ. ಇವರು ಆರಿಸಿಕೊಳ್ಳುವ ವಸ್ತುವಿಲ್ಲ. ನವೀನ ಪ್ರಯೋಗಗಳಲ್ಲಿ ಇವರು ಸಿದ್ಧಹಸ್ತರು.

**ರಾಜಂ ಕೃಷ್ಣನ್: ಶಬ್ದಗಳು:** ತಿರುಚಿರಾಪಳ್ಳಿ ಜಿಲ್ಲೆಯಲ್ಲಿ ೧೯೨೪ರಲ್ಲಿ ಜನಿಸಿದ ಶ್ರೀಮತಿ ರಾಜಂ ಕೃಷ್ಣನ್, ಜಲಾಶಯ ಪ್ರದೇಶದಲ್ಲಿ, ನೀಲಗಿರಿ ಜಿಲ್ಲೆಯಲ್ಲಿ, ಹಲವು ವರ್ಷಗಳ ಕಾಲ ಉದ್ಯೋಗದಲ್ಲಿದ್ದ ತಮ್ಮ ಪತಿಯೊಂದಿಗೆ ಇದ್ದು, ಅಲ್ಲಿನ ಸ್ವಾರಸ್ಯವಾದ ಚಿತ್ರಣಗಳನ್ನು ತಮ್ಮ ಲೇಖನಿಗೆ ಅಳವಡಿಸಿಕೊಂಡಿದ್ದಾರೆ. ಕಾದಂಬರಿ, ಕಥಾಸಂಗ್ರಹ, ನಾಟಕಗಳ ಮೂಲಕ ಪ್ರಖ್ಯಾತರಾಗಿದ್ದಾರೆ. ಸುಮಾರು ಮೂವತ್ತು ವರ್ಷಗಳಿಂದಲೂ ಸಾಹಿತ್ಯಸೇವೆಯಲ್ಲಿ ತೊಡಗಿರುವ ರಾಜಂ ಕೃಷ್ಣನ್ ಸಣ್ಣ ಕಥೆಯ ರಚನೆಯಲ್ಲಿ ವಿಶೇಷ ಪರಿಶ್ರಮವನ್ನು ಹೊಂದಿದ್ದಾರೆ.

**ಜಿ. ಅಳಗಿರಿಸ್ವಾಮಿ: ಕುಮಾರಪುರಂ ನಿಲ್ದಾಣ:** ೧೯೨೧ರಲ್ಲಿ ತಿರುನೆಲ್ವೇಲಿ ಜಿಲ್ಲೆಯ ಇಡೈಸೇವಲ್ ಎನ್ನುವ ಗ್ರಾಮದಲ್ಲಿ ಜನನ. ೧೯೪೨ರಿಂದ ಬರವಣಿಗೆಯನ್ನು ಪ್ರಾರಂಭಿಸಿ, ಪತ್ರಿಕೆಯೊಂದರಲ್ಲಿ ಸಹಾಯಕ ಸಂಪಾದಕರಾಗಿ ಸೇರಿ, ಪ್ರಸಿದ್ಧರಾದರು. ಹತ್ತು ಕಥಾಸಂಗ್ರಹ, ಆರು ಪ್ರಬಂಧ ಸಂಕಲನ, ಎರಡು ನಾಟಕಗಳು, ಎರಡು ಮಕ್ಕಳ ಪುಸ್ತಕ—ಹೀಗೆ ಇವರ ಸಾಹಿತ್ಯ ಸೃಷ್ಟಿ ವಿವಿಧ ಪ್ರಕಾರಗಳಲ್ಲಿ ಶೋಭಿಸಿ ಸಂಶೋಧನೆಯ ಕಡೆಗೂ ಇವರು ತಮ್ಮ ಗಮನವನ್ನು ಹಾಯಿಸಿದ್ದಾರೆ. ಗಾಂಧೀತತ್ತ್ವದಲ್ಲಿ ಅಚಲ ನಂಬಿಕೆ. ಬೇರೆ ಭಾಷೆಯಿಂದ ಹಲವು ಕೃತಿಗಳನ್ನೂ ಅನುವಾದ ಮಾಡಿದ್ದಾರೆ. ಆಕಾಶವಾಣಿಯಲ್ಲಿಯೂ ಇವರ ಬರಹಗಳು ಸಾಕಷ್ಟು ಪ್ರಸಾರವಾಗಿದೆ.

**ನ. ಪಿಚ್ಚಮೂರ್ತಿ: ಹಿಂಬಾಲಿಸುವಿಕೆ:** ೧೯೦೦ರಲ್ಲಿ ಜನನ. ತಮ್ಮ ಮೂವತ್ತೊಂದು ವಯಸ್ಸಿನ ವರೆಗೆ ವಕೀಲರಾಗಿದ್ದರು. ಬಳಿಕ ಆ ಕ್ಷೇತ್ರವನ್ನು ತೊರೆದು ಪತ್ರಿಕಾರಂಗಕ್ಕೆ ಪ್ರವೇಶಿಸಿದರು. ಹಲವು ಅಮೂಲ್ಯ ಕಥೆಗಳ ಮೂಲಕ

ಬೆಳಕಿಗೆ ಬಂದರು. ಕನ್ನಡಿ ಹಿಡಿದ ಹಾಗೆ ಜೀವನದ ಪ್ರತಿಬಿಂಬವನ್ನು ಚಿತ್ರಿಸು ವುದರಲ್ಲಿ ಇವರು ಸಿದ್ಧಹಸ್ತರು.

**ಅಖಿಲನ್ (ಅಖಿಲಾಂಡಂ): ಮಳೆಗೆ ಆಶ್ರಯ ಪಡೆಯಲು ಹೋಗಿ:** ೧೯೨೩ರಲ್ಲಿ ಜನಿಸಿದ ಅಖಿಲನ್, ಸಣ್ಣ ವಯಸ್ಸಿನಲ್ಲಿಯೆ ಕಥೆ ಕಾದಂಬರಿಗಳ ಮೂಲಕ ಪ್ರಸಿದ್ಧಿಯನ್ನು ಪಡೆದು ತಮಿಳು ಓದುಗರ ಹೃದಯವನ್ನು ಸೂರೆ ಗೊಂಡರು. ಚಿತ್ರರಂಗದಲ್ಲಿಯೂ ಪ್ರವೇಶ. ಈಗ ಮದರಾಸು ಆಕಾಶವಾಣಿ ಕೇಂದ್ರದಲ್ಲಿದ್ದಾರೆ. ತಮಿಳು ಸಾಹಿತ್ಯದಲ್ಲಿ ಅಖಿಲನ್ ತುಂಬಾ ಕೀರ್ತಿಯನ್ನು ಗಳಿಸಿದ್ದಾರೆ. ನೂತನ ಶೈಲಿ, ಚಿತ್ತಾಕರ್ಷಕವಾದ ಕಥನ ಕಲೆ ಇವರ ಬರವಣಿಗೆಯ ವಿಶೇಷ.

**ಕಲ್ಕಿ (ರಾ. ಕೃಷ್ಣಮೂರ್ತಿ): ಧನಕೋಟಿಯ ಮನೋರಥ:** ೧೮೯೯ರಲ್ಲಿ ಜನನ; ೧೯೫೪ರಲ್ಲಿ ಮರಣ. ಅಸಂಖ್ಯಾತ ಕಥೆಗಳು, ಪ್ರಬಂಧ, ಕಾದಂಬರಿ, ರಾಜಕೀಯ ಲೇಖನಗಳು, ಹಾಡುಗಳು—ಹೀಗೆ ಎಲ್ಲ ಪ್ರಕಾರಗಳಲ್ಲಿಯೂ ಸಿದ್ಧಿಯನ್ನು ಪಡೆದು ಖ್ಯಾತರಾದವರು. ಕಲ್ಕಿ ಕೃಷ್ಣಮೂರ್ತಿ, ಆನಂದ ವಿಕಟನ್ ಪತ್ರಿಕೆಯಲ್ಲಿ ಉಪಸಂಪಾದಕರಾಗಿ ಕೆಲಸಕ್ಕೆ ಸೇರಿ, 'ಕಲ್ಕಿ' ಎಂದು ತಮ್ಮದೇ ವಾರಪತ್ರಿಕೆಯನ್ನು ಪ್ರಾರಂಭಿಸಿದರು. ತಮಿಳು ಸಾಹಿತ್ಯಕ್ಷೇತ್ರದಲ್ಲಿ ಸಾಮ್ರಾಟ ಎಂಬ ಬಿರುದನ್ನು ಗಳಿಸಿಕೊಂಡರು. ವಿಡಂಬನೆಗೆ ಇವರ ಬರವಣಿಗೆ ಪ್ರಸಿದ್ಧ.

**ನಾ. ಪಾರ್ಥಸಾರಥಿ: ಸತ್ಯಕ್ಕೂ ಒಂದು ನಿಮಿಷ:** ೧೯೩೨ರಲ್ಲಿ ರಾಮನಾಥ ಪುರಂ ಜಿಲ್ಲೆಯ ನಿಧಿಕ್ಕುಡಿ ಎನ್ನುವ ಗ್ರಾಮದಲ್ಲಿ ಜನನ. ತಮಿಳು ಪಂಡಿತರಾಗಿ ಹಲವು ಶಾಲೆಗಳಲ್ಲಿ ಕೆಲಸಮಾಡಿದರು. ಕೆಲವು ವರ್ಷಗಳ ಕಾಲ 'ಕಲ್ಕಿ' ಪತ್ರಿಕೆ ಯಲ್ಲಿದ್ದರು. ಈಗ 'ದೀಪಂ' ಎನ್ನುವ ಮಾಸಪತ್ರಿಕೆಯನ್ನು ತಾವೇ ನಡಿಸುತ್ತಿ ದ್ದಾರೆ. ಹಲವು ಕಥೆ ಕಾದಂಬರಿಗಳ ಮೂಲಕ ಪ್ರಸಿದ್ಧರಾಗಿದ್ದಾರೆ.

**ಸೋಮು (ಮೀ. ಪ. ಸೋಮಸುಂದರಂ): ಜಲಪಾತದ ದಂಡೆಯಲ್ಲಿ:** ೧೯೨೧ರಲ್ಲಿ ತಿರುನೆಲ್ವೇಲಿಯಲ್ಲಿ ಜನನ. ತಮಿಳು ಮಾತ್ರವಲ್ಲದೆ ಹಿಂದಿ, ಸಂಸ್ಕೃತ ಭಾಷೆಗಳಲ್ಲಿಯೂ ಪರಿಣತರು. ಕವಿತೆ, ಸಣ್ಣ ಕಥೆ, ಪ್ರಬಂಧ ರಚನೆ—ಹೀಗೆ ಎಲ್ಲ ಪ್ರಕಾರಗಳಲ್ಲಿಯೂ ಯಶಸ್ಸನ್ನು ಗಳಿಸಿರುವ ಸೋಮು, ಸಾಹಿತ್ಯ ಅಕಾಡಮಿ

ಪ್ರಶಸ್ತಿ ವಿಜೇತರು. ಕೆಲವು ವರ್ಷಗಳ ಕಾಲ 'ಕಲ್ಕಿ' ಪತ್ರಿಕೆಯ ಸಂಪಾದಕರಾಗಿದ್ದರು.

ಕಳೆದ ಮೂವತ್ತು ವರ್ಷಗಳಿಂದಲೂ ಧ್ವನಿಮುದ್ರಣ ಕಲೆಯಲ್ಲಿ ವಿಶೇಷ ಆಸಕ್ತಿಯನ್ನು ಸಂಬಂಧವನ್ನೂ ಹೊಂದಿದ್ದು, ಇದಕ್ಕಾಗಿ ಇಂಗ್ಲೆಂಡಿನಲ್ಲಿಯೂ ತರಬೇತಿಯನ್ನು ಪಡೆದಿದ್ದಾರೆ. ಈಗ ಸೋಮು, ಆಕಾಶವಾಣಿಯಲ್ಲಿ ಮುಖ್ಯ ಅಧಿಕಾರಿಗಳಾಗಿದ್ದಾರೆ.

Printed at Taj Printer, 69 Najafgarh Road Industrial Area, New Delhi